ಮಿಂಚಿನ ಬಳ್ಳಿಯ ೫ನೆಯ ವರುಷದ ೩ನೆಯ ಕುಡಿ

# ಸಮಾಜ-ವಿಕಾಸಕ್ರಮ

ಬರೆದವರು
ಸೆಗಳೂರ ಶ್ರೀನಿವಾಸ
ಎಂ. ಎ, ಬಿ ಟಿ.



ಚಾಲುಕ್ಯ ವಿಕ್ರಮ ವರುಷ ೮೬೭
ಕಾರ್ತೀಕ ಪೌರ್ಣಿಮೆ



ಅಕ್ಟೋಬರ ೧೯೪೨ ಬೆಲೆ: ೧ ರೂ. ೪ ಆ.

ಮಿಂಚಿನ ಬಳ್ಳಿಯ ೫ನೆಯ ವರುಷದ ೪ನೆಯ ಕುಡಿಯು

# ಮುಂದಿನ ಕುಡಿಯು
# ಮಾರ್ಚ ತಿಂಗಳಿನಲ್ಲಿ ಸಕಾಲಕ್ಕೆ
# ಪ್ರಕಟವಾಗುವದು



ವ್ಯವಸ್ಥಾಪಕ,
ಮಿಂಚಿನಬಳ್ಳಿ, ಧಾರವಾಡ

ಪ್ರಕಾಶಕರು:
**ಬಿ. ಜಿ. ಅವಧಾನಿ**
ಮಿಂಚಿನ ಬಳ್ಳಿಯ ಚಾವಡಿ
ಧಾರವಾಡ

ಮುದ್ರಕರು:
**ಕೆ. ಜಿ. ರಾಯದುರ್ಗ**
ಮೋಹನ ಮುದ್ರಣಾಲಯ,
ಧಾರವಾಡ





ಶ್ರೀ

ಈ 'ಸಮಾಜ-ವಿಕಾಸ'ವೆಂಬ ಗ್ರಂಥವನ್ನು ಬರೆದುಕೊಟ್ಟುದಕ್ಕಾಗಿ ಶ್ರೀ. ನೆಗಳೂರ ಶ್ರೀನಿವಾಸರಾಯರಿಗೂ, ಮುನ್ನುಡಿಯನ್ನು ಬರೆದು ಕೊಟ್ಟುದಕ್ಕಾಗಿ ಶ್ರೀ. ಶಂ. ಬಾ. ಜೋಶಿಯವರಿಗೂ ನಾವು ಎಂದಿಗೂ ಕೃತಜ್ಞರಾಗಿದ್ದೇವೆ.

ಸಂಚಾಲಕ,
**ಮಿಂ. ಬ. ಧಾರವಾಡ**

# ಅರ್ಪಣ

'ಮಾನವಸಮಾಜದ
ಹಿರಿಮೆಯನ್ನು ಮಾನವನೇ
ತನ್ನ ಮಹತ್ತರ ಶಕ್ತಿಯಿಂದ ಬೆಳಗಬಲ್ಲನು'
ಎಂಬ ಮಾತನ್ನು ಆತ್ಮಸಾಕ್ಷಾತ್ಕಾರದಿಂದ ದಿನವೂ ತೋರಿಸಿ
ಅಖಿಲ ಮಾನವಸಮಾಜದ ಸುಖಶಾಂತಿ
ಸಾಧನೆಗಾಗಿ ಹೋರಾಡುತ್ತಿರುವ
ಸಮಾಜದೇವತೆಯಂತಿರುವ
ಶ್ರೇಷ್ಠ ಸಂಬಂಧಿ

ಮಹಾತ್ಮಾ ಗಾಂಧೀಜಿಯವರ

ಅಡಿಗಳಿಗೆ ನನ್ನ ಈ
ಪುಷ್ಪಾಂಜಲಿ

# ಪರಿವಿಡಿ



# ಕಿವಿಮಾತುಗಳು

'ಸಮಾಜ-ವಿಕಾಸಕ್ರಮ'ವು ಸ್ವಯಂಸ್ಫೂರ್ತಿಯಿಂದಾಗಲಿ, ಸ್ವಪ್ರಯತ್ನದಿಂದಾಗಲಿ ಬರೆದ ಸ್ವತಂತ್ರ ಪುಸ್ತಕವಲ್ಲ. ಸಮಾಜ-ಸಂಸ್ಕೃತಿಗಳು ಬೆಳೆದು ಬಾಳಿದ ರೀತಿಯನ್ನು ವಿವರಿಸುವ ಪುಸ್ತಕಗಳ ಅಭಾವವು ಕನ್ನಡ ನಾಡಿನಲ್ಲಿ ವಿಶೇಷವಾಗಿದೆ ಎಂದು ಹೇಳಬಹುದು. ಆದುದರಿಂದ ಈ ಕೊರತೆಯನ್ನು ಹೋಗಲಾಡಿಸುವಂತೆ ಒಂದು ಪುಸ್ತಕವನ್ನು ಬರೆಯಬೇಕೆಂದೂ, ಅದಕ್ಕೆ ಸಹಾಯಕಾರಿಯಾಗುವಂತೆ ಆಂಗ್ಲಭಾಷೆಯಲ್ಲಿರುವ ಒಂದೆರಡು ಪುಸ್ತಕಗಳನ್ನು ಓದಬೇಕೆಂದೂ, ಒಬ್ಬ ಮಹನೀಯರು ನನಗೆ ಸೂಚಿಸಿದರು. ಆ ಮೇರೆಗೆ ಕೆಲವೊಂದು ಪುಸ್ತಕಗಳನ್ನೋದಿ ಅವುಗಳ ಆಧಾರದಿಂದ ಈ ಸಣ್ಣ ಪುಸ್ತಕವನ್ನು ಬರೆದು 'ಮಿಂಚಿನಬಳ್ಳಿ'ಯ ಒಂದು ಹೂವನ್ನಾಗಿ ಕನ್ನಡಿಗರ ಕೈಯಲ್ಲಿಡುವ ಎದೆಗಾರಿಕೆಯನ್ನು ಮಾಡಿದ್ದೇನೆ.

ಮಾನವಸಂಸ್ಕೃತಿ ಅವ್ಯಾಹತವಾಗಿ ಕಾಲಾಂತರದಿಂದ ಹರಿದು ಬಂದಿರುವ, ಇನ್ನೂ ಅಬಾಧಿತವಾಗಿ ಹರಿಯುತ್ತಿರುವ ಮಹಾಪ್ರವಾಹವೆಂಬುದನ್ನು ಈ ಪುಸ್ತಕದಲ್ಲಿ ವಿವೇಚಿಸಿದ ಕೆಲವೊಂದು ಮಾತುಗಳಿಂದ ಕಂಡುಕೊಳ್ಳಬಹುದು. ಮಾನವಸಮಾಜವು ಲಕ್ಷಾಂತರ ವರುಷಗಳ ಹಿಂದೆ ತುಂಬಾ ಒರಟಾಗಿದ್ದು, ಕ್ರಮೇಣ ಪ್ರಗತಿಪರ ಧರ್ಮವನ್ನನುಸರಿಸಿ ವೃದ್ಧಿಯನ್ನು ಪಡೆಯುತ್ತ ಬಂದಿದೆ ಎಂಬುದು ಸ್ಪಷ್ಟವಾಗುವಂತಿದೆ. ಎಲ್ಲ ಜೀವಿಗಳು ವಿಧವಿಧವಾಗಿ ಯತ್ನಿಸಿದರೆ ಮಾನವಸಮಾಜವು ಸಂಸ್ಕೃತಿಯ ಮೇಲ್ಮೆಟ್ಟಿಲುಗಳನ್ನೇರಿ ಪರಿಪೂರ್ಣಾವಸ್ಥೆಯ ಉನ್ನತ ಶಿಖರವನ್ನೇರುವದು ಎಂಬ ಆಸೆ ಅಂಕುರಿಸುವಂತಿದೆ. 'ನಮ್ಮ ಪೂರ್ವಜರ ಕಾಲ ಕೃತಯುಗ, ನಮ್ಮದು ಕಲಿಯುಗ; ನಾವು ಅಧೋಗತಿಗಿಳಿಯುತ್ತಿದ್ದುದೇ ಖಂಡಿತ' ಎಂಬ ನಿರಾಶಾವಾದಿಗಳಲ್ಲಿ 'ಮಾನವಸಮಾಜ—ಸಂಸ್ಕೃತಿಗಳು ಹಿಂದೆ ಎಂದೂ ಪರಿಪೂರ್ಣಾವಸ್ಥೆಯನ್ನು ಹೊಂದಿರಲಿಲ್ಲ, ಇನ್ನೂ ಹೊಂದುವದರಲ್ಲಿವೆ. ಕೃತಯುಗವನ್ನಾಗಲಿ, ಸುವರ್ಣಯುಗವನ್ನಾಗಲಿ, ಮಾನವನು ತನ್ನ ಒಳ್ಳೇ ಕೃತಿಗಳಿಂದ ಇನ್ನೂ ನಿರ್ಮಿಸಿಕೊಳ್ಳಬಲ್ಲ. ಇಹಲೋಕದಲ್ಲಿಯೇ ಸ್ವರ್ಗಸುಖವನ್ನು ಸಾಧಿಸಿಕೊಳ್ಳುವ ಶಕ್ತಿ ಮಾನವನಿಗಿದೆ' ಎಂಬ ಆಸೆಯನ್ನು ಹುಟ್ಟಿಸಿ ಎಲ್ಲರೂ ಸ್ವಕರ್ಮನಿರತರಾಗಲು ಸಮಾಜ-ವಿಕಾಸಕ್ರಮವು

# ಕಿರುಮಾತುಗಳು

'ಸಮಾಜ-ವಿಕಾಸಕ್ರಮ' ವು ಸ್ವಯಂಸ್ಫೂರ್ತಿಯಿಂದಾಗಲಿ, ಸ್ವಪ್ರಯತ್ನದಿಂದಾಗಲಿ ಬರೆದ ಸ್ವತಂತ್ರ ಪುಸ್ತಕವಲ್ಲ. ಸಮಾಜ-ಸಂಸ್ಕೃತಿಗಳು ಬೆಳೆದು ಬಾಳಿದ ರೀತಿಯನ್ನು ವಿವರಿಸುವ ಪುಸ್ತಕಗಳ ಅಭಾವವು ಕನ್ನಡ ನಾಡಿನಲ್ಲಿ ವಿಶೇಷವಾಗಿದೆ ಎಂದು ತೋರಬರುವುದು. ಆದುದರಿಂದ ಈ ಕೊರತೆಯನ್ನು ಹೋಗಲಾಡಿಸುವಂತೆ ಒಂದು ಪುಸ್ತಕವನ್ನು ಬರೆಯಬೇಕೆಂದೂ, ಅದಕ್ಕೆ ಸಹಾಯಕಾರಿಯಾಗುವಂತೆ ಆಂಗ್ಲಭಾಷೆಯಲ್ಲಿರುವ ಒಂದೆರಡು ಪುಸ್ತಕಗಳನ್ನು ಓದಬೇಕೆಂದೂ, ಒಬ್ಬ ಮಹನೀಯರು ನನಗೆ ಸೂಚಿಸಿದರು. ಆ ಮೇರೆಗೆ ಕೆಲವೊಂದು ಪುಸ್ತಕಗಳನ್ನೋದಿ ಅವುಗಳ ಆಧಾರದಿಂದ ಈ ಸಣ್ಣ ಪುಸ್ತಕವನ್ನು ಬರೆದು 'ಮಿಂಚಿನಬಳ್ಳಿ' ಯ ಒಂದು ಹೂವನ್ನಾಗಿ ಕನ್ನಡಿಗರ ಕೈಯಲ್ಲಿಡುವ ಎದೆಗಾರಿಕೆಯನ್ನು ಮಾಡಿದ್ದೇನೆ.

ಮಾನವಸಂಸ್ಕೃತಿ ಅವ್ಯಾಹತವಾಗಿ ಕಾಲಾಂತರದಿಂದ ಹರಿದು ಬಂದಿರುವ, ಇನ್ನೂ ಅಬಾಧಿತವಾಗಿ ಹರಿಯುತ್ತಿರುವ ಮಹಾಪ್ರವಾಹವೆಂಬುದನ್ನು ಈ ಪುಸ್ತಕದಲ್ಲಿ ವಿವೇಚಿಸಿದ ಕೆಲವೊಂದು ಮಾತುಗಳಿಂದ ಕಂಡುಕೊಳ್ಳಬಹುದು. ಮಾನವಸಮಾಜವು ಲಕ್ಷಾಂತರ ವರುಷಗಳ ಹಿಂದೆ ತುಂಬಾ ಒರಟಾಗಿದ್ದು, ಕ್ರಮೇಣ ಪ್ರಗತಿಪರ ಧರ್ಮವನ್ನನುಸರಿಸಿ ವೃದ್ಧಿಯನ್ನು ಪಡೆಯುತ್ತ ಬಂದಿದೆ ಎಂಬುದು ಸ್ಪಷ್ಟವಾಗುವಂತಿದೆ. ಇಲ್ಲಿ ಜೀವಿಗಳು ವಿಧವಿಧವಾಗಿ ಯತ್ನಿಸಿದರೆ ಮಾನವಸಮಾಜವು ಸಂಸ್ಕೃತಿಯ ಮೇಲ್ಮೆಟ್ಟಿಲುಗಳನ್ನೇರಿ ಪರಿಪೂರ್ಣಾವಸ್ಥೆಯ ಉನ್ನತ ಶಿಖರವನ್ನೇರುವದು ಎಂಬ ಆಸೆ ಅಂಕುರಿಸುವಂತಿದೆ. 'ನಮ್ಮ ಪೂರ್ವಜರ ಕಾಲ ಕೃತಯುಗ, ನಮ್ಮದು ಕಲಿಯುಗ; ನಾವು ಅಧೋಗತಿಗಿಳಿಯುತ್ತಿದ್ದೇವೆ ಖಂಡಿತ' ಎಂಬ ನಿರಾಶಾವಾದಿಗಳಲ್ಲಿ 'ಮಾನವಸಮಾಜ—ಸಂಸ್ಕೃತಿಗಳು ಹಿಂದೆ ಎಂದೂ ಪರಿಪೂರ್ಣಾವಸ್ಥೆಯನ್ನು ಹೊಂದಿರಲಿಲ್ಲ, ಇನ್ನೂ ಹೊಂದುವದರಲ್ಲಿವೆ. ಕೃತಯುಗವನ್ನಾಗಲಿ, ಸುವರ್ಣಯುಗವನ್ನಾಗಲಿ, ಮಾನವನು ತನ್ನ ಒಳ್ಳೇ ಕೃತಿಗಳಿಂದ ಇನ್ನೂ ನಿರ್ಮಿಸಿಕೊಳ್ಳಬಲ್ಲ. ಇಹಲೋಕದಲ್ಲಿಯೇ ಸ್ವರ್ಗಸುಖವನ್ನು ಸಾಧಿಸಿಕೊಳ್ಳುವ ಶಕ್ತಿ ಮಾನವನಿಗಿದೆ' ಎಂಬ ಆಸೆಯನ್ನು ಹುಟ್ಟಿಸಿ ಎಲ್ಲರೂ ಸ್ವಕರ್ಮನಿರತರಾಗಲು ಸಮಾಜ-ವಿಕಾಸಕ್ರಮವು

ಸಹಾಯಕಾರಿಯಾಗಬಲ್ಲದು. ಸಿರಾಶೆಯಲ್ಲಿ ಮುಳುಗಿ ಕರ್ಮಬಾಹಿರರಾಗಿ ಕನಸಿನಲ್ಲಿ ಕಾಲಕಳೆಯುತ್ತಿರುವ ಕೆಲವೊಂದು ಕನ್ನಡಿಗರನ್ನಾದರೂ 'ಸಂಸ್ಕೃತಿಯ ಅಭಿವೃದ್ಧಿ ನಮ್ಮ ಕೈಯಲ್ಲಿದೆ' ಎಂದು ಜಾಗ್ರತಗೊಳಿಸಲು ತುಸು ಮಟ್ಟಿಗಾದರೂ ಈ ಪುಸ್ತಕವು ಸಹಾಯಕಾರಿಯಾದರೆ ಲೇಖಕನ ಪ್ರಯತ್ನ ಫಲಕಾರಿಯಾದಂತೆ. ಈ ಕಿರಿಹೊತ್ತಿಗೆಯಲ್ಲಿ ವಿಷಯ ವಿವೇಚನೆ ಪರಿಪೂರ್ಣವಾಗಿಲ್ಲ, ಅನೇಕ ಕುಂದುಕೊರತೆಗಳಿವೆ ಎಂಬುದನ್ನು ತುಂಬಾ ಬಲ್ಲೆ. ಅವೆಲ್ಲವುಗಳನ್ನೂ ತುಂಬಿಕೊಂಡು ಬರುವಂತೆ, ಇನ್ನೂ ಹೆಚ್ಚು ಉಪಯುಕ್ತವಾಗುವಂತೆ, ಹೆಚ್ಚು ಬುದ್ಧಿವಂತರು ಅನೇಕ ಪುಸ್ತಕಗಳನ್ನು ಈ ವಿಷಯವಾಗಿ ಬರೆದು ಕನ್ನಡಿಗರಿಗೆ ಉಪಕಾರ ಮಾಡಲೆಂಬ ಹಾರೈಕೆ ನನ್ನದು.

ಇದನ್ನು ಬರೆಯಲು ಉಪಯುಕ್ತವಾದ ಅನೇಕ ಗ್ರಂಥಗಳಲ್ಲಿ, 'ಮೂಲರ ಲಾಯರ'ನ 'History of Social Development', 'ಜಾನ್ ಕಾವ್‌ಪರ ಪಾವಿಸ್' ಎಂಬಾತನ 'The Meaning of Culture', 'ಡಾರ್ವಿನ್'ನ 'Natural Selection' 'ಆಡ್‌ಮ್ಸ ಬ್ರುಕ್ಸ'ನ 'The Law of Civilization and Decay', 'ಟಾಲ್‌ಸ್ಟಾಯ್'ನ 'Essays on Religion' ಮುಂತಾದವು ಮುಖ್ಯವಾಗಿವೆ. ಇವುಗಳಲ್ಲಿ 'ಮೂಲರ ಲಾಯರ'ನ 'History of Social Development' ಎಂಬುದು ಅತ್ಯುತ್ತಮ ಗ್ರಂಥವಾದುದರಿಂದ ಅದನ್ನೇ ವಿಶೇಷವಾಗಿ ಅನುಸರಿಸಿದ್ದೇನೆ. ಈ ಎಲ್ಲ ಗ್ರಂಥಕರ್ತರಿಂದ ನಾನು ಅತ್ಯಂತ ಉಪಕೃತನಾಗಿದ್ದೇನೆ.

ಇದನ್ನು ಬರೆಯುವುದಕ್ಕಾಗಿ ಪ್ರೋತ್ಸಾಹ, ಸಹಾಯ-ಸೌಕರ್ಯ-ಸಲಹೆಗಳನ್ನಿತ್ತು, ಇದಕ್ಕೆ ಮುನ್ನುಡಿಯನ್ನು ಬರೆದು ಉಪಕಾರ ಮಾಡಿದ ಹಿರಿಗನ್ನಡಿಗರಾದ ಶ್ರೀಮಾನ್ ಜೋಶಿ ಶಂಕರರಾಯರಿಗೂ, ಇದನ್ನು ಮುದ್ರಿಸಿ ಕನ್ನಡಿಗರ ಮುಂದಿರಿಸಲು ಇಂಬುಕೊಟ್ಟ 'ಮಿಂಚಿನ ಬಳ್ಳಿ'ಯ ಸಂಚಾಲಕರಿಗೂ ನನ್ನ ಅನಂತ ಪ್ರಣಾಮಗಳು.

ನೆಗಳೂರ ಶ್ರೀನಿವಾಸ

# ಮುನ್ನುಡಿ

ವ್ಯಕ್ತಿಗಳಿಲ್ಲದೆ ಸಮಾಜವಾಗಲಾರದು, ಸಮಾಜವಿಲ್ಲದೆ ವ್ಯಕ್ತಿ ಬದು-
ಕಲಾರದು. ಆದುದರಿಂದ ಈ ಲೋಕದಲ್ಲಿ ನೆಮ್ಮದಿಯಿಂದ ಮನ್ನಣೆವೆತ್ತು
ಬಾಳಿ ಬದುಕಬೇಕೆಂಬುವವನು ತನ್ನ ಸಮಾಜದ ವಿಕಾಸಕ್ಕೆ ನೆರವಾಗು-
ವುದು ಕರ್ತವ್ಯವೇ ಆಗಿದೆ. ಸಮಾಜವು ತನ್ನ ಏಳ್ಗೆ ಮತ್ತು ಬೆಳಿಗೆಯಾಗ
ಬೇಕಾಗಿದ್ದರೆ ಅದರೊಳಗಿನ ವ್ಯಕ್ತಿಗಳು ಉದಾತ್ತ ಸಂಸ್ಕೃತಿಯವರೂ, ಸ್ವ-
ಕರ್ತವ್ಯ ತತ್ಪರರೂ ಆಗುವುದಕ್ಕೆ ಯಾವ ಅಡೆತಡೆಗಳೂ ಇಲ್ಲದ ಅವಶ್ಯಕ
ವಾದ ವಾತಾವರಣವನ್ನು ಕಲ್ಪಿಸಿಕೊಡುವುದು ಮೊದಲ ಕೆಲಸವಾಗಿದೆ.
ವ್ಯಕ್ತಿ ವಿಕಾಸಕ್ಕೆ ಇಂಬುಗೊಡದ ಸಮಾಜವು ಸಮಾಜವಲ್ಲ, ಅದೊಂದು
ಯಂತ್ರ; ರಾಕ್ಷಸೀ ಮಹತ್ವಾಕಾಂಕ್ಷೆಯನ್ನು ಸಾಧಿಸುವ ಒಂದು ತಂತ್ರ. ತನ್ನ
ಆಚಾರ ವಿಚಾರಗಳಲ್ಲಿ 'ಸಮಾಜ' ಎಂಬುದಕ್ಕೆ ಸ್ಥಾನಮಾನಗಳನ್ನೇ
ಕೊಡದಿರುವ ವ್ಯಕ್ತಿಸಮುದಾಯವು ಸಮಾಜವೆಂಬ ಹೆಸರಿಗೇ ಅನರ್ಹ
ವಾಗಿದೆ; ಅದು ಸಮಾಜವಲ್ಲ; ಸಂತೆ; ಜನಜಂಗುಳಿ.

ಮಾನವನ ಹಿರಿಮೆಯು ಆತನ ಮನಃಶಕ್ತಿಯಲ್ಲಿ, ಎಂದು ಹೇಳುವು-
ದುಂಟು. ಇದು ಸುಳ್ಳು ಅಲ್ಲ. ಆದರೆ ಮಾನವನು 'ಸಮಾಜ' ಎಂಬು-
ದನ್ನು ನೇರ್ಪಡಿಸಿಕೊಂಡಿರದಿದ್ದರೆ ಆ ಮನಃಶಕ್ತಿಯೂ ಹುರಳಿಲ್ಲದ್ದಾಗದೆ
ಇರುತ್ತಿದ್ದಿಲ್ಲ. ಆದುದರಿಂದ ಸಮಾಜವೇ ಮಾನವನ ಶಕ್ತಿಯ ಉಗಮ
ಸ್ಥಾನವು; ಆತನ ಶಕ್ತಿಸಾಮರ್ಥ್ಯಗಳ ಅಡಿಗಲ್ಲು ಎಂದು ಹೇಳಿದರೆ ತಪ್ಪಾ-
ಗದು. ಆದುದರಿಂದ ಈ ಲೋಕದಲ್ಲಿ ಹಿರಿಮೆ, ಹೆಗ್ಗಳಿಕೆಗಳನ್ನು ಹಾರೈಸುವ
ಪ್ರತಿಯೊಂದು ನಾಡಿನವರೂ, ತಮ್ಮ ನಾಡಿಗರ ಒಂದು ಸುಸಂಘಟಿತವಾದ
ಸಮಾಜವು ಅಸ್ತಿತ್ವದಲ್ಲಿ ಬರುವಂತೆ ತಮ್ಮ ನಡೆನುಡಿಗಳನ್ನು ಮಾರ್ಪಡಿಸಿ
ಕೊಳ್ಳುವುದು ಕರ್ತವ್ಯವಾಗಿದೆ.

ಮನುಷ್ಯನು ಮೂಲತಃ ಅಹಂಕಾರಿ; ಹಮ್ಮು-ಬಿಮ್ಮಿನವ. ತನ್ನ
ಸರಿಸಮಾನರಾರೂ ಇಲ್ಲ, ಕರ್ತೃತ್ವಶಾಲಿಯೆಂದರೆ ತಾನೇ ಎಂದು ಕೊಚ್ಚಿ

ಕೊಳ್ಳುವ ಪ್ರವೃತ್ತಿಯದು. ತಲೆಗೆ ತಾಗಿ, ಬಾಗುವ ಪ್ರಸಂಗಗಳು ಬಂದ
ಪ್ರಮಾಣದಲ್ಲಿ ಈ ದುರ್ದಮ್ಯ ಪ್ರವೃತ್ತಿಯು ಮಾನವನಲ್ಲಿ ಕೆಲಮಟ್ಟಿಗೆ
ಕಡಿಮೆಯಾದಂತೆ ಕಾಣಿಸಿಕೊಳ್ಳುತ್ತದೆ; ಹೊತ್ತು ಬಂದಂತೆ ಬೇರೆ ವೇಷ
ತಾಳಿ, ಮತ್ತೆ ತಲೆಯೆತ್ತಿ ಮೆರೆಯಲಾರಂಭಿಸುತ್ತದೆ. ಕುಟುಂಬಗಳು,
ಸಂಘ-ಸಂಸ್ಥೆಗಳು, ಸಮಾಜಗಳು, ಒಡೆಯುವುದಕ್ಕೂ, ಹಾಳಾಗುವು
ದಕ್ಕೂ ಹಮ್ಮು ಇದುವೆ ಕಾರಣ. ತಿಳಿಗೇಡಿಗಳ ಈ ಹಮ್ಮು, ಬಿಂಕದ
ಬಿಮ್ಮು ಸಂಘ-ಸಮಾಜಗಳ ಹಗೆ. ತಿಳಿಗೇಡಿ ಹಮ್ಮು ಹಾಸಿಗೆ ಕಾರಣ
ವಾಗುವಂತೆ, ತಿಳಿವಿನಿಂದ ತಿಳಿಯಾದ ಹಮ್ಮು ಏಳ್ಗೆಯನ್ನೂ ತರಬಲ್ಲದು.
'ತಾನೇ ಒಬ್ಬ' ಎಂಬ ಪ್ರಾಥಮಿಕ ಸ್ಥಿತಿಯೊಳಗಿನ ಹಮ್ಮು, ಒಂದು
ಕುಟುಂಬವೇ ತಾನು, ತನ್ನ ನಾಡೇ ತಾನು ಎಂಬ ಉದಾತ್ತ ರೂಪವನ್ನು
ತಾಳಿದರೆ—ಪ್ರಕೃತಿಯು ಸಂಸ್ಕೃತಿಯಾದರೆ ಆಗಲೆ ಕಹಿಯು ಸಿಹಿಯಾಗು
ವುದು; ವಿಷವು ಅಮೃತವಾಗುವುದು.

ವ್ಯಕ್ತಿನಿಷ್ಠ ಮಾನವನು ಸಾಮಾಜಿಕನಾಗಲು ಇಷ್ಟಪಟ್ಟುದು ಕೇವಲ
ಉದಾತ್ತ ಹೇತುವಿನಿಂದಲೇ ಅಲ್ಲ; ಪರಿಸ್ಥಿತಿಯ ಒತ್ತಾಯದಿಂದ. ತತ್ತಿ
ಗಳನ್ನು ಕಾಯ್ದು ಮರಿಮಾಡಿ ಜೋಪಾನ ಮಾಡಲೂ ಮನಸಿಲ್ಲದ ಕೋಗಿಲೆ
ವಸಂತನ ಒತ್ತಾಯದಿಂದ ಸಂಗ-ಸುಖಕ್ಕಾಗಿ ಇಷ್ಟಪಟ್ಟು ಕಾತರಗೊಂಡು
ಕೂಗಲಾರಂಭಿಸುತ್ತದೆ. ಇದರಂತೆ ಮೊದಲು ಮೂಗಿನೆದುರು ನೇರವಾಗಿ
ಹೊರಟ ಮಾನವನೂ ತನ್ನ ವಸಂತದಲ್ಲಿ 'ಒಲಿ' ಯಲಾರಂಭಿಸುವನು.
ಇನ್ನೊಬ್ಬರೊಡನೆ ನಲಿಯ ಬಯಸುವನು. ಮಾನವನ ಈ ಒಲವೆ (ಪ್ರವೃ
ತ್ತಿಯ) ಕುಟುಂಬಸಂಸ್ಥೆಯು ತಲೆದೋರುವುದಕ್ಕೆ ಕಾರಣವಾಗಿದೆ.
ಇಂದಿನ ಪ್ರತಿಯೊಂದು ರಾಷ್ಟ್ರಸಂಘಟನೆಯ ಮನೋಭೂಮಿಕೆಯನ್ನು
ವಿಂಗಡಿಸಿ ನೋಡಿದರೆ ಕಾಣುವುದೇನು? ಭೀತಿ! ಭೀತಿ! ಭೀತಿ! ತಂಡಗಳು
ಗುಂಪುಗಳು, ಮಿತ್ರರಾಷ್ಟ್ರ ಕೂಟಗಳು ತಲೆದೋರುವುದರ ಮೂಲ ಕಾರ
ಣವು ಇನ್ನೊಬ್ಬರ ಹೆದರಿಕೆಯಲ್ಲಿದೆ. ಉದಾತ್ತವಾದ ಉದ್ದೇಶಗಳಿಗಿಂತಲೂ
ಹರವರ ಹೆದರಿಕೆಯಿಂದ-ಹಗೆತನದಿಂದ-ಸೇಡು ತೀರಿಸುವ ಬುದ್ಧಿಯಿಂದಲೇ
ಈ ಬಗೆಯ ಸಂಘಟನೆಗಳು ಹೆಚ್ಚಾಗಿ ಅಸ್ತಿತ್ವದಲ್ಲಿ ಬರುವುವು. ಮಿತ್ರತ್ವ
ಕ್ಕಿಂತಲೂ ಸಮಾನ ಶತ್ರುತ್ವವೇ ಹಲವು ಬಾರಿ ಜನಗಳನ್ನು ಒಂದುಗೂಡಿ

ಸಲು ಹೆಚ್ಚು ಸಮರ್ಥವಾಗುತ್ತದೆ. ಲಾಭ ಪಡೆಯಬೇಕು, ಅಂಕೆಯಲ್ಲಿ ಇಡಬೇಕು, ಆಳಬೇಕು ಮತ್ತು ಮೆರೆಯಬೇಕು ಎಂಬೀ ತೆರನಾದ ಸುಪ್ತ ಮಹತ್ವಾಕಾಂಕ್ಷೆಯೂ ಅನೇಕ ಸಂಘ, ಸಂಸ್ಥೆ, ಸಮಾಜಗಳಿಗೆ ಜನ್ಮ ಕೊಟ್ಟಿದೆ.

ಇಂದಿನ ಹಲವಾರು ಜಾತಿ (ಮತ)ಗಳ ಸಂಘಗಳ ಚಳವಳ-ವಳವಳಕ್ಕೆ ಈ ಮನೋಭಾವನೆಯೇ ಮುಖ್ಯ ಕಾರಣವಾಗಿದೆ. ತಮ್ಮ ಜಾತಿ (ಧರ್ಮ) ಬಹಳ ಶ್ರೇಷ್ಠ, ಅದರ ತತ್ವಗಳು ಉದಾತ್ತವಾಗಿವೆ. ತಮ್ಮ ಈ ಪಂಥದಲ್ಲಿ ಹುಟ್ಟಿದವರಿಗೇ ಸ್ವರ್ಗ ಅಥವಾ ಮೋಕ್ಷವು; ಉಳಿದವರಿಗೆ ನರಕವು. ತಮ್ಮ ಧರ್ಮದ ಹೊರಗಿನವರೆಲ್ಲ ಪಾಪಿಗಳು; ಪತಿತರು ಎಂಬೀ ಬಗೆಯ ಚೀರಾಟವು ಸಾಮಾಜಿಕ ಅಥವಾ ಸಾಂಘಿಕ ಅಹಂಕಾರದ ಸೂಚಕವಾಗಿದೆ. ವೈಯಕ್ತಿಕವಾಗಿದ್ದ ಸಂಕುಚಿತ ಅಹಂಕಾರವು ಸಾಮೂಹಿಕ ಹಿರಿರೂಪವನ್ನು ತಾಳಿ ಹೊಸ ಸೋಗಿನಲ್ಲಿ ಕುಣಿವ ಬಗೆಯಿದು! ಈ ಬಗೆಯ ಸಾಮಾಜಿಕ ಅಹಂಕಾರದ ಮಾತೇ ರಾಷ್ಟ್ರಗಳಿಗೂ ಅನ್ವಯಿಸುತ್ತದೆ. ನಮ್ಮ ರಾಷ್ಟ್ರವೇ ಶ್ರೇಷ್ಠ; ಜಗತ್ತಿನ ಉದ್ಧಾರದ ಹೊಣೆ ನಮ್ಮ ರಾಷ್ಟ್ರದ ತಲೆಯ ಮೇಲಿದೆ. ಜಗತ್ತಿನ ಬೇರೆಬೇರೆ ರಾಷ್ಟ್ರಗಳನ್ನು ಸುಸಂಸ್ಕೃತವಾಗಿ ಮಾಡುವುದಕ್ಕೆ, ಅವುಗಳನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಳ್ಳುವುದು ತಮ್ಮ ಕರ್ತವ್ಯವೇ ಆಗಿದೆ ಎಂದು ಜಂಭ ಒಡಿಯುವ ಡಾಂಭಿಕ ಪರೋಪಕಾರೀ ರಾಷ್ಟ್ರಗಳ ಈ ಅಹಂಕಾರವು ಮಾನವ ಕುಟುಂಬದ ಏಳ್ಗೆಯ ದಾರಿಯೊಳಗಿನ ಘಟಸರ್ಪವಿದ್ದಂತೆ. ಕುಟುಂಬಸಂಸ್ಥೆ ಮತ್ತು ಸಾಂಸ್ಕೃತಿಕ ಸಂಘಗಳಲ್ಲಿ ಸಾಮಾನ್ಯವಾಗಿ ಹಮ್ಮಿನ ಸೌಮ್ಯ, ಉದಾತ್ತ ರೂಪವನ್ನು ಕಾಣಬಹುದು. ಇನ್ನುಳಿದ ವಾಣಿಜ್ಯ, ರಾಜಕೀಯ ಮೊದಲಾದ ಸಂಘಗಳಲ್ಲಿ ಕಾಣಿಸಿಕೊಳ್ಳುವ ಹಮ್ಮು ಅಷ್ಟು ಪವಿತ್ರವಾಗಿ ಉಳಿಯುವುದಕ್ಕೆ ತುಂಬ ತೊಂದರೆಗಳಿವೆ. ಆದುದರಿಂದ ಅಲ್ಲಿ, ಅದರ ರೂಪವಿಕೃತಿಯೇ ಸಾಮಾನ್ಯ ಧರ್ಮವೆಂಬ ಗ್ರಹಿಕೆಯಾಗಿದೆ.

ಕೀಲೆಣ್ಣೆ (ಡಾಂಬರ) ಬಣ್ಣ, ಎಂದರೆ ಒಂದು ನಗೆ! ಅದರ ನಾತಕ್ಕೆ ಮೂಗು ಮುಚ್ಚಿಕೊಳ್ಳದವರೆ ಇಲ್ಲ! ಅದೇ ಕೀಲೆಣ್ಣೆಯಿಂದ ಹಲವು ಅಂದದ ಸೊಗಸಾದ ಬಣ್ಣಗಳಾಗುತ್ತಿಲ್ಲವೆ? ಸುಗಂಧಿಸಿದ ಎಣ್ಣೆಗಳಾಗುವುದಿಲ್ಲವೆ?

ಆದರಂತೆ ಮಾನವನು ತಿಳಿವಿನ ಬಲದಿಂದ ತನ್ನ ದುರ್ಗುಣಗಳನ್ನು ಸದ್ಗುಣಗಳನ್ನಾಗಿ ಮಾರ್ಪಡಿಸಿಕೊಳ್ಳಬಲ್ಲನು. ಇದರಲ್ಲಿಯೆ ಇವನ ಉನ್ನತಿಯ ಆಸೆಯಿದೆ. ಬಲ್ಲಿದರು ಮನುಷ್ಯನ ಮೂಲಪ್ರವೃತ್ತಿಗಳನ್ನು ತಿಳಿದು ಅವುಗಳಿಗೆ ಉದಾತ್ತ ಸ್ವರೂಪವನ್ನು ಕೊಡಲಿಕ್ಕೆ, ಪವಿತ್ರೀಕರಿಸಲಿಕ್ಕೆ ಹಲವು ಹಂಚಿಕೆಗಳನ್ನು ನೇರ್ಪಡಿಸುತ್ತಾರೆ. ಮನುಷ್ಯನ ಮೂಲಪ್ರವೃತ್ತಿಗಳು ಸಮಾಜಧಾರಣೆಗೂ ಸಮಾಜದ ಅಭಿವೃದ್ಧಿಗೂ ಕಾರಣವಾಗುವಂತೆ ಅವನ್ನು ತಿದ್ದಿ ತಿರುಗಿಸಿಕೊಳ್ಳಲು ಕಾಲಕಾಲಕ್ಕೆ ಹವಣಿಸುತ್ತಾರೆ. ಕಾಲವು ಬದಲಾದಂತೆ ಒಂದು ಕಾಲದ ಹಂಚಿಕೆಗಳು (Technic) ಇನ್ನೊಂದು ಕಾಲಕ್ಕೆ ಸರಿಹೋಗುವುದಿಲ್ಲ. ಆದುದರಿಂದ ಹೊಸ ಕಾಲಕ್ಕೆ ಹೊಸ ಹವಣಿಕೆ, ಹೊಸ ಹಂಚಿಕೆಗಳನ್ನು ಕಂಡುಕೊಳ್ಳಬೇಕಾಗುತ್ತದೆ. ಯುಗವು ಬದಲಾದಂತೆ ಯುಗಧರ್ಮವು ಮಾರ್ಪಡಲೇ ಬೇಕಲ್ಲವೆ? '**ಸಮಾಜ-ವಿಕಾಸಕ್ರಮ**'ವನ್ನು ಅರಿತುಕೊಂಡರೆ ಈ ಮಾತಿನ ಮನವರಿಕೆಯಾಗದೆ ಇರಲಾರದು. ಬೇಟೆಗರಾಗಿ ಆಹಾರಕ್ಕಾಗಿ ಅಲೆದಾಡುವ ಕಾಲದ ಮಾನವಸಮಾಜದ ಕಟ್ಟುಕಟ್ಟಳೆಗಳು, ಒಕ್ಕಲಾಗಿ ನಿಂತ ಒಕ್ಕಲುತನದ ಯುಗಕ್ಕೆ ಸರಿಹೋಗಲಾರವು. ಒಕ್ಕಲುತನಯುಗದ ಹವಣಿಕೆ ಹಂಚಿಕೆಗಳು ವ್ಯಾಪಾರಿಯುಗದಲ್ಲಿ ಉಪಯುಕ್ತವಾಗಲಾರವು. ಉಪಯುಕ್ತವಲ್ಲವೆಂದು ತಿರಸ್ಕರಣೀಯವಲ್ಲ. ಹಿಂದಿನ ಅನುಭವದ ಲಾಭಪಡೆಯಲು ಅವು ನೆರವಾಗುತ್ತವೆ. ಹಿಂದಿನ ಅನುಭವದ ಬೆಳಕಿನಲ್ಲಿ, ಇಂದಿನ ಕೊರತೆ, ಕೋರಿಕೆಗಳನ್ನು ಪೂರಯಿಸಬಲ್ಲ ಹೊಸ ಹಂಚಿಕೆಗಳನ್ನು ಕಂಡುಹಿಡಿಯುವುದು ಅವಶ್ಯಕವಾಗಿಲ್ಲವೆ?

ಒಬ್ಬ ಸುಪ್ರಸಿದ್ಧ ನಾಟಕಕಾರನ ಒಂದು ನಗೆಮಾತು ಬಹಳ ಹುರುಳುಳ್ಳದಾಗಿದೆ: 'ಮದ್ದಿಗಾಗಿ ಮದ್ಯ ಕೊಟ್ಟರು. ಈಗ ಮದ್ಯಕ್ಕಾಗಿ ಮದ್ದು ಕೊಡುವ ಹೊತ್ತು ಬಂದಿದೆ!' ಒಮ್ಮೆ ಸಮಾಜದ ಏಳ್ಗೆಗಾಗಿಯೆಂದು ಮಾಡಿದ ಉಪಾಯಗಳೇ ಕಾಲವು ಬದಲಾದೊಡನೆ ಅಪಾಯಕಾರಿಯಾಗಿ ಪರಿಣಮಿಸುತ್ತವೆ. ಒಂದು ಕಾಲಕ್ಕೆ ಉಪಯುಕ್ತವಾಗಿದ್ದ ವರ್ಣವ್ಯವಸ್ಥೆ, ಜಾತಿಭೇದ, ಹಲವು ಧಾರ್ಮಿಕ ಆಚಾರಗಳು ಇಂದು ಬಹುಮಟ್ಟಿಗೆ ನಿರುಪಯುಕ್ತವಾಗಿ—ಕಾಲ್ತೊಡಕಾಗಿ ತೊಂದರೆಗೆ ಕಾರಣವಾಗುತ್ತಿರುವುದು ಅನುಭವಕ್ಕೆ ಬರುತ್ತಲಿದೆ ಕಾಲವು ಬದಲಾಗಿದ್ದರೂ ಬದಲಾಗಿಲ್ಲ— 'ಸಮಾ

ತನ'ವಾಗಿದೆಯೆಂಬ ಭ್ರಾಂತಿಯಲ್ಲಿದ್ದೇವೆ. ಮೂಲತತ್ತ್ವಗಳು ಸನಾತನ. ಸನಾತನ ಮೂಲತತ್ತ್ವಗಳು ಒಂದು ವಿಶಿಷ್ಟ ಪರಿಸ್ಥಿತಿಯಲ್ಲಿ ಆಚರಣೆಯಲ್ಲಿ ಬರುವಾಗ ಆ ಕಾಲ-ಪರಿಸ್ಥಿತಿಗನುಸರಿಸಿದ ಒಂದು ರೂಪ ತಾಳಲೇಬೇಕಾಗುತ್ತದೆ. ಇಂತು ಒಂದು ವಿಶಿಷ್ಟ ಕಾಲಪರಿಸ್ಥಿತಿಗಳಲ್ಲಿ ತಲೆದೋರಿದ ನಿಯಮ ನಡೆವಳಿಗಳು, ಆ ಪರಿಸ್ಥಿತಿಯು ಬದಲಾದೊಡನೆ ಬದಲಾಗಲೇಬೇಕಲ್ಲವೆ? ಆದಕಾರಣ (ಮೂಲ) ತತ್ತ್ವಗಳು ಸನಾತನವಾಗಿದ್ದರೂ, ಆ ತತ್ತ್ವಗಳು ಆಚರಣೆಯಲ್ಲಿ ಬರುವುದಕ್ಕಾಗಿ ಮಾಡಿಕೊಂಡ ನಿಯಮಗಳು ಸನಾತನವಲ್ಲ; ಅವು ಕಾಲಕ್ಕನುಸರಿಸಿ ಬದಲಾಗುವುದು ಅನಿವಾರ್ಯ. ಆದುದರಿಂದ ಅಸ್ಥಿರವನ್ನು ಸ್ಥಿರವೆಂದು ನಂಬಿ ನಡೆದವರು ಹಾಸಿಗೆ ಈಡಾದರೆ ಏನು ಸೋಜಿಗ?

ಇತಿಹಾಸ, ಸಮಾಜಶಾಸ್ತ್ರಗಳ ಅಜ್ಞಾನವೇ ನಮ್ಮ ಈ ಎಲ್ಲ ದುರವಸ್ಥೆಗೆ ಮೂಲಕಾರಣ. ನಮ್ಮವರು ಇತಿಹಾಸವನ್ನು ದುರ್ಲಕ್ಷಿಸಿದರು. ನಮ್ಮ ಇತಿಹಾಸವು ಪುರಾಣಗಳ ರೂಪ ತಾಳಿತು. ಆದರೆ ಪುರಾಣಗಳನ್ನು ಇತಿಹಾಸ—ಎಂದರೆ ಒದಗಿದ ಸಂಗತಿ, ವಸ್ತುಸ್ಥಿತಿ ಎಂದು ಗ್ರಹಿಸಿ ಲೋಕಕ್ಕೆಲ್ಲ ನಮ್ಮ ಅರೆಮರುಳುತನವನ್ನು ಪ್ರದರ್ಶಿಸಿದೆವು. ಪುರಾಣಗಳು ಪುರಾಣಗಳೇ ಎಂಬ ಎಚ್ಚರವನ್ನು ಉಳಿಸಿಕೊಂಡಿದ್ದರೆ ನಮ್ಮ ನಾಡು ಈ ಬಗೆಯ ಕೇಡಿಗೆ ಈಡಾಗುತ್ತಿದ್ದಿಲ್ಲ. ಒಂದು ಆದ ಘಟನೆಯನ್ನು ಕಣ್ಣಾರೆ ಕಂಡ ನಾಲ್ವರಿಗೆ ವಿವರಿಸ ಹೇಳಿದರೆ ಒಬ್ಬನ ಬರವಣಿಗೆ ಇನ್ನೊಬ್ಬನಂತಿರುವುದಿಲ್ಲವೆಂಬ ಅನುಭವವುಂಟು. ಆದಕಾರಣ ಇತಿಹಾಸದಲ್ಲಿ ಒದಗಿದ ಸಂಗತಿಗಳ ವರ್ಣನೆ, ವಸ್ತುಸ್ಥಿತಿಯ ವಿವರಣವೇ ಇರುತ್ತದೆಂದು ತಿಳಿಯುವುದು ಬರಿಯ ಭ್ರಮೆ. ಆದ ಮಾತಿಗೆ ಬರೆದವನ ಅಥವಾ ಹೇಳುವವನ ಬುದ್ಧಿಯ ಬಣ್ಣವು ಬಂದುಬಿಡುವುದು ಅನಿವಾರ್ಯ. ಯಾವ 'ಇತಿಹಾಸ' ಗ್ರಂಥವೇ ಆಗಲಿ ಅದು ಸ್ವಲ್ಪ ಹೆಚ್ಚು ಕಡಿಮೆ ಪ್ರಮಾಣದಿಂದ 'ಪುರಾಣ' ವೆ ಆಗಿರುವುದೆಂದು ಹೇಳಬಹುದಾಗಿದೆ. ಈ ದೃಷ್ಟಿಯಿಂದ ನಮ್ಮ ಪುರಾತನರು ಸುಮ್ಮನೆ 'ಇತಿಹಾಸ' ವನ್ನು ಬರೆವ ಭ್ರಮೆಯೇಕೆ ಎಂದು ಇತಿಹಾಸವನ್ನು ಪುರಾಣರೂಪದಲ್ಲಿ ಬರೆವ ಪದ್ಧತಿಯನ್ನೇ ರೂಢಿಸಿರಬೇಕು. ಇದೆಲ್ಲವೂ ಸರಿಹೋಯ್ತು. ಆದರೆ ಜನಸಾಮಾನ್ಯರು ಪುರಾಣಗಳನ್ನೂ 'ಇತಿಹಾಸ' ವೆಂದು ನಂಬಿದುದು ಮಾತ್ರ ಸರಿಯಾಗಲಿಲ್ಲ.

ಇತಿಹಾಸವು ಹೆಚ್ಚಾಗಿ ಒಂದು ಶಾಸ್ತ್ರ; ಪುರಾಣವು ಶಾಸ್ತ್ರವಲ್ಲ; ಸಾಹಿತ್ಯರೂಪವನ್ನು ಕೊಟ್ಟ ಇತಿಹಾಸ ಮತ್ತು ಸಮಾಜಶಾಸ್ತ್ರ. ಸಾಹಿತ್ಯವು ದಿಗಂಬರಪಂಥಿಯಲ್ಲ; ವಸ್ತ್ರಾಲಂಕಾರಗಳ ಪ್ರೀತಿ, ಅದರ ಹುಟ್ಟುಗುಣ. ಶಾಸ್ತ್ರಗಳಂತೆ ನಗ್ನಸತ್ಯದ ಉಪಾಸನೆ ಸಾಹಿತ್ಯಕ್ಕೆ ಸೇರುವುದಿಲ್ಲ. ಇದ್ದ ಮಾತನ್ನು ಇದ್ದಕ್ಕಿದ್ದಂತೆ ಹೇಳುವ ಹಟ ಶಾಸ್ತ್ರದ್ದು. ಇದ್ದ ಮಾತನ್ನು ಅರಳಿಸಿ, ಕುಸುರಿಸಿ, ಅಂದವಾಗಿ, ಚೆಂದವಾಗಿ, ಉಪಮಾಸೋಪಮೇಯಗಳಿಂದ ಬಣ್ಣಿಸಿ ಹೇಳುವ ಬಗೆ ಸಾಹಿತ್ಯದ್ದು. ಆದರೆ ಉಪಮಾನೋಪಮೇಯ, ಸಂಕೇತ, ಕವಿಸಮಯಾದಿಗಳ ತಿಳುವಳಿಕೆಯಿಲ್ಲದ ಜನಸಾಮಾನ್ಯರಿಗೆ ಸಾಹಿತ್ಯವು, ಸತ್ಯವನ್ನು ತೋರಿಸುವುದಕ್ಕೆ ನೆರವಾಗುವುದರ ಬದಲು ಹಲವು ಬಾರಿ ದಿಗ್ಭ್ರಮೆಯನ್ನುಂಟುಮಾಡುವುದಕ್ಕೆ ಕಾರಣವಾಗುತ್ತದೆ. ವೇದಗಳನ್ನು ಪಠಿಸುತ್ತಿದ್ದರೂ ವೇದದ ಭಾಷೆ ತಿಳಿಯದೆ ವೇದಬಾಹಿರರಾದೆವು. 'ಬ್ರಾಹ್ಮಣೋಽಸ್ಯಮುಖಮಾಸೀತ್..' ಬ್ರಾಹ್ಮಣರು ಮುಖದಿಂದ ಹುಟ್ಟಿದರು; ಕ್ಷತ್ರಿಯರು ತೋಳಿನಿಂದ ತಲೆದೋರಿದರು ಎಂದು ಮುಂತಾದ ಮಾತುಗಳನ್ನು ಶಬ್ದಶಃ ಗ್ರಹಿಸಿ ಸಮಾಜದಲ್ಲಿ ಒಡಕು ಹೆಚ್ಚಾಯಿತು. ಪೌರಾಣಿಕ ಬ್ರಹ್ಮ, ವಿಷ್ಣು, ರುದ್ರಾದಿದೇವತೆಗಳ ಅಂತರಂಗವು ತಿಳಿಯದೆ ವೀರಶೈವ, ವೀರವೈಷ್ಣವಾಭಿಮಾನವು ತಲೆಗೇರಿ, ಒಬ್ಬರೊಬ್ಬರ ಬೆಯ್ದಾಟ ಹೊಯ್ದಾಟಕ್ಕಾರಂಭವಾಯಿತು. ಪ್ರತಿಯೊಂದು ಒಗೆಯವರೂ ತಮ್ಮ ಜಾತಿಯು ಬ್ರಹ್ಮನ ಮಾನಸಪುತ್ರರಿಂದಲೇ ಹುಟ್ಟಿತೆಂದು ಸಾಧಿಸಲಾರಂಭಿಸಿದರು. 'ಮಾನವನು ಮಂಗನ ಮಗ'ನೆಂದು ಪ್ರತಿಪಾದಿಸಿ ಡಾರ್ವಿನ ಪ್ರಭೃತಿಗಳು ಈ ಪುರಾಣಶರಣರ ಕಣ್ಣಲ್ಲಿ ಚೆನ್ನಾಗಿ ಅಂಜನವನ್ನು ಹಾಕಿದ್ದಾರೆ. ಸತ್ಯದ ಇನ್ನೊಂದು ಬದಿಯಿದು.

ಬರಿ 'ನಾಡು' ಎಂಬುದು ನಿರ್ಜೀವ. 'ನಾಡದೇವಿ', ರಾಷ್ಟ್ರ-ಪುರುಷ' ಎಂಬ ಅಲಂಕಾರಿಕ ಮಾತಿನ ಸ್ಥಾಯೀಭಾವವು 'ಸಮಾಜ'ವೇ ಆಗಿದೆ. ದೇಶವೆಂಬ ದೇಹದೊಳಗಣ ಜೀವಾಳವೆಂದರೆ ಸಮಾಜ. ಕೇವಲ ಜನಸಮುದಾಯವು ಸಮಾಜವೆನಿಸಲಾರದು. ಸಮಾಜವೆಂದರೆ ಸುಸಂಘಟಿತ-ಜನಾಂಗ. ಬಿಡಿಬಿಡಿಯಾಗಿರುವ ನಾರಿನ ಪಾಚಿ (ಎಳೆ)ಗಳು ಹುರಿಕಟ್ಟಿನ ಹಗ್ಗವೆನಿಸಲಾರದು. ಒಂದು ಪ್ರದೇಶದಲ್ಲಿ ಕೋಟ್ಯನುಕೋಟಿಮನುಷ್ಯ(ಆಕಾರದ)

ಪ್ರಾಣಿಗಳು ಜೀವಧಾರಣೆಮಾಡಿಕೊಂಡಿದ್ದರೂ ಆ ಜನಗಳೆಲ್ಲ ಒಂದು ಸಮಾಜವೆಂದು ಹೇಳಲಿಕ್ಕಾಗದು. ಜೀವಂತ ಮನುಷ್ಯನ ಒಂದು ಅಂಗಕ್ಕೆ ಪೆಟ್ಟು ತಗುಲಿದೆ ಇನ್ನೊಂದು ಅಂಗವು ಅದಕ್ಕಾಗಿ ಮಿಡುಕುವುದು; ಅದರ ನೆರವಿಗೆ ಓಡಿ ಬರುವುದು. ಹಾಗೆ ಜೀವಂತ ಸಮಾಜದಲ್ಲಿ ಕೆಲವೊಂದು ವ್ಯಕ್ತಿಗೆ ಅಥವಾ ವ್ಯಕ್ತಿಸಮಾಜಕ್ಕೆ ಏನಾದರೂ ಪೀಡೆಯುಂಟಾದರೆ ಅಥವಾ ವಿಪತ್ತು ಸಂಭವಿಸಿದರೆ ಸಮಾಜವು ಅದು ತನ್ನ ಮೇಲಣ ಕುತ್ತವೆಂದು ಭಾವಿಸಿ ಆ ಸಂಕಟನಿವಾರಣೆಗೆ ಅವಶ್ಯಕವಾದ ಉಪಾಯುಗಳನ್ನು ಕೈಕೊಳ್ಳುವುದು. ಇದುವೆ ಜೀವಂತಸಮಾಜದ ಲಕ್ಷಣ.

ಸಮಾಜವು ಜೀವಂತವಾಗಿರಬೇಕಾದರೆ ಅದರೊಳಗಣ ಪ್ರತಿಯೊಂದು ವ್ಯಕ್ತಿಯಲ್ಲೂ ಸಹ-ಅನುಭೂತಿಯ ಭಾವನೆಯು ಒಳ್ಳೇ ಪರಿಪಕ್ವ ಸ್ಥಿತಿಯನ್ನು ಹೊಂದಿರಬೇಕು. ಸಹ-ಅನುಭೂತಿಯು ಇಲ್ಲದೆ ಇನ್ನೊಬ್ಬರ ಸುಖದುಃಖಗಳಲ್ಲಿ ಪಾಲುಗಾರರಾಗುವ ಯೋಗ್ಯತೆಯು ಯಾರಿಗೂ ಬಾರದು. ತನ್ನ ನೆರೆಹೊರೆಯವರ—ತನ್ನ ನಾಡಿನವರೆಂಬುವವರ ಸುಖದುಃಖಗಳಲ್ಲಿ ಪಾಲುಗಾರರಾಗಲು ಅಸಮರ್ಥರಾದ ಜನಗಳ ಗುಂಪು ದನಗಳ ಜಂಗುಳಿಗಿಂತ ಬೇರೆಯಲ್ಲ. ಧರ್ಮಭೇದ, ಪಂಥಭೇದ, ಜಾತಿಭೇದ, ವಿಚಾರಭೇದ, ಗಳು ಸಹ-ಅನುಭೂತಿಗೊಂದು ದೊಡ್ಡ ಅಡ್ಡಿ. ಸಹ-ಅನುಭೂತಿಗೆ ಇರುವ ಈ ಅಡೆ ತಡೆಗಳು ದೂರವಾಗದೆ ನಮ್ಮ ಸಮಾಜವು ಅಂಗಾಂಗಗಳಲ್ಲಿಯೂ ನವಚೈತನ್ಯವನ್ನು ಪಡೆಯಲಾರದು; ಜೀವಂತವಾಗಲಾರದು. ಜಾತಿ, ಧರ್ಮಗಳು ನಮ್ಮ **ಆತ್ಯಂತಿಕ** ವಿಭಾಗಗಳಾದುದೇ ನಮ್ಮ ಸಮಾಜಕ್ಕೆ ಅಡಸಿರುವ ಹಿರಿಬೇನೆ. ಒಂದು ಸಮಾಜದಲ್ಲಿ ವ್ಯಾವಹಾರಿಕ ಅನುಕೂಲತೆಗಾಗಿ ಒಳಭಾಗಗಳಿರುವುದು ಸ್ವಾಭಾವಿಕ. ಈ ಬಗೆಯಾಗಿ ಒಂದು ಸಮಾಜದಲ್ಲಿ ಹಲವು ಗುಂಪು, ಪಂಗಡ, ಬಣಗಳಿರತಕ್ಕುವೇ. ಆದರೆ ಅವು ಆತ್ಯಂತಿಕ ಭೇದಗಳಿರಕೂಡದು. ಒಂದು ವಿಶಿಷ್ಟ ತತ್ವಜ್ಞಾನದ ಪ್ರೀತಿಯಿಂದ, ಒಬ್ಬನು ಶೈವ, ವೈಷ್ಣವ ಅಥವಾ ಮಹಮ್ಮದೀಯನಾಗಿರಬಹುದು. ಆದರೆ ಈ ವಿಭಾಗಗಳು ತಾತ್ಕಾಲಿಕ ಅಥವಾ ವೈಯಕ್ತಿಕವಾಗಿರಬೇಕು. ಒಂದು ಕಾಲಕ್ಕೆ ಆರ್ಯ, ಅನಾರ್ಯ, ಬೌದ್ಧ, ಹಿಂದೂ ಅಥವಾ ಮುಸಲ್ಮಾನ ಎಂಬೀ ಬಗೆಯ ಭೇದಗಳೇ ಸಮಾಜದ ಆತ್ಯಂತಿಕ ವಿಭಾಗಗಳಾಗಿದ್ದುದು

ನಿಜ, ಆದರೆ ಇಂದು ಜಾತಿ ಅಥವಾ ಧರ್ಮದ ಸ್ಥಳದಲ್ಲಿ ಪ್ರಾದೇಶಿಕ ಅಭಿಮಾನವು ಅತ್ಯಂತಿಕ ವಿಭಾವಾಗಿದ್ದುದು ಕಂಡುಬರುತ್ತದೆ. ಇದಕ್ಕನುಸರಿಸಿ ನಾವು ಹಿಂದೂ ದೇಶದವರೂ ತಮ್ಮ ಜಾತಿ ಧರ್ಮಗಳ ಹಳೆಯ ಒಣಗಳನ್ನು ಹಿಂದಿರಿಸಿ ಆ ಸ್ಥಳದಲ್ಲಿ ಪ್ರಾದೇಶಿಕ ಅಭಿಮಾನವನ್ನುಂಟುಮಾಡಿಕೊಳ್ಳಲು ತಡಮಾಡಿದರೆ ಈ ಲೋಕದೊಳಗಿನ ಜೀವನಕಲಹದಲ್ಲಿ ನಮ್ಮ ಪಾಡು ನಾಯಿಯ ಪಾಡಿಗಿಂತಲೂ ಕಡೆಯಾಗದೆ ಇರದು. ಸಮಾಜ ಸಂಘಟನೆಯನ್ನು ಕಾಲಕ್ಕನುಸರಿಸಿ ಮಾರ್ಪಡಿಸಿಕೊಳ್ಳದಿದ್ದುದರಿಂದಲೇ ನಾವು ಈ ಬಗೆಯ ಹೀನಸ್ಥಿತಿಯಲ್ಲಿ ಬಿದ್ದುಕೊಂಡಿದ್ದೇವೆ.

ಇನ್ನು ಮತ್ತೆ ತಲೆಯೆತ್ತಬೇಕಾಗಿದ್ದರೆ ನಮ್ಮ ಸಮಾಜಕ್ಕೆ ಅಂಟಿಕೊಂಡ ರೋಗಕ್ಕೆ ಸರಿಯಾದ ಔಷಧಿಯು ಅತ್ಯವಶ್ಯಕ. ನಮ್ಮ ಸಮಾಜಕ್ಕಾಗಿರುವ ರೋಗ ನಿದಾನವನ್ನು ಮಾಡುವುದಕ್ಕೆ ಇತಿಹಾಸ ಮತ್ತು ಸಮಾಜಶಾಸ್ತ್ರಗಳು ಬಹಳ ಸಹಾಯಕಾರಿಗಳಾಗಿವೆ. ಈ ದೃಷ್ಟಿಯಿಂದ ನನ್ನ ತರುಣಮಿತ್ರರಾದ ಶ್ರೀ ನೆಗಳೂರ ಶ್ರೀನಿವಾಸರಾಯರು 'ಸಮಾಜ-ವಿಕಾಸಕ್ರಮ'ವೆಂಬ ಬಹಳ ಹುರುಳುಳ್ಳ ಗ್ರಂಥವನ್ನು ಕನ್ನಡಿಸಿ ಬಹಳ ಒಳ್ಳೆಯ ಕೆಲಸವನ್ನು ಮಾಡಿದ್ದಾರೆ. ಈ ಗ್ರಂಥವನ್ನು ಓದುವುದರಿಂದ ನಮ್ಮ ಜನಗಳಲ್ಲಿ ಹರಡಿಕೊಂಡಿರುವ ಜಾತಿಮತಗಳ ಹೆಮ್ಮೆಯು ಬಹು ಮಟ್ಟಿಗೆ ಕಡಿಮೆಯಾದೀತೆಂದು ಹಾರೈಸುತ್ತೇನೆ. ನದಿಯ ಉಗಮದಂತೆ, ಋಷಿಗಳ ಕುಲದಂತೆ ಸಮಾಜವೂ ಎಷ್ಟೊಂದು ಹೀನವೆನಿಸಬಹುದಾದ ಮಟ್ಟಗಳೊಳಗಿಂದ ಮುಂದುವರಿಯುತ್ತ ಬಂದಿದೆಯೆಂಬುದನ್ನು ಈ ಗ್ರಂಥದಿಂದ ಚೆನ್ನಾಗಿ ಅರಿತುಕೊಳ್ಳಬಹುದಾಗಿದೆ.

ಸಮಾಜವಿಕಸನ ಕ್ರಮದಲ್ಲಿ ಮಾನವನಿಗೆ ದೊರೆತ ಸುಮಧುರ ಅಮೃತ ಫಲಗಳು ಎರಡು: ಸಂಸ್ಕೃತಿ ಮತ್ತು ನಾಗರಿಕತೆ. ಸಂಸ್ಕೃತಿ ವೈಯಕ್ತಿಕ; ನಾಗರಿಕತೆ ಸಾಮಾಜಿಕ. ಸಂಸ್ಕೃತಿ ಅವ್ಯಕ್ತ; ನಾಗರಿಕತೆ ವ್ಯಕ್ತ; ಸಂಸ್ಕೃತಿ ಒಳಗಿನದು; ನಾಗರಿಕತೆ ಹೊರಗಿನದು. 'ಸತ್ಯಂ-ಶರಣಂ ಗಚ್ಛ' ಎಂಬುದು ಸಂಸ್ಕೃತಿಸೂಚಕ; 'ಸಂಘಂ ಶರಣಂ ಗಚ್ಛ' ಎಂಬುದು ನಾಗರಿಕತೆಯ ದ್ಯೋತಕ. ಏಕಾಂತಿಕ ಸತ್ಯ ಜನಸಮ್ಮರ್ದದಿಂದ ದೂರವಾಗಿರತಕ್ಕ ವಸ್ತುವು. ಅದರ ಉಪಾಸನೆಗೆ ಏಕಾಂತವೇ

ಯೋಗ್ಯ. ವೈಯಕ್ತಿಕ ಸಾಧನೆಯೆ ಅವಶ್ಯಕ. ಹೃದಯಮಂಥನದಿಂದ ಕೈಗೆ ಬಂದ 'ಸಂಸ್ಕೃತಿ' ಯೆಂಬುದೇ ಇದರ ಫಲ. ಒಬ್ಬ ವ್ಯಕ್ತಿಯು ನಡಿಸಿದ ಯೋಗದ ಸಿದ್ಧಿ ಸಂಸ್ಕೃತಿಯಾದರೆ ಸಾಮುದಾಯಿಕ-ಸಾಮಾಜಿಕ ಯೋಗದ ಫಲಿತ ನಾಗರಿಕತೆ. ನಾಗರಿಕತೆಯು ಸಾಂಸ್ಕೃತಿಕರಿಗೆ ಶಾಶ್ವತ ಸತ್ಯದ ಬಿಸಿಲ್ಗುದುರೆಯನ್ನು ಏರುವ ಹಂಬಲಿಗರೆಂದು ಸ್ವಲ್ಪ ನಗುವುದು. ನಾಗರಿಕತೆಯ ಆದರ್ಶವು ಶುದ್ಧ ವ್ಯವಹಾರ. ಲೌಕಿಕ ಸತ್ಯ—ಕಾಲಿಕ ಸತ್ಯ. ನಾಗರಿಕರಿಗೆ, ಸಾಂಸ್ಕೃತಿಕರು ಹಲವಬಾರಿ ಚಾಣಕ್ಯ ಪಂಥಿಗಳೆಂದು ಹೆಸರಿಡುವುದುಂಟು. ಇದರಿಂದ ಸಂಸ್ಕೃತಿ ಮತ್ತು ನಾಗರಿಕತೆಗಳು ಪರಸ್ಪರ ವಿರೋಧಿಗಳೆಂಬುವಂತೆ ಭಾಸವಾಗುವ ಹಾಗಿದೆ.

ಈ ಭ್ರಮೆಯೇ ನಮ್ಮನ್ನು ಹಾಳುಮಾಡಿದೆ ವೈಯಕ್ತಿಕ ಮೋಕ್ಷವೇ ಗುರಿಯೆಂಬ ತಿರುಗಣಿ ಮಡುವಿನ ಸುಳಿಯಲ್ಲಿ ಸಿಲುಕಿ ಜೀವನವನ್ನೇ ಹಾಳುಮಾಡಿಕೊಂಡ ಸಂಪ್ರದಾಯ ಶರಣರೂ, ರೂಢಿ ದಾಸರೂ ನಮ್ಮಲ್ಲಿ ಎಣಿಕೆಯಿಲ್ಲದಷ್ಟು ಇದ್ದಾರೆ. ಸತ್ಯಂ ಶರಣಂ ಗಚ್ಛ ಎಂದಿಷ್ಟೇ ಹೇಳದೆ ಅದರೊಡನೆ ಸಂಘಂ ಶರಣಂ ಗಚ್ಛ ಎಂದೂ ಆದೇಶಿಸಿದ ಬುದ್ಧನಿಗೆ ಸಿಬುರ್ಬುದ್ಧನೆಂದು ಹೀಯಾಳಿಸಿದವರುಂಟು ! ಆದರೆ ಈಶಾವಾಸ್ಯ ಉಪನಿಷತ್ತು ಅಸಂಭೂತಿ ಮತ್ತು ಸಂಭೂತಿಗಳ ಸಮನ್ವಯವನ್ನು ಉಪದೇಶಿಸುತ್ತದೆಂಬ ಅರಿವು ಇದ್ದರೆ ತಾನೆ? ಯಾಜ್ಞವಲ್ಕ್ಯನ ಜೀವನವು ಈ ಸಮನ್ವಯಕ್ಕೆ ಸಾಕ್ಷಿಯಾಗಿದೆ. 'ಅರತಿಃ ಜನಸಂಸದಿ' ಎಂದು ಉಪದೇಶಿಸಿದ ಶ್ರೀಕೃಷ್ಣನೇ 'ಲೋಕಹಿತದಲ್ಲಿ ಆಸಕ್ತನಾಗು. 'ಲೋಕ ಕಲ್ಯಾಣಕಾರಕನಾಗು' ಎಂದು ಸೂಚಿಸಿದ್ದಾನೆ. ಆದುದರಿಂದ ಸಮಾಜವನ್ನು ತೊರೆಯಲು ಹೇಳುವುದು ನಮ್ಮ ಪೂರ್ವಪರಂಪರೆಗೆ ಸಂಪೂರ್ಣ ವಿರೋಧಿಯಾಗಿದೆ. ಪಕ್ಷಪಂಗಡಗಳನ್ನು ಮೀರಿದ ಸಮಾಜವೆಂದರೇ ರಾಷ್ಟ್ರ; ರಾಷ್ಟ್ರವೇ ಒಂದು ಜಾತಿ. ಹಿಂದೀ ರಾಷ್ಟ್ರದ ಜಾತಿ ಹಿಂದೀ. ಉಳಿದುವು ಗೌಣ; ಇಂದು ಹಿಂದೀಯರು ವೈಯಕ್ತಿಕ ಸಿದ್ಧಿಗಾಗಿ ಯೋಗಸಾಧನೆಯನ್ನು ನಡಿಸುವುದರ ಒಡನೆ ನಾಡಿನ ಏಳ್ಗೆಗಾಗಿ 'ರಾಷ್ಟ್ರಯೋಗ' ವನ್ನೂ ಆಚರಿಸುವುದು ಕರ್ತವ್ಯವಾಗಿದೆ.

ಇದಕ್ಕಾಗಿ ಅವಶ್ಯಕವಾಗಿರುವ ಇತಿಹಾಸ, ಸಮಾಜಶಾಸ್ತ್ರದ ಜ್ಞಾನ

ದಾಯಕವಾದ ಇಂತಹ ಗ್ರಂಥಗಳ ಅಧ್ಯಯನವು ಅತ್ಯಂತ ಅವಶ್ಯವು. ಕನ್ನಡದಲ್ಲಿ ಈ ಬಗೆಯ ಪುಸ್ತಕವು ಇದೇ ಮೊದಲನೆಯದೆಂದರೂ ಸಲ್ಲುವುದು. ಶ್ರೀಮಾನ್ ನೆಗಳೂರ ಶ್ರೀನಿವಾಸರಾಯರು ಕನ್ನಡದಲ್ಲಿದ್ದ ಈ ಒಂದು ಕೊರತೆಯನ್ನು ಕೆಲಮಟ್ಟಿಗಾದರೂ ಹೋಗಲಾಡಿಸಲು ಮಾಡಿದ ಈ ಪ್ರಯತ್ನವು ತುಂಬ ಹೊಗಳುವಂತಹದಾಗಿದೆ. ಆಧುನಿಕ ವಿದ್ಯಾವಿಭೂಷಿತರೂ, ಸುಸಂಸ್ಕೃತರೂ ಆದ ಶ್ರೀ ಶ್ರೀನಿವಾಸರಾಯರು ತಮ್ಮ ಅಭ್ಯಾಸದ ಲಾಭವನ್ನು ಕನ್ನಡಿಗರಿಗೆ ಮಾಡಿಕೊಡಲು ಎಂದೊ ಆರಂಭಿಸಬೇಕಾಗಿತ್ತು. ಆದರೆ ಅವರ ಅತೀವ ಸೌಜನ್ಯವು ಅವರಿಗೆ ಅಡ್ಡ ಬರುತ್ತಲಿತ್ತು. ತಾನು ಕಲಿತುದನ್ನು ತಿರುಗಿ ಸಮಾಜಕ್ಕೆ ಕೊಡದೆ ಹೋದರೆ ಬ್ರಹ್ಮರಾಕ್ಷಸರಾಗಬೇಕಾಗುವುದೆಂದು ನಮ್ಮವರ ಒಂದು ಭಾವಿಕ ಕಲ್ಪನೆಯಿದೆ. ಪ್ರತಿಯೊಬ್ಬ ವಿದ್ಯಾವಂತನೂ ತನ್ನ ವಿದ್ಯೆಯನ್ನು ತಿರುಗಿ ಬಡ್ಡಿಸಹಿತ ಸಮಾಜಕ್ಕೆ ಸಲ್ಲಿಸದಿದ್ದರೆ ಆತನು ಒಂದು ಬಗೆಯಿಂದ ಸಮಾಜದ್ರೋಹಿಯೆಂದು ಜನಮನದ ಮೇಲೆ ಅಚ್ಚೊತ್ತಿದಂತೆ ಚೆನ್ನಾಗಿ ಮೂಡಿಸಬೇಕೆಂಬುದೇ ಮೇಲಣ ಭಾವಿಕ ಕಲ್ಪನೆಯ ಮೂಲೋದ್ದೇಶವಾಗಿದೆ. ನಮ್ಮ ಪೂರ್ವಿಕರಿಗೆ 'ಸರಕಾರಿ ಕಾಯಿದೆ'ಗಳಲ್ಲಿ ನಂಬುಗೆ ಇರಲಿಲ್ಲ, ಸರಕಾರಿ ಕಾಯಿದೆಗಳಿಗಿಂತಲೂ ಸಾಮಾಜಿಕ ಸಂಪ್ರದಾಯಗಳು ಹೆಚ್ಚು ಪರಿಣಾಮಕಾರಿಯಾಗಿರುತ್ತವೆಂದು ಅವರ ಅನುಭವವು. ಅದಕ್ಕನುಸರಿಸಿ ಈ ಬಗೆಯಾದ ಹಲವು ನಂಬುಗೆಗಳು (ಭಾವಿಕ ಕಲ್ಪನೆಗಳು) ನಮ್ಮಲ್ಲಿ ರೂಢವಾಗಿದೆ. ಅದೇನೇ ಇರಲಿ ಶ್ರೀನಿವಾಸರಾಯರಂತಹ ಸುಶಿಕ್ಷಿತರು ತಮ್ಮ ವೈಯಕ್ತಿಕ ಸಂಸ್ಕೃತಿ, ಸಂಪಾದನೆಯೊಂದಿಗೆ ತಮ್ಮ ಪಾಲಿಗೆ ಬಂದ ಸಾಮಾಜಿಕ ಕರ್ತವ್ಯವನ್ನೂ ನಿರ್ವಹಿಸಲು ಮುಂದೆ ಬಂದರೆ ಕನ್ನಡನಾಡು ಮತ್ತೆ ತನ್ನ ಮೊದಲಿನ ಬೆಡಗನ್ನು-ಬೆಳಕನ್ನು ಪಡೆಯದೆ ಇರಲಾರದು.

ಸಾಧನಕೇರಿ

ಶಂ. ಬಾ. ಜೋಶಿ

೩೧-೧೦-೪೨

# ಸಮಾಜ-ವಿಕಾಸಕ್ರಮ

**ಮೊದಲನೆಯ ಮೆಟ್ಟಿಲು**

## ಸಂಸ್ಕೃತಿ, ಸಂಸ್ಕೃತಿ-ಶಾಸ್ತ್ರದ ವಿವರ



**ಸಂಸ್ಕೃತಿಯ ಭಾವನೆ:** ಸಂಸ್ಕೃತಿಯೆಂದರೆ ಮಾನವನ ಎಲ್ಲ ಬಗೆಯ ಪ್ರಗತಿ ಸಿದ್ಧಿಗಳೆಂದೂ ಅವುಗಳಿಂದುಂಟಾಗುವ ರೀತಿನೀತಿಗಳೆಂದೂ ನಾವು ತಿಳಿಯುತ್ತೇವೆ.

ಪ್ರತಿಯೊಬ್ಬ ಮನುಷ್ಯನು ಮಾನವಸಮಾಜದಲ್ಲಿರುವ ತನ್ನ ಸಂಗಡಿಗರ ಹಿತಕ್ಕಾಗಿ ತನ್ನ ಜ್ಞಾನಭಾಂಡಾರವನ್ನು ಮೀಸಲಾಗಿಡಬಹುದು. ಪರಂಪರಾಗತವಾದ ಇಲ್ಲವೆ ಪರಿಸ್ಥಿತಿಯ ಮೂಲಕ ದೊರೆತ ಒಬ್ಬ ವ್ಯಕ್ತಿಯ ಜ್ಞಾನವು, ಭಾಷೆಯ ಬೆಳವಣಿಗೆಯ ಮೂಲಕವೂ, ಬರೆದಿಟ್ಟ ಶಾಶ್ವತವಾದ ಶಿಲಾಲೇಖನ, ಗ್ರಂಥಗಳ ಮೂಲಕವೂ, ಎಲ್ಲ ಮಾನವ ಪ್ರಾಣಿಗಳ ಆಸ್ತಿಯಾಗಬಲ್ಲದು. ಒಂದೊಂದು ಪೀಳಿಗೆಯು ತನ್ನ ಹಿಂದಿನ ಪೀಳಿಗೆಯು ಮಾಡಿದ ಕೆಲಸವನ್ನು ಅಲ್ಲಿಂದ ಮುಂದೆ ಸಾಗಿಸಬಹುದು. ಇಂತು ಪ್ರಗತಿಪರ ಬದಲಾವಣೆಗಳು ಯಾವಾಗಲೂ ಆಗುತ್ತಲಿರುತ್ತವೆ.

ಪೂರ್ವಕಾಲದ ಅಸಂಸ್ಕೃತ ಕಾಡುಮನುಷ್ಯನ ಸ್ಥಿತಿಯನ್ನೂ ಈ ಹೊತ್ತಿನ ಸುಸಂಸ್ಕೃತ ಒಬ್ಬ ಪಟ್ಟಣಿಗನ ಇರುವಿಕೆಯನ್ನೂ ನೋಡಿದರೆ ಮಾನವಸಂಸ್ಕೃತಿಯು ಹೇಗೆ ಪ್ರಗತಿಯನ್ನು ಹೊಂದುತ್ತ ನಡೆದಿದೆ ಎಂಬುದು ಗೋಚರವಾಗುತ್ತದೆ. ಕಾಡುಮನುಷ್ಯನು ಗಡ್ಡೆಗೆಣಸುಗಳನ್ನು, ಕಾಡು-ಹಣ್ಣುಹಂಪಲುಗಳನ್ನು, ಪಶುಪಕ್ಷಿಗಳನ್ನು ತಿನ್ನು

ತ್ತಲೂ, ನಿಸರ್ಗಸಿದ್ಧವಾದ ಝುರಿ-ಕೊಳ್ಳಗಳ ನೀರನ್ನು ಕುಡಿದು ಗವಿಕಂದರಗಳಲ್ಲಿ ವಾಸಿಸುತ್ತಲೂ, ತನ್ನ ಜೀವನಕ್ರಮವನ್ನು ಸಾಗಿಸುತ್ತಿದ್ದನು. ಈ ಹೊತ್ತಿನ ಸುಸಂಸ್ಕೃತ ಮಾನವನು ಭೂಮಿಯನ್ನು ಉತ್ತು, ಹಲವಾರು ಬೆಳೆಗಳನ್ನು ಬೆಳೆದು, ರೈಲು, ಕಾರಖಾನೆ, ಶಾಲೆ, ಗುಡಿಗುಂಡಾರ, ನಾಟಕ ಗೃಹ, ವಾಚನಾಲಯ, ಕಾಯಿದೆಮಂದಿರ, ಆಸ್ಪತ್ರಿ ಮುಂತಾದವುಗಳನ್ನು ಕಟ್ಟಿಕೊಂಡು, ರಾಜ್ಯವನ್ನು ಗಳಿಸಿಯೂ ಗಳಿಸುತ್ತಲೂ, ಜಗತ್ತಿನ ಎಲ್ಲ ಭಾಗಗಳೊಡನೆ ವ್ಯಾಪಾರೋದ್ಯಮಗಳನ್ನು ಸಾಗಿಸುತ್ತ, ಸೈನ್ಯ ಸಾಮಗ್ರಿಗಳೊಡನೆ ಯುದ್ಧಮಾಡುತ್ತ, ಸಂತತಿ–ಸಂಪಾದನ-ಧರ್ಮ, ವಸ್ತು ವಿನಿಮಯಶಾಸ್ತ್ರ, ಮಾನವಶಾಸ್ತ್ರ, ನೈತಿಕಶಾಸ್ತ್ರ, ವೈದ್ಯಶಾಸ್ತ್ರ ಮುಂತಾದ ಅನೇಕಾನೇಕ ಉಪಯುಕ್ತ ಶಾಸ್ತ್ರಗಳ ಸಹಾಯದಿಂದ ಅತಿ ವಿಜೃಂಭಣೆಯಿಂದ ತನ್ನ ಜೀವನಕ್ರಮವನ್ನು ಸಾಗಿಸುತ್ತಲಿದ್ದಾನೆ. ಸಂಸ್ಕೃತಿಯ ಇಂತಹ ಎರಡು ಮಟ್ಟಗಳನ್ನು ಪರಿಶೀಲಿಸಿ ನೋಡಿದರೆ ಮಾನವ ಸಂಸ್ಕೃತಿಯು ಕ್ರಮೇಣ ಪ್ರಗತಿಯನ್ನು ಹೊಂದುತ್ತ ನಡೆದಿದೆ ಎಂದು ತಿಳಿದು ಬರುತ್ತದೆ.

**ಸಂಸ್ಕೃತಿಯ ಐತಿಹಾಸಿಕ ಮತ್ತು ಇತಿಹಾಸ ಪೂರ್ವದ ಸ್ವರೂಪಗಳು:** ಅತಿ ಪೂರ್ವಕಾಲದ ಜನರು ನಾಗರಿಕತೆಯ ಬೆಳೆವಣಿಗೆಯನ್ನು ಅಷ್ಟೊಂದು ಸ್ಪಷ್ಟವಾಗಿ ಕಂಡುಹಿಡಿದಿರಲಿಲ್ಲ. ಜಗತ್ತಿನಲ್ಲಿಯ ಎಲ್ಲ ವಿಷಯಗಳೂ ತಮ್ಮ ಕಾಲದಲ್ಲಿದ್ದಂತೆಯೇ ತಮ್ಮ ಪೂರ್ವಜರ ಕಾಲದಲ್ಲಿದ್ದವೆಂದು ಕೆಲವರ ಊಹೆಯಾಗಿತ್ತು. ಮತ್ತೆ ಕೆಲವರು ಕೃತಯುಗವು ತಮ್ಮ ಪೂರ್ವದಲ್ಲಿಯೇ ಆಗಿಹೋಯಿತೆಂದೂ, ಮಾನವನು ತನ್ನ ಪಾಪಕರ್ಮದ ಮೂಲಕ ಅಧೋಗತಿಗೆ ಇಳಿಯುತ್ತಿದ್ದಾನೆಂದೂ, ಕಲಿಯುಗವು ಪ್ರಾರಂಭವಾಗಿರುತ್ತದೆಂದೂ ಭಾವಿಸುತ್ತಿದ್ದರು. ಆದರೆ ಈ ಹೊತ್ತು ನಾವು ಸರಿಯಾಗಿ ಪರಿಶೀಲಿಸಿದರೆ ನಾಗರಿಕತೆಯು ಕ್ರಮವಾಗಿ ಹೇಗೆ ಬೆಳೆಯುತ್ತ ಬಂದಿದೆ ಎಂಬುದನ್ನು ಕಾಣಬಲ್ಲೆವು. ಮೊನ್ನೆಮೊನ್ನಿನ ವರೆಗೆ, ಜಗತ್ತು ನಿರ್ಮಿತವಾಗಿ ಕೇವಲ ೬೦೦೦ ವರುಷಗಳಾದವೆಂಬ ಗ್ರಹಿಕೆ ಜನರಲ್ಲಿತ್ತು. ಇಂತಹ ತಿಳಿವಳಿಕೆ ತೀರ ಅಸಮಂಜಸವಾದುದೆಂಬುದು ಈಗ ಸ್ಪಷ್ಟವಾಗಿದೆ. ಬುನಾದಿಕಾಲದ ಮಾನವನ ಮತ್ತು ಇತಿಹಾಸ ಕಾಲದ ಮಾನವನ ನಾಗರಿಕತೆಗಳನ್ನು ಪರ

ಸ್ಪರ ಹೋಲಿಸಿ ನೋಡಿದರೆ ಇತಿಹಾಸಕಾಲದ ಮಾನವನ ನಾಗರಿಕತೆ ಬಹು ಮೇಲ್ತರಗತಿಯದೆಂದು ತಿಳಿದುಬರುತ್ತದೆ. ನಾಗರಿಕತೆಯು ಪೂರ್ವ ಕಾಲದಲ್ಲಿ ಎಷ್ಟೊಂದು ಸಾವಕಾಶವಾಗಿ ಪ್ರಗತಿಯನ್ನು ಹೊಂದುತ್ತ ಒಂದಿತೆಂಬುದನ್ನು ಲಕ್ಷಿಸಿದರೆ, ಜಗತ್ತು ಇತಿಹಾಸಕಾಲಕ್ಕಿಂತಲೂ ಪೂರ್ವದಲ್ಲಿಯೇ ಅನೇಕಾನೇಕ ವರುಷಗಳ ಮುಂಚಿತವಾಗಿಯೇ ನಿರ್ಮಿತವಾಗಿರಲಿಕ್ಕೆಬೇಕು ಎಂಬ ಮಾತು ನಮ್ಮ ನಿದರ್ಶನಕ್ಕೆ ಬರುತ್ತದೆ. ಕೊರೆದಿಟ್ಟ ಶಿಲಾಲೇಖನಗಳ ಮೇಲಿಂದ ನಾಗರಿಕತೆಯ ಮಟ್ಟವನ್ನು ಅರಿತುಕೊಳ್ಳಬಹುದು. ಆದರೆ ಬರೆಯುವ ಕಲೆ ಗೊತ್ತಿದ್ದರೂ ಬಹುಕಾಲದ ವರೆಗೆ ನಮ್ಮ ಪೂರ್ವಜರು ಬರೆದಿಡುವ ಸಾಂಪ್ರದಾಯವನ್ನಿಟ್ಟುಕೊಂಡಿರಲಿಲ್ಲವಾಗಿ ತೋರುತ್ತದೆ. ಆದುದರಿಂದ ಬರೆದಿಡದ ಇಂತಹ ನಾಗರಿಕತೆಯ ಅನೇಕ ಮೆಟ್ಟಲುಗಳನ್ನು ಗುರುತಿಸುವುದು ಬಹು ದುಸ್ತರ.

**ಇತಿಹಾಸ ಪೂರ್ವಕಾಲದಿಂದ ಊಹಿಸಬಹುದಾದ ಮಾತುಗಳು:** ಬರೆದಿಟ್ಟ ಆಧಾರಗಳಿಲ್ಲದ ಇತಿಹಾಸ ಪೂರ್ವಕಾಲದ ಸಂಗತಿಗಳನ್ನು ಬೇರೆ ಸಂಶೋಧನಮಾರ್ಗಗಳಿಂದ ಕಂಡುಹಿಡಿಯಬೇಕು. (೧) ಪ್ರಾಣಿಜೀವನಶಾಸ್ತ್ರ ( Palaeontology ) ದಿಂದ ಭೂಪೃಷ್ಠಭಾಗದಲ್ಲಿರುವ ಬುನಾದಿ ಕಾಲದ ಮನುಷ್ಯನ ಆಯುಧ, ಉಪಕರಣ, ಕುಡಿಯುವ ಅಡಿಗೆ ಮಾಡುವ ಪಾತ್ರೆಗಳು, ಗೋರಿಗಳು, ಜಯಸ್ತಂಭಗಳು ಮುಂತಾದವುಗಳ ಮೇಲಿಂದ ಆ ಕಾಲದ ನಾಗರಿಕತೆಯ ಬಗ್ಗೆ ಸಾಕಷ್ಟು ಸ್ಪಷ್ಟವಾದ ಅರಿವನ್ನುಂಟುಮಾಡಿಕೊಳ್ಳಬಹುದು. (೨) ತುಲನಾತ್ಮಕ ಮಾನವವಂಶಶಾಸ್ತ್ರ ( Ethnology ) ದಿಂದಲೂ ಮಾನವನ ಅನುವಂಶಿಕ ಗುಣಧರ್ಮಗಳನ್ನು ಗುರುತಿಸಬಹುದು. ಹಿಂದಿನ ಪ್ರವಾಸಿಕರು ಜಗತ್ತಿನ ವಿವಿಧ ಭಾಗಗಳಲ್ಲಿ ಮಾಡಿದ ಪ್ರವಾಸಗಳ ಮೇಲಿಂದ ಮನುಷ್ಯನ ನಾಗರಿಕತೆಯ ಬೇರೆ ಬೇರೆ ಮೆಟ್ಟಲುಗಳ ಚಿತ್ರವನ್ನೇ ಕಂಡುಕೊಳ್ಳಬಹುದು. ಈ ಮೆಟ್ಟಲುಗಳಿಂದ ಮನುಷ್ಯನು ಅತಿ ಒರಟು ಸ್ಥಿತಿಯಿಂದ ಈ ಹೊತ್ತಿನ ಅತಿ ಸುಸಂಸ್ಕೃತ ಸ್ಥಿತಿಯನ್ನು ಹೇಗೆ ಹೊಂದಿದ್ದಾನೆಂಬುದು ತಿಳಿದುಬರುವಂತಿದೆ. ಮಾನವಕುಲದ ಬಾಲ್ಯಾವಸ್ಥೆಯು ತೀರ ಹುರಿಗೆಡಿಸುವಂತಿದೆ. ನಮ್ಮ ಪೂರ್ವಜರ ವಿಚಾರಶಕ್ತಿ ಅಷ್ಟೊಂದು ಬೆಳೆದಿರಲಿಲ್ಲವೆಂಬುದೇ ಇದಕ್ಕೆ

ಕಾರಣ. (೩) ಭಾಷಾಶಾಸ್ತ್ರದಿಂದಲೂ ಅನೇಕ ವಿಷಯಗಳು ಬೆಳಕಿಗೆ ಬರುತ್ತವೆ. ಶಬ್ದಗಳೂ ಅವುಗಳ ಅರ್ಥವೂ ಹೇಗೆ ಉಂಟಾದವೆಂದು ವಿವೇಚಿಸಿದರೆ ಪೂರ್ವಕಾಲದ ಜನಜೀವನದ ವಿಷಯವಾಗಿ ವಿವಿಧ ವಿಷಯಗಳು ಗೊತ್ತಾಗುತ್ತವೆ. ಪುರಾಣ, ಧರ್ಮ, ಈ ಹೊತ್ತು ಬಳಕೆಯಲ್ಲಿರುವ ಅರ್ಥವಾಗದ ಅನೇಕ ಪದ್ಧತಿಗಳು, ಇವುಗಳ ಮೇಲಿಂದಲೂ ಸಮಾಜಶಾಸ್ತ್ರದ ಬಗ್ಗೆ ಎಷ್ಟೋ ಮಾತುಗಳನ್ನು ನಾವು ಊಹಿಸಬಹುದು.

**ಸಮಾಜಶಾಸ್ತ್ರದ ಧ್ಯೇಯ** : ಮನುಷ್ಯಪ್ರಾಣಿಯ ಆದಿಸ್ವರೂಪವು ಅತಿ ಕಾಡುಸ್ಥಿತಿಯಲ್ಲಿದ್ದರೂ, ಅವನಲ್ಲಿ ಕ್ರಮೇಣ ಪ್ರಗತಿಯು ಹೇಗೆ ಉಂಟಾಗುತ್ತಲಿದೆ ಎಂಬುದು ಸಮಾಜಶಾಸ್ತ್ರದಿಂದ ತಿಳಿದುಬರುವ ಮಾತಾಗಿದೆ. ನಮ್ಮ ಪೂರ್ವಕಾಲವೇ ಕೃತಯುಗವೆಂದೂ, ನಮ್ಮ ಪೂರ್ವಜರೇ ಪುಣ್ಯವಂತರೆಂದೂ, ನಮ್ಮದು ಕಲಿಯುಗ, ನಾವು ಪಾಪಿಗಳು ಅಧರ್ಮಿಗಳು, ನಮ್ಮಿಂದ ಮಾನವಕುಲದ ಅವನತಿಯೇ ಉಂಟಾಗುತ್ತಲಿದೆ ಎಂದೂ ಹತವೀರ್ಯರಾಗುವ ಹೇಡಿಗಳನ್ನು ಸಮಾಜಶಾಸ್ತ್ರವು ಹುರಿದುಂಬಿಸಿ ಪ್ರಗತಿಪರ ಮಾರ್ಗಕ್ಕೆ ಹಚ್ಚುತ್ತದೆ. ಪುಣ್ಯವೂ ಸೌಖ್ಯವೂ ನಮ್ಮ ಪೂರ್ವಜರ ' ಗುತ್ತಿಗೆ ' ಯಲ್ಲ. ಮಾನವನು ಒಂದು ಸಾಮಾಜಿಕ ಪ್ರಾಣಿ. ಮಾನವ ಸಮಾಜವು ಹಿಂದೆ ಎಂದೋ ಒಂದುಕಾಲಕ್ಕೆ ಪರಿಪೂರ್ಣವಾಗಿತ್ತು, ಈಗ ಅಧೋಗತಿಗಿಳಿದಿದೆ ಎಂಬುದು ಹುರಳಿಲ್ಲದ ಮಾತು. ಪ್ರಯತ್ನಪೂರ್ವಕ ಸತತೋದ್ಯೋಗಿಯಾಗಿ ಮಾನವನು ಯಾವಾಗಲೂ ತನ್ನ ಉನ್ನತಿಯನ್ನು ಬೆಳೆಸುತ್ತ ಬಂದಿದ್ದಾನೆ. ಮಾನವ ಸಮಾಜವು ಇನ್ನೂ ಬೆಳೆಯಲು, ಬೆಳೆದು ಸಂಪೂರ್ಣಾವಸ್ಥೆಯನ್ನು ಪಡೆಯಲು ಅನುವಿದೆ. ಇಂತಹ ಸಮಾಜದ ಹುಟ್ಟುಬೆಳೆವಣಿಗೆಗಳನ್ನು ಅರಿತುಕೊಂಡು ಅಭ್ಯಸಿಸಿ ಅದನ್ನು ಪರಿಪೂರ್ಣಾವಸ್ಥೆಗೆ ಮುಟ್ಟಿಸಲು ಮಾನವನಿಗೆ ಸಹಾಯಕಾರಿಯಾಗಬೇಕೆಂಬುದೇ, ಇತ್ತಿತ್ತಲಾಗಿ ಪ್ರಚಾರದಲ್ಲಿ ಬಂದ **ಸಮಾಜಶಾಸ್ತ್ರದ** ಧ್ಯೇಯ.

**ಸಮಾಜಶಾಸ್ತ್ರದ ಉಪಯುಕ್ತತೆ** : ಪ್ರತಿಯೊಬ್ಬ ವಿದ್ಯಾವಂತನಿಗೂ ತನ್ನ ಆಯುಷ್ಕ್ರಮದಲ್ಲಿ, ತನ್ನ ಇರುವಿಕೆಯ ಸ್ಥಿತಿಗತಿಗಳ ಬಗ್ಗೆಯೂ ಈ ಅನಂತವಾದ ಮಾನವಪ್ರಪಂಚದ ಆಗುಹೋಗುಗಳ

ಬಗ್ಗೆಯೂ ಅರಿತುಕೊಳ್ಳಬೇಕೆಂಬ ಲಾಲಸೆ ಉಂಟಾಗದಿರಲಾರದು. ವಿಜ್ಞಾನ ರಹಿತ ಜೀವನವು ಕೇವಲ ಪಶುಗಳ ಜೀವನದಂತೆ, ಉಪಜೀವನ, ಪ್ರಜೋತ್ಪಾದನ, ಮರಣ ಮುಂತಾಗಿ "ಆಹಾರನಿದ್ರಾಭಯಮೈಥುನಂಚ ಸಾಮಾನ್ಯಮೇತತ್ ಪಶುಭಿರ್ನರಾಣಾಂ" ಎಂಬ ಉಕ್ತಿಯ ಮೇರೆಗೆ ಲಯಹೊಂದುತ್ತದೆ.

ವಿಕಾಸಧರ್ಮದಲ್ಲಿ ಜೀವನದ ರಹಸ್ಯವಿದೆ. ನಮ್ಮ ಇರುವಿಕೆಯ ಅರಿವು ನಮಗೆ ಉಂಟಾಗಬೇಕಾದರೆ ಅದು ಹೇಗೆ ಉಂಟಾಯಿತೆಂಬುದನ್ನು ನಾವು ಮೊದಲು ಅರಿತುಕೊಳ್ಳಬೇಕು. ಅರಿಯಲಸದಳವಾದ ಈ ಹೊತ್ತಿನ ಮಾನವಸಮಾಜದ ಸ್ಥಿತಿಯು ನಮಗೆ ಸ್ಪಷ್ಟವಾಗಿ ತಿಳಿಯಬೇಕಾದರೆ ಅದರ ಬೆಳೆವಣಿಗೆಯ ಇತಿಹಾಸವನ್ನು ತಿಳಿದುಕೊಳ್ಳಬೇಕು. ಒಂದು ಕ್ಲಿಷ್ಟ ಸಮಸ್ಯೆಯನ್ನರಿತುಕೊಳ್ಳುವುದಾದರೆ ಅದರ ಹುಟ್ಟುಬೆಳೆಗೆಗಳನ್ನು ಪರಿಶೀಲಿಸದೆ ಗತ್ಯಂತರವಿಲ್ಲ. ಸಮಾಜಶಾಸ್ತ್ರವು, ಮಾನವನ ನಾಗರಿಕತೆಯನ್ನೂ ಅದು ಬೆಳೆದ ರೀತಿಯನ್ನೂ ತಿಳಿಸಿಕೊಡುತ್ತದೆ. ಅರಿಯಲಸಾಧ್ಯವಾದ ಪ್ರಚಲಿತ ವಿಷಯಗಳನ್ನರಿತುಕೊಳ್ಳುವುದೂ, ಭವಿಷ್ಯದಲ್ಲಿ ಇಣಿಕಿನೋಡುವುದೂ ಪ್ರತಿಯೊಂದು ಶಾಸ್ತ್ರದ ಅತ್ಯುಚ್ಚ ಧ್ಯೇಯವಾಗಿದೆ.

ಮಾನವಸಂಸ್ಕೃತಿಯು ನಿಶ್ಚಿತಮಾರ್ಗವನ್ನನುಸರಿಸುವ, ನಿರ್ದಿಷ್ಟ ನಿಯಮಗಳನ್ನು ಪರಿಪಾಲಿಸುವ ಪ್ರಗತಿಪರ ಧರ್ಮವಾಗಿದೆ. ಈ ನಿಯಮಗಳನ್ನು ನಾವು ಒಮ್ಮೆ ಅರಿತುಕೊಂಡರೆ ನಮ್ಮ ಗೊತ್ತುಗುರಿಗಳನ್ನೂ ನಮ್ಮ ಭವಿತವ್ಯತೆಯನ್ನೂ ನಾನು ಕಂಡುಕೊಳ್ಳಬಹುದು. ವಿಕಾಸಧರ್ಮದ ವಿಷಯವನ್ನು ಹೆಚ್ಚೆಚ್ಚು ತಿಳಿದುಕೊಂಡಂತೆ, ಮನುಷ್ಯನ ಮುಂಬರುವ ಸ್ಥಿತಿಗತಿಗಳನ್ನು ಹೆಚ್ಚೆಚ್ಚು ಸ್ಪಷ್ಟವಾಗಿ ಊಹಿಸಬಹುದು. ಆದುದರಿಂದಲೇ ಪ್ರಾಣಿಜೀವನಶಾಸ್ತ್ರದ ಮಹತ್ವ ಅಷ್ಟೊಂದು. ಸಮಾಜಶಾಸ್ತ್ರವು ಇನ್ನೂ ಬಾಲ್ಯಾವಸ್ಥೆಯಲ್ಲಿದೆ. ಈಗಲೇ ಅದರ ಭಾವೀ ಕಾರ್ಯಕ್ಷೇತ್ರ ಫಲೋದಯ ಇವುಗಳ ಬಗ್ಗೆ ನಿಶ್ಚಿತವಾಗಿ ಹೇಳುವುದು ಅಸಾಧ್ಯ. ಆದರೂ ಉಪಯುಕ್ತವಾದ ಅನೇಕ ವಿಷಯಗಳನ್ನು ಅದು ನಮಗೆ ಸಲ್ಲಿಸಬಲ್ಲದೆಂದು ಮಾತ್ರ ನಿಃಸಂಶಯವಾಗಿ ಹೇಳಬಹುದು. ಅದು ಪ್ರಗತಿಗೆ ಮಾರ್ಗದರ್ಶಿಯಾಗುತ್ತದೆ. ಪ್ರಗತಿಯ ಅನೇಕ ಮೆಟ್ಟಲುಗಳನ್ನು ತೋರಿಸಿ, ಪ್ರತಿ

ಯೊಂದು ಮೆಟ್ಟಲೂ ತನಗಿಂತ ಮೇಲಿರುವ ಮೆಟ್ಟಲಿಗೆ ನಮ್ಮನ್ನು ಒಯ್ಯು ವಂತೆ ಮಾಡುತ್ತದೆ. ಅಭಿವೃದ್ಧಿಯು ಅತ್ಯುಚ್ಚ ಶಿಖರವನ್ನು ಮುಟ್ಟಿದೆ, ಅದಕ್ಕಿಂತ ಹೆಚ್ಚಿನ ಬೆಳೆವಣಿಗೆಗೆ ಅವಕಾಶವಿಲ್ಲವೆಂಬ ತಪ್ಪು ತಿಳುವಳಿಕೆ ಯನ್ನು ಹೊಡೆದೋಡಿಸುತ್ತದೆ. ಸಮಾಜಶಾಸ್ತ್ರವು ಒಳ್ಳೆ ಮುತ್ಸದ್ದಿಗೂ ಕೂಡ ಸಹಾಯಕಾರಿಯಾಗಬಲ್ಲದು. ಈ ಶಾಸ್ತ್ರವನ್ನರಿಯದ ರಾಜಕಾರಣ ಪಟುವು ಯೋಗ್ಯಮಾರ್ಗವನ್ನರಿತುಕೊಳ್ಳುವದರ ಬದಲು ತನ್ನ ಕಾಲದ ಪ್ರಬಲವಿಚಾರ ಪ್ರವಾಹದಿಂದ ಸೆಳೆದೊಯ್ಯಲ್ಪಡಬಹುದು. ಶಕ್ತಿವಂತನಾಗಿದ್ದರೂ ಸಾಧಿಸಬಹುದಾದ ಗುರಿಯನ್ನು ಸಾಧಿಸದೇ ಅಡ್ಡಮಾರ್ಗವನ್ನು ಹಿಡಿದು ಯಾವುದಾದರೊಂದು ಕೆಲಸಮಾಡುತ್ತ ವ್ಯರ್ಥ ಕಾಲಹರಣ ಮಾಡಬಹುದು. ವಿಕಾಸಧರ್ಮದ ಗುಟ್ಟನ್ನರಿಯದವನು ಅದಕ್ಕೆ ಅಧೀನ ನಾಗಿರಬೇಕಾಗುವುದು. ಅರಿತವನು ಅದನ್ನು ಆಳಬಲ್ಲನು. ನಾಗರಿಕತೆ ಯನ್ನು ಆತ್ಮೋನ್ನತಿಗಾಗಿ ಉಪಯೋಗಿಸಿಕೊಳ್ಳಬಲ್ಲನು.

ಸಮಾಜಶಾಸ್ತ್ರವು ಉಳಿದ ಶಾಸ್ತ್ರಗಳಿಗೂ ವಿಶೇಷತಃ ಮಾನಸ ಶಾಸ್ತ್ರಕ್ಕೂ ಉಪಯುಕ್ತವಾಗಬಲ್ಲದು ನಮ್ಮ ಮನಸ್ಸನ್ನು ಕಾರ್ಯ ರಂಗಕ್ಕೆ ಪ್ರಚೋದಿಸುವ ಅನೇಕ ವಿಚಾರಗಳು ನಮ್ಮೊಳಗಿನ ಒಬ್ಬ ವ್ಯಕ್ತಿ ಯಿಂದ ಅಥವಾ ಕೆಲವೊಂದು ವ್ಯಕ್ತಿಗಳ ಗುಂಪಿನಿಂದುಂಟಾಗದೆ ನಮಗಿಂತ ಸಾವಿರಾರು ವರುಷ ಮುಂಚಿತವಾಗಿದ್ದ ನಮ್ಮ ಪೂರ್ವಜರಿಂದುಂಟಾಗಿ ವಂಶಪರಂಪರೆಯಿಂದ ನಮಗೆ ಬಂದ ಆಸ್ತಿಯಂತಿರುತ್ತವೆ ಒಬ್ಬ ವ್ಯಕ್ತಿಯು ತನ್ನ ಕಾರ್ಯದ ಫಲವಾಗಿ ಲಭಿಸಿದ ಜ್ಞಾನಕ್ಕಿಂತಲೂ ಈ ನಮ್ಮ ಪೂರ್ವಾರ್ಜಿತ ಜ್ಞಾನವು ಹೆಚ್ಚು ಮಹತ್ವದ್ದಾಗಿರುತ್ತದೆ. ಹೀಗೆ ಆನುವಂಶಿಕವಾಗಿ ಲಭಿಸಿದ ಜ್ಞಾನವನ್ನವಲಂಬಿಸಿಯೇ ಮಾನಸಶಾಸ್ತ್ರವು ನೂತನ ಕಾರ್ಯ ರಂಗವನ್ನೇರ್ಪಡಿಸಿದೆ. ಸಾಮಾಜಿಕ ಮಾನಸಶಾಸ್ತ್ರವು, ನಮ್ಮಲ್ಲಿ ವಿಚಾರ ಗಳು ಉದ್ಭೂತವಾಗುವ ರೀತಿಯನ್ನೂ, ಹುಟ್ಟಿದಂದಿನಿಂದ ಸಾಯುವವರೆಗೆ ನಾವು ಮಾಡುವ ಕಾರ್ಯಕಲಾಪಗಳಲ್ಲಿ ಇವು ಮಾಡುವ ಹೆಚ್ಚುಕಡಿಮೆ ಗಳನ್ನೂ ಪ್ರಕಟಿಸಲು ಪ್ರಯತ್ನಿಸುತ್ತದೆ.

—

# ಸಂಸ್ಕೃತಿಯ ಮೂಲ



ಭೂಮಂಡಲವು ಹುಟ್ಟಿದ ಬಳಿಕ ಲಕ್ಷಾಂತರ ವರುಷಗಳ ಮೇಲೆ ಮಾನವನು ಭೂಮಿಯಮೇಲೆ ಹುಟ್ಟಿದನು. ಆದುದರಿಂದ ಮಾನವನ ತೀರ ಮೊದಲಿನ ಸ್ಥಿತಿಯನ್ನೂ, ಸಂಸ್ಕೃತಿಯ ಹುಟ್ಟನ್ನೂ ಅರಿತುಕೊಳ್ಳಲು ಭೂಮಂಡಲದ ಇತಿಹಾಸ, ಭೂಗರ್ಭಶಾಸ್ತ್ರ ಇವುಗಳ ಸಹಾಯವನ್ನು ಕೋರಬೇಕಾಗುತ್ತದೆ. ಇವುಗಳನ್ನು ಸಾಧಾರಣವಾಗಿ ನಿರೀಕ್ಷಿಸಿದರೆ ಪೃಥ್ವಿಗೂ ಮನುಷ್ಯನಿಗೂ ಇರುವ ನಿಕಟ ಸಂಬಂಧವೂ, ಪ್ರಕೃತಿಸಿದ್ಧವಾದ ಅನೇಕ ವಸ್ತುಗಳಲ್ಲಿ ಮಾನವನಿಗಿರುವ ಸ್ಥಾನವೂ ಸಿದ್ಧವಾಗುತ್ತವೆ.

**ಭೂಗರ್ಭನಿರೀಕ್ಷಣೆ:** ಭೂಮಿಯ ಮೂಲ ಘಟಕಗಳನ್ನು ಸರಿಯಾಗಿ ನಿರೀಕ್ಷಿಸಿದರೆ ಅವುಗಳಲ್ಲಿ (೧) ಲಾವಾರಸದಿಂದುಂಟಾದ ಬಂಡೆಗಲ್ಲುಗಳು ಮತ್ತು (೨) ನೀರಿನ ಕೆಲಸದಿಂದುಂಟಾದ ಪದರುಗಳುಳ್ಳ ಬಂಡೆಗಲ್ಲುಗಳು ಹೀಗೆ ಇಬ್ಬಗೆಯ ಬಂಡೆಗಲ್ಲುಗಳಿದ್ದುದು ಕಂಡುಬರುವದು. ಅತ್ಯಂತ ಆಳದಲ್ಲಿದ್ದ ಬಂಡೆಗಲ್ಲುಗಳು ತೀರ ಹಳೆಯವು. ಪದರುಗಳುಳ್ಳ ಬಂಡೆಗಲ್ಲುಗಳು ಮಾನವನ ಇತಿಹಾಸವನ್ನು ಪ್ರಕಟಿಸಲು ಸಹಾಯಕಾರಿಯಾಗಬಲ್ಲವು. ಅವುಗಳ ಪದರುಗಳಲ್ಲಿ ಕಂಡುಬರುವ ಪ್ರಾಣಿಗಳ ಮತ್ತು ವಸ್ತುಗಳ ಅವಶೇಷಗಳ ಮೇಲಿಂದ ಜಂತುಗಳು ಉಂಟಾದ ರೀತಿಯಲ್ಲಿ ಕೆಳಗಿನ ಕ್ರಮವನ್ನು ಕಾಣಬಹುದು.

೧ ನೀರಿನಲ್ಲಿ ವಾಸವಾಗಿರುವ ವಸ್ತುಗಳು. ಸಮುದ್ರದಲ್ಲಿಯ ವನಸ್ಪತಿಗಳು (algae ).

೨ ಫರ್ನಗಿಡಗಳು ಮತ್ತು ಮೀನುಗಳು.

೩ ಸುರಂಗ ವೃಕ್ಷಗಳು ( Coniferous trees ) ಸರೀಸೃಪ ಪ್ರಾಣಿಗಳು.

೪ ಎಲೆಗಳುದುರುವ ಗಿಡಗಳು ಮತ್ತು ಸಸ್ತನ ಪ್ರಾಣಿಗಳು—ಮನುಷ್ಯ.

ಭೂಗರ್ಭದ ಎಲ್ಲ ತರಗಳು ಕ್ರಮೇಣ ನಡೆದುಬಂದ ಸಂಕ್ರಾಂತಿಯಿಂದುಂಟಾದಂತೆ, ಎಲ್ಲ ಮೇಲ್ತರಗತಿಯ ಪ್ರಾಣಿಗಳೂ ಸಸ್ಯಾದಿಗಳೂ ಆಕಸ್ಮಿಕವಾಗಿ ಉದ್ಭೂತವಾಗದೇ ಮೊದಲೇ ಉಂಟಾಗಿದ್ದ ಸೂಕ್ಷ್ಮಜಂತುಗಳಿಂದ ಸಾವಿರಾರು ವರುಷಗಳ ದೀರ್ಘ ಅವಧಿಯಲ್ಲಿ ರೂಪಾಂತರವನ್ನು ಹೊಂದುತ್ತ ಬಂದಿವೆ.

**ಇತಿಹಾಸ ಪೂರ್ವದ ಬಗೆಗಳು :** ಮೇಲೆ ವಿವರಿಸಿದ ತತ್ವದ ಮೇರೆಗೆ ಮನುಷ್ಯನು ಸೂಕ್ಷ್ಮವಾದ ಕೀಳುಪ್ರಾಣಿಗಳಿಂದಲೇ ರೂಪುಗೊಂಡನೆಂದು ಧೈರ್ಯವಾಗಿ ಹೇಳಬಹುದು. ಆದರೆ ಇಂತಹ ಸೂಕ್ಷ್ಮ ಜಂತುಗಳು ಯಾವವು? ಭೂಗರ್ಭಶಾಸ್ತ್ರದ ಮೂರನೆಯ ಮೆಟ್ಟಲಿನಲ್ಲಿ, ಯಾವ ಸಸ್ತನ ಪ್ರಾಣಿಗಳಿಂದ ಮನುಷ್ಯನು ಉಂಟಾದನೋ, ಅವು ಬಾಲವಿಲ್ಲದ ಮಂಗನ ರೂಪವನ್ನು ಹೊಂದಿದ್ದಂತೆ ಕಂಡುಬರುತ್ತದೆ. ಆದರೆ ಮಾನವನ ಹುಟ್ಟಿನ ಬಗ್ಗೆ ಇಲ್ಲಿ ನಿಶ್ಚಿತ ಚಿನ್ಹಗಳನ್ನು ಕಾಣಲಾರೆವು. ಭೂಗರ್ಭಶಾಸ್ತ್ರದಲ್ಲಿ ನೀರಿನ ಕಾರ್ಯವು ಸುರುವಾದ ಕಾಲವನ್ನು ನಿರೀಕ್ಷಿಸಿದರೆ ಮನುಷ್ಯನು ತನ್ನ ಬುನಾದಿಕಾಲದ ರೂಪವನ್ನು ಬಿಟ್ಟುಕೊಟ್ಟು ಎಷ್ಟೋ ಬಗೆಯ ಸಂಸ್ಕೃತಿಯನ್ನು ಪಡೆದ 'ಕಾಡು ಬೇಡರ' ರೂಪವನ್ನು ತಾಳಿದಂತೆ ಕಂಡುಬರುತ್ತದೆ. ಈ ಪ್ರಕಾರವಾಗಿ ಮಂಗನಿಗೂ ಮಾನವನಿಗೂ ನಡುವಿರುವ ಸ್ಥಿತಿಯ ಬಗ್ಗೆ ಭೂಗರ್ಭಶಾಸ್ತ್ರವಾಗಲಿ, ಮಾನವವಂಶಶಾಸ್ತ್ರವಾಗಲಿ ಯಾವುದನ್ನೂ ಹೇಳಲಾರವು. ಮಾನವನ ವಿಕಾಸಮಾರ್ಗದಲ್ಲಿ ಇದುವೆ ಅತಿ ಮಹತ್ವದ ಕಾಲ. ಇಲ್ಲಿಯೇ ಅವನು ಇನ್ನಿತರ ಪ್ರಾಣಿಗಳಿಂದ ಭಿನ್ನನಾಗಿ ಸಂಸ್ಕೃತಿಯ ಮೆಟ್ಟಲುಗಳನ್ನು ಏರಲು ತೊಡಗಿದುದು. ಆದುದರಿಂದ ಕೇವಲ ಶಾಸ್ತ್ರೀಯ ರೀತಿಯಿಂದ ಎಷ್ಟೊಂದು ಊಹಿಸಲು ಸಾಧ್ಯವೋ ಅಷ್ಟೊಂದು ಊಹಿಸಿಕೊಂಡು ತೃಪ್ತಿಪಡೆಯಬೇಕಾಗಿದೆ. ಮಾನವಸಂಸ್ಕೃತಿಯ ತೀರಕೆಳಗಿನ ಮೆಟ್ಟಲುಗಳನ್ನು ಕೂಡ ಪರಿಶೀಲಿಸಿದರೆ ಆಗ ಮಾನವನಿಗೆ ಮಾತು, ಉಪಕರಣಗಳು, ಆಯುಧಗಳು, ಧರ್ಮದ ಬಗ್ಗೆ ಕೆಲವೊಂದು ಚಿಲ್ಲರೆ ವಿಚಾರಗಳು, ಬೆಂಕಿಯನ್ನು ಹೊತ್ತಿಸುವ ರೀತಿ, ಗೊತ್ತಿದ್ದವೆಂದು

ತೋರುತ್ತದೆ. ಈ ಬಗೆಯ ಜ್ಞಾನದ ಮೂಲಕವೇ ಅವನು ಪ್ರಾಣಿಕೋಟಿಯಲ್ಲಿ ಅತ್ಯುಚ್ಚ ಸ್ಥಾನವನ್ನು ಪಡೆದನು. ಇಂತಹ ಸಾಧನಗಳನ್ನು ಪೂರೈಸಿಕೊಂಡಿದ್ದ ನಮ್ಮ ಪೂರ್ವಜರಿಗೆ ಕೈಗಳಿದ್ದಿರಲಿಕ್ಕೆಬೇಕೆಂದೂ ಮತ್ತು ಅವರು ಗುಂಪು ಕಟ್ಟಿಕೊಂಡಿರುವವರಾಗಿದ್ದರೆಂದೂ ಸ್ಪಷ್ಟವಾಗಿ ಊಹಿಸಬಹುದು. ಯಾಕೆಂದರೆ ಕೈಗಳಿಲ್ಲದೆ ಇಂತಹ ಸಾಧನಗಳನ್ನು ಉಂಟುಮಾಡಿಕೊಳ್ಳುವುದೂ, ಗುಂಪಿಸಲ್ಲಿರದೆ ಭಾಷೆಯನ್ನು-ಬೆಳೆಸುವುದೂ ಸಾಧ್ಯವಿಲ್ಲ.

**ಕೈಗಳುಂಟಾದ ರೀತಿ:** ಕೈಯು ಅತ್ಯಂತ ಮಹತ್ವದ ಉಪಕರಣಗಳನ್ನು ಹುಡುಕಿ ತೆಗೆದ ನಂತರವೇ ಗೊತ್ತಾಗಿರಲಿಕ್ಕೆ ಸಾಕು. ಹಾಗಾದರೆ ಉಪಕರಣಗಳನ್ನು ಹುಟ್ಟಿಸದ ಮೊದಲು ಮನುಷ್ಯನು ಕೈಗಳನ್ನು ಹೇಗೆ ಉಪಯೋಗಿಸುತ್ತಿದ್ದನು? ಎಂಬ ಪ್ರಶ್ನೆ ಉಪಸ್ಥಿತವಾಗುತ್ತದೆ

ಎಲ್ಲ ಸಸ್ತನ ಪ್ರಾಣಿಗಳು ಪೂರ್ವದಲ್ಲಿ ಚತುಷ್ಪಾದಿಗಳಾಗಿದ್ದವೆಂಬುದು ಖಂಡಿತವಾಗಿ ಗೊತ್ತಾಗಿದೆ. ಅದರಂತೆ ಮಾನವನ ಪೂರ್ವಜರು ಕೂಡ ಚತುಷ್ಪಾದಿಗಳಾಗಿದ್ದರು. ಇದನ್ನು ನಾವು ವಿಕಾಸಧರ್ಮದ ಇತಿಹಾಸದ ಮೂಲಕವೂ, ಈಗಲೂ ಅವನಲ್ಲಿ ಕಂಡುಬರುವ ಕೆಲವೊಂದು ವಿಶಿಷ್ಟ ಚಿನ್ಹಗಳ ಮೂಲಕವೂ ಸಿದ್ಧಮಾಡಬಹುದು. ಅವನ ದೇಹದ ಊರ್ಧ್ವಭಾಗವು ಪೂರ್ವದಲ್ಲಿ ಓಡಾಡಲಿಕ್ಕೆ ಉಪಯುಕ್ತವಾದ ಇಂದ್ರಿಯಗಳಾಗಿದ್ದವು. ಹಾಗಾದರೆ ಕೈಗಳುಂಟಾದ ಬಗೆ ಹೇಗೆ?

ಒಂದು ಸಾಧಾರಣ ಊಹೆ ಎಂದರೆ ಗಿಡಗಳ ಮೇಲೆ ಇರುವುದನ್ನು ಬಳಕೆಯಲ್ಲಿ ತಂದುಕೊಂಡೊಡನೆ ಮುಂಗಾಲುಗಳ ಉಪಯೋಗ ಕೈಗಳಂತೆ ಆಗಹತ್ತಿತು ಎಂದು. ಈ ಊಹೆಗೆ ಸರಿಯಾಗಿ ನಾವು ಗಿಡವನ್ನು ಏರುವ ಮಂಗನಿಗೂ ಮಾನವನಿಗೂ ಇಷ್ಟೊಂದು ನಿಕಟ ಸಂಬಂಧವನ್ನು ಕಾಣಬಹುದು. ಸಸ್ತನ ಪ್ರಾಣಿಗಳಲ್ಲಿ ಮನುಷ್ಯನಿಗೆ ತೀರ ಸಮೀಪದಲ್ಲಿದ್ದ ಪ್ರಾಣಿ ಎಂದರೆ ಮಂಗವೇ. ಗಿಡದ ಮೇಲಿರಲು ಸುರುವುಮಾಡಿದಾಗಲೇ ಮಾನವನ ಊರ್ಧ್ವಮುಖ ನಡಿಗೆಯೂ ಸುರುವಾಯಿತು ಆಮೇಲೆ ಅವನ ದೇಹದ ಕೆಳಭಾಗವು ನಡಿದಾಡಲಿಕ್ಕೂ, ಮೇಲ್ಭಾಗವು ವಸ್ತುಗಳನ್ನು ಹಿಡಿಯಲಿಕ್ಕೂ ಉಪಯೋಗಿಸಲ್ಪಡಹತ್ತಿದವು. ಈ ಆಧಾರದಿಂದಲೇ, ಉಪಕರಣಗಳನ್ನು ಹುಟ್ಟಿಸದ ಮುಂಚಿತವಾಗಿಯೇ ಕೈಗಳಲ್ಲಿ ಧಾರಣ

ಶಕ್ತಿಯು ಬಂದಿತ್ತೆಂದೂ, ಗಿಡಗಳನ್ನು ಏರುವುದರಲ್ಲಿ ಅವು ಉಪಯುಕ್ತ ವಾಗುತ್ತಿದ್ದವೆಂದೂ ಮತ್ತು ಮಾನವನ ಪೂರ್ವಜರು ಗಿಡ ಏರುವವರಾಗಿದ್ದ ರೆಂದೂ ನಿಶ್ಚಯಿಸಬಹುದಾಗಿದೆ.

**ಮಾತುಗಳುಂಟಾದ ಬಗೆ:** ನಮ್ಮ ಪೂರ್ವಜರು ಗುಂಪುಕಟ್ಟಿ ಕೊಂಡಿರುವವರಾಗಿದ್ದಿರಬೇಕು. ಇಲ್ಲವಾದರೆ ಮಾತುಗಳುಂಟಾಗಲಿಕ್ಕೆ ಆಸ್ಪದವಿರುತ್ತಿರಲಿಲ್ಲ. ಸಸ್ತನ ಪ್ರಾಣಿಗಳಲ್ಲಿ ಗುಂಪುಗಳು ಎರಡು ವಿಧವಾಗಿ ರುತ್ತವೆ—ಕೌಟುಂಬಿಕ ಗುಂಪುಗಳು ಮತ್ತು ಸಾಮಾಜಿಕ ಗುಂಪುಗಳೆಂದು. ಕೌಟುಂಬಿಕ ಗುಂಪಿಗಿಂತಲೂ ಸಾಮಾಜಿಕ ಗುಂಪಿನಲ್ಲಿಯೇ ಮಾತುಗಳಿಗೆ ಹೆಚ್ಚು ಆಸ್ಪದ. ಏಕೆಂದರೆ ಕುಟುಂಬದಲ್ಲಿ ಪ್ರಾಣಿಗಳಿಗೆ, ತಮ್ಮ ಮರಿಗಳಿಗೆ ಗಂಡಾಂತರವನ್ನು ಸೂಚಿಸಲಿಕ್ಕೆ ಶಬ್ದಗಳೂ, ತಮ್ಮ ಕಾಮವಾಸನೆಯನ್ನು ವ್ಯಕ್ತಗೊಳಿಸಲಿಕ್ಕೆ ಶಬ್ದಗಳೂ ಇತ್ಯಾದಿ ಬಹು ಸ್ವಲ್ಪ ಶಬ್ದಗಳಿದ್ದರೆ ತೀರಿತು. ಆದರೆ ಸಾಮಾಜಿಕ ಗುಂಪುಗಳಲ್ಲಿ ಅನೇಕ ಬಗೆಯ ಕೆಲಸಗಳು ನಡೆದು ಹೋಗುವುದರಿಂದ ಅವೆಲ್ಲವನ್ನೂ ವ್ಯಕ್ತಗೊಳಿಸಲು ಬಗೆಬಗೆಯಾಗಿ ಶಬ್ದಗಳು ಬೇಕಾಗುವುದುಂಟು. ಆದುದರಿಂದಲೇ ಮನುಷ್ಯನು—ಈಗ ಭಾಷೆಯಲ್ಲಿ ಇಷ್ಟೊಂದು ಪ್ರಾವೀಣ್ಯತೆ ಪಡೆದವನು— ಪೂರ್ವಕಾಲದಲ್ಲಿ ಸಹಜವಾಗಿಯೂ ಸಾಮಾಜಿಕ ಪ್ರಾಣಿಯಾಗಿದ್ದಿರಲಿಕ್ಕೆಬೇಕು.

ಈ ಎಲ್ಲ ಮಾತುಗಳಿಂದ ತಿಳಿದು ಬರುವುದೇನಂದರೆ (೧) ಮಾನವನ ಅನಾದಿಕಾಲದ ಪೂರ್ವಜರು ಗಿಡಹತ್ತುವವರಾಗಿದ್ದರು. (೨) ಈಗಲೂ ಕಂಡುಬರುವ ನಾಲ್ಕು ಕಾಲುಗಳ ಪ್ರಾಣಿಗಳಲ್ಲಿ, ಮಾನವನು ಯಾವುದೋ ಒಂದಕ್ಕೆ ಸಂಬಂಧಪಟ್ಟವನಾಗಿದ್ದನು. (೩) ಸಮಾಜದಲ್ಲಿರುವುದು ಅವನ ಹುಟ್ಟು ಗುಣವಾದುದರಿಂದ ಗುಂಪುಕಟ್ಟಿಕೊಂಡಿರುವ ಪ್ರಾಣಿಗಳಿಗೆ ಸಂಬಂಧ ಪಟ್ಟವನೂ ಆಗಿದ್ದನು.

**ಮಾನವನ ಹುಟ್ಟು:** ಗುಂಪುಕಟ್ಟಿಕೊಂಡಿರುವ ಗಿಡವನ್ನೇರುವ ಎಲ್ಲ ಪ್ರಾಣಿಗಳೂ ಮನುಷ್ಯನಂತೆ ಪ್ರಗತಿಯನ್ನು ಏಕೆ ಹೊಂದಲಿಲ್ಲ? ವಿಚಾರಶಕ್ತಿ, ಧಾರ್ಮಿಕ ನೈತಿಕ ವಿಚಾರಗಳು, ಒಳಿತು ಕೆಟ್ಟದು ಎಂಬವು ಗಳ ವಿಚಾರ, ಬೌದ್ಧಿಕ ಬಲ, ಇವುಗಳಲ್ಲಿ ಮಾನವನೊಬ್ಬನೇ, ಇನ್ನಿತರ

ಪ್ರಾಣಿಗಳನ್ನು ಬಿಟ್ಟು, ಹೇಗೆ ಶ್ರೇಷ್ಠನಾದನು? ಎಂಬ ಪ್ರಶ್ನೆಗಳುಂಟಾಗ ಬಹುದು.

ಯಾವುದೋ ಒಂದು ಕಾರಣದಿಂದ ವಾತಾವರಣವು ಬದಲಾದೊಡನೆ ಈ ಬಗೆಯ ವಿಚಿತ್ರ ಪ್ರಗತಿಯು ಮಾನವನಲ್ಲಿ ಉಂಟಾಯಿತು. ಕೆಲವೊಂದು ಪ್ರಾಣಿಗಳಿಗೆ ಕಾರಣಾಂತರದಿಂದ ಗಿಡವನ್ನು ಬಿಟ್ಟು ನೆಲದ ಮೇಲಿರುವ ಪ್ರಸಂಗ ಬಂದಿರಬಹುದು. ಗಿಡದ ಮೇಲಿರುವ ಪ್ರಾಣಿಗಳಿಗೆ ಹೆಚ್ಚಾಗಿ ಪ್ರಗತಿಹೊಂದಲು ಆಸ್ಪದವೂ ಆವಶ್ಯಕತೆಯೂ ಇರುವುದಿಲ್ಲ. ಯಾಕೆಂದರೆ ಗಿಡದಮೇಲೆ ಅನಾಯಾಸವಾಗಿ ಬೆಳೆದ ಹಣ್ಣು-ಕಾಯಿಗಳ ಆಹಾರವು ಸುಲಭವಾಗಿ ದೊರೆಯುತ್ತದೆ. ಶತ್ರುಗಳಿಂದ ಆತ್ಮರಕ್ಷಣೆಯೂ ಹೆಚ್ಚು ಸುಲಭವಾಗಿ ಆಗುತ್ತದೆ.

ಬುನಾದಿಕಾಲದ ಮಾನವನಿಗೆ ನೆಲದ ಮೇಲಿನ ಜೀವನವು ಮೊದ ಮೊದಲು ಬಹು ಕಷ್ಟಕರವಾಗಿದ್ದಿತು. ಆಹಾರಕ್ಕಾಗಿ ಅವನು ವ್ಯಾಧನೂ ಯೋಧನೂ ಆಗಬೇಕಾಯಿತು. ಬೇಟೆಯಾಡುವುದರಲ್ಲಿರುವ ನಿರಂತರ ಗಂಡಾಂತರದ ಮೂಲಕ ಅವನು ತನ್ನಲ್ಲಿರುವ ಎಲ್ಲ ಶಕ್ತಿಯನ್ನು ಬಳಕೆಯಲ್ಲಿ ತರಬೇಕಾಯಿತು. ಮುಂಗಾಲುಗಳ ಉಪಯೋಗವು ಕೈಗಳಂತೆ ಆಗಹತ್ತಿ ಅವನ ನಾಲ್ಕುಕಾಲಿನ ನಡಿಗೆ ನಿಂತುಹೋಗಿ ಅವನು ಊರ್ಧ್ವಮುಖನಾಗಿ ನಡೆಯಹತ್ತಿದನು. ಯುಕ್ತಿ, ಶಕ್ತಿ, ಧೈರ್ಯ, ಸಾಹಸ, ಸಹನಶೀಲತೆ ಮುಂತಾದ ಗುಣಗಳು ಅವನಲ್ಲಿ ತಲೆದೋರಹತ್ತಿದವು. ಗಿಡದ ಮೇಲಿನ ಗಿಂತಲೂ ನೆಲದಮೇಲೆ ವಾತಾವರಣದ ವೈವಿಧ್ಯವು ಕಂಡುಬಂದಂತೆ, ಮನುಷ್ಯನು ವಾತಾವರಣದ ವೈವಿಧ್ಯಕ್ಕೆ ತನ್ನನ್ನು ಸರಿಪಡಿಸಿಕೊಳ್ಳುವ ಪ್ರಯತ್ನದಲ್ಲಿ ತನ್ನ ಜೀವನಕ್ರಮದಲ್ಲಿ ಪ್ರಗತಿಯನ್ನು ಹೊಂದತೊಡಗಿದನು. ಇಂತು ಇದೆಲ್ಲವೂ ಜೀವಿಸುವುದಕ್ಕೆ ಹೆಣಗಾಡುವುದರ ಪರಿಣಾಮ. ಜೀವಿಸುವುದಕ್ಕೆ ಹೆಣಗುವಾಗ ನಮ್ಮ ಪೂರ್ವಜರು, ಗುಂಪಿನ ಐಕ್ಯ ಮತ್ತು ತಮ್ಮ ಕೈ ಎಂಬ ಎರಡು ಸಾಧನಗಳನ್ನು ಪಡೆದಿದ್ದರು. ಈ ಎರಡು ಸಾಧನ ಗಳು ಸಂಸ್ಕೃತಿಯ ಹುಟ್ಟಿನಲ್ಲಿ ಎಷ್ಟೊಂದು ಮಹತ್ವ ಪಡೆದಿದ್ದವೆಂಬು ದನ್ನು ನಾವು ಕಾಣಬಹುದು.

**ಗುಂಪುಗಳೂ, ಭಾಷೆಯೂ:** ಕೆಲವೊಂದು ಜಾತಿಯ ಮಂಗಗಳಲ್ಲಿ

ಬಹು ವಿಚಿತ್ರವಾದ ಒಕ್ಕಟ್ಟು ಇರುತ್ತದೆ. ಈ ಬಗೆಯ ಒಕ್ಕಟ್ಟು ಮೇಲ್ತರ ಗತಿಯ ಸುಸಂಘಟನೆಯೇ ಸರಿ. ಇಂತಹ ಸಂಘಟನೆಯಲ್ಲಿ ಒಂದೇ ಒಂದು ಪ್ರಾಣಿಯು ತನ್ನ ವಿಚಾರಶಕ್ತಿಯ ಮೂಲಕ ಹಲವಾರು ಪ್ರಾಣಿಗಳ ಮನಸ್ಸನ್ನೂ ಇಂದ್ರಿಯಗಳನ್ನೂ ನಿಯಂತ್ರಿಸಬಲ್ಲದು. ಪ್ರಸಂಗ ಬಂದರೆ ಅವುಗಳನ್ನು ಒಂದು ನಿಶ್ಚಿತ ಧ್ಯೇಯವನ್ನು ಸಾಧಿಸಲು ಉಪಯೋಗಿಸಿಕೊಳ್ಳಬಲ್ಲದು. ಒಂದು ಗುಂಪಿನಲ್ಲಿರುವ ಎಲ್ಲ ಪ್ರಾಣಿಗಳು ಪರಸ್ಪರರನ್ನು ಅರಿತುಕೊಳ್ಳಬಹುದಾದರೆ ಮಾತ್ರ ಇದು ಸಾಧ್ಯ. ಇದಕ್ಕಾಗಿ ಒಂದು ಗುಂಪಿನಲ್ಲಿದ್ದ ಪ್ರಾಣಿಗಳಿಗೆ ತಮ್ಮ ವಿಚಾರಗಳನ್ನು ಪರಸ್ಪರರಿಗೆ ತಿಳಿಪಡಿಸಲು ಒಂದು ಸಾಧನವು ಅವಶ್ಯವಾಗಿ ಬೇಕಾಯಿತು. ಆದುದರಿಂದಲೇ 'ಮಾತು' ಉಂಟಾಯಿತು.

ಮೇಲ್ತರಗತಿಯ ಪ್ರಾಣಿಗಳಲ್ಲಿ 'ಮಾತು' ಕೆಲವೊಂದು ರೀತಿಯಲ್ಲಿ ಆಗಾಗ ವ್ಯಕ್ತವಾಗುತ್ತದೆ. ಪಾರಿವಾಳಗಳಿಗೆ ೧೨, ನಾಯಿಗಳಿಗೆ ೧೫, ದನಗಳಿಗೆ ೨೨ ಬಗೆಯ ಶಬ್ದಗಳನ್ನು ಮಾಡಲು ಬರುತ್ತದೆಂದೂ ನಿರಕ್ಷರ ಮನುಷ್ಯನ ಶಬ್ದಸಂಗ್ರಹವು ಸುಮಾರು ೩೦೦ ಶಬ್ದಗಳನ್ನೊಳಗೊಂಡಿರುತ್ತದೆಂದೂ 'ಡ್ಯೂಪೋಂಟ'ನು ಹೇಳುತ್ತಾನೆ. ಒಂದೇಸವನೆ ಕಿಡಿಗೇಡಿತನವನ್ನು ಮಾಡುತ್ತಿರುವ, ಕಿರಿಕಿರಿ ಶಬ್ದವನ್ನು ಮಾಡುತ್ತ ಬಡಿದಾಡುತ್ತಿರುವ ಮಂಗಗಳು ೨೦ ಬಗೆಯ ಶಬ್ದಗಳನ್ನೂ ಹಲವಾರು ಬಗೆಯ ಹಾವಭಾವಗಳನ್ನೂ ಅಣಕುಗಳನ್ನೂ ಮಾಡಬಲ್ಲವೆಂದು 'ಗಾರ್ನರ' ಹೇಳುತ್ತಾನೆ.

ಇಂತು ಈ ಬಗೆಯ ಮೂಲ ಶಬ್ದಗಳು ಪ್ರಾಣಿಗಳಿಗೆ ತಮ್ಮ ವಿಚಾರಗಳನ್ನು ವ್ಯಕ್ತಗೊಳಿಸಲು 'ಮಾತು'ಗಳಂತೆ ಹೇಗೆ ಉಪಯುಕ್ತವಾಗುತ್ತಿವೆ ಎಂಬುದನ್ನು ನಾವು ಅರಿತುಕೊಳ್ಳಬಹುದು. ಇಂತಹ ಮಾತುಗಳ ಬಲದಿಂದಲೂ ಗುಂಪಿನ ಬಲದಿಂದಲೂ ಪ್ರಾಣಿಗಳು ವೈಯಕ್ತಿಕವಾಗಿ ತಮ್ಮ ಮೇಲೆ ಕೈಮಾಡುವ ಎಂಥ ಬಲಿಷ್ಠ ಪ್ರಾಣಿಯನ್ನೂ ಕೂಡ ಸೋಲಿಸಿ ತಮ್ಮ ಜೀವವನ್ನು ಉಳಿಸಿಕೊಳ್ಳುತ್ತವೆ. 'ಮಾತು' ಪರಿಪೂರ್ಣತೆಯನ್ನು ಪಡೆಯುತ್ತ ಹೋದಂತೆ ಅದು ಮಾನವನ ಬುದ್ಧಿಶಕ್ತಿಯ ಉಗಮಸ್ಥಾನವಾಗತೊಡಗಿತು. 'ಮಾತಿನಿಂದಲೇ ವಿಚಾರ ಶಕ್ತಿಯುಂಟಾಯಿತು; ಮಾತಿಲ್ಲದ ಮೊದಲು ಮಾನವನು ವಿಚಾರಹೀನನಾಗಿದ್ದನು' ಎಂಬ ಮಾತಿನಲ್ಲಿ

ಸತ್ಯಾಂಶವಿದೆ. ವಿಚಾರಸಂಗ್ರಹಣ ಶಕ್ತಿ ಮತ್ತು ವಿಚಾರಗಳನ್ನು ಶಬ್ದ ಗಳಿಂದ ಪ್ರಕಟಿಸುವ ಶಕ್ತಿ ಎಂಬ ದ್ವಿವಿಧ ಶಕ್ತಿಯು ಬರಬರುತ್ತ 'ಮಾತಿ' ನಿಂದಲೇ ಉಂಟಾಯಿತು.

**'ಮಾತಿ'ನ ಮುಖಾಂತರ ವಿಚಾರ-ಸಂಗ್ರಹಣ:** ಭಾಷೆಯ ಮೂಲಕ ನಾವು ನಮ್ಮ ವಿಚಾರಗಳನ್ನು ಪರರಿಗೆ ತಿಳಿಪಡಿಸಬಲ್ಲೆವು. ಅಂತೆಯೇ ವಂಶಪರಂಪರಾಗತವಾದ ಬಹು ಬುದ್ಧಿವಂತರ ಅತ್ಯುತ್ತಮ ವಿಚಾರಗಳನ್ನು ಪ್ರತಿಯೊಬ್ಬನೂ ಗ್ರಹಣಮಾಡಬಲ್ಲನು. ಪರಂಪರೆ ಯಿಂದಲೂ, ವಿದ್ಯಾಸಂಸ್ಥೆಗಳಿಂದಲೂ ಸಂಚಯಿಸಲ್ಪಟ್ಟ ಇಂತಹ ಜ್ಞಾನ ಭಾಂಡಾರವನ್ನು ಪ್ರತಿಯೊಬ್ಬನೂ ಉಪಯೋಗಿಸಿಕೊಂಡು, ಒಳ್ಳೆ ಬುದ್ಧಿ ವಂತನು ಮಾಡಿದ ಸಂಶೋಧನೆಗಳಲ್ಲಿ ಸಮಭಾಗಿಯಾಗಬಹುದು. ಪೂರ್ವಜ ರಿಂದ ಆನುವಂಶಿಕವಾಗಿ ಬಂದ ಜ್ಞಾನಸಂಚಯವನ್ನು ಪ್ರತಿಯೊಬ್ಬ ವ್ಯಕ್ತಿ ಪಡೆದು ಅದನ್ನು ತನ್ನ ಮನೋವಿಕಾಸಕ್ಕೆ ಉಪಯೋಗಿಸಿಕೊಳ್ಳ ಬಲ್ಲನು. ಕೀಳು ಪ್ರಾಣಿಗಳಲ್ಲಿ ಇಂತಹ ಶಕ್ತಿ ಇರುವುದಿಲ್ಲ. ಅದಕ್ಕಾಗಿಯೇ ಮಾನವನು ಅವುಗಳನ್ನು ಅಷ್ಟೊಂದು ಹೀಯಾಳಿಸುವುದು.

ಪ್ರತಿಯೊಬ್ಬನಲ್ಲಿಯೂ ಕಂಡುಬರುವ ವಿಚಾರ ಶಕ್ತಿಯು ಕೇವಲ ಒಬ್ಬನ ಒಂದು ಆಯುಷ್ಯದಲ್ಲಿ ದೊರೆತ ಫಲವಲ್ಲ. ಆದರೆ ಅದು ಹಲವು ವ್ಯಕ್ತಿಗಳ ಹಲವು ಆಯುಷ್ಯಗಳಲ್ಲಿ ಸಂಗ್ರಹಿಸಿಟ್ಟ ಜ್ಞಾನದ ಪ್ರತಿಫಲವು. ವಿವಿಧ ಕಾಲಗಳ ವಿವಿಧ ವ್ಯಕ್ತಿಗಳ ಜ್ಞಾನದ ಸಂಕಲನವು ಯಾವಾಗಲೂ ನಡೆದೇ ಇರುತ್ತದೆ. ಎಂತಹ ಬುದ್ಧಿವಂತನಿಗೂ ಕೂಡ ತನ್ನ ಪೂರ್ವಜರಿಂದ ತನಗೆ ದೊರೆತ ಜ್ಞಾನಭಾಂಡಾರಕ್ಕೆ, ತನ್ನ ಜ್ಞಾನವನ್ನು ಹೋಲಿಸಿ ನೋಡಿ ದಾಗ ಅದು ಅಣುಮಾತ್ರವಾಗಿ ಕಾಣಬಹುದು. ಮಾತಿನಲ್ಲಿರುವ ಸಂಕಲನ ಶಕ್ತಿಯು ಮೂಲಕವೇ ಮಾನವನು ಎಲ್ಲ ಪ್ರಾಣಿಗಳಲ್ಲಿ ಅಷ್ಟೊಂದು ಹೆಚ್ಚಿನ ಸ್ಥಾನವನ್ನು ಪಡೆದಿದ್ದಾನೆ. 'ವಿದ್ಯೆ' 'ಮಾತು' ಇವುಗಳಿಲ್ಲದೆ ಒಂದು ಮನುಷ್ಯಪ್ರಾಣಿಯನ್ನು ಬೆಳಸಿದರೆ, ಅದು ಒಂದು ಅಜ್ಞಾನಿ ಪಶುವಿನಂತೆಯೇ ಬೆಳೆಯುವುದು. ಆದುದರಿಂದ 'ಮಾತೂ' 'ಮಾತಿ'ನ ಪ್ರಗತಿಯೂ ಮಾನವನ ವಿಚಾರ ಪರಂಪರೆಯ ಸಂಗ್ರಹಣಕ್ಕೆ ಉಪಯುಕ್ತವಾಗಿವೆ. ಅವನ ವಿಕಾಸಕ್ಕೆ ಸಹಾಯಕಾರಿಯಾಗಿವೆ.

ಧೋಪಕರಣಗಳನ್ನು ಹುಟ್ಟಿಸುವ ಶಕ್ತಿಯನ್ನು ಪಡೆದಿದೆ. ಪ್ರಾಣಿಗಳಲ್ಲಿ ಪ್ರಾಥಮಿಕ ಸಂಘಟನೆಯೂ ಒಂದು ಬಗೆಯ ಸಹಕಾರ ಬುದ್ಧಿಯೂ ಇರುವುದು ಕಂಡುಬರುತ್ತದೆ. ಕೆಲವೊಂದು ಉಪಕರಣಗಳೂ ಅವುಗಳ ಬಳಿಯಲ್ಲಿರುವುದು ಕಾಣಬರುತ್ತದೆ. ಮಂಗಗಳು ಕೋಲಿನೊಡನೆ ನಡೆಯುತ್ತವೆ. ತಮ್ಮ ಶತ್ರುಗಳ ತಲೆಯ ಮೇಲೆ ಕಲ್ಲುಗಳನ್ನೂ ಗಿಡಗಳ ಟೊಂಗೆಗಳನ್ನೂ ಮುಳ್ಳಿನ ಹಣ್ಣುಗಳನ್ನೂ ಎಸೆಯುತ್ತವೆ. ಕಲ್ಲುಗಳಿಂದ ಕಾಯಿಗಳನ್ನೂ ಬಿರುಸಾದ ವಸ್ತುಗಳನ್ನೂ ಒಡೆಯುತ್ತವೆ. ಚಿಂಪಾಂಝಿಯು ಕಾಡುಜನರ ಗುಡಿಸಲುಗಳಂತಿರುವ ಸಣ್ಣ ಸಣ್ಣ ಗುಡಿಸಲುಗಳನ್ನು ಗಿಡಗಳ ಟೊಂಗೆಗಳಿಂದ ಕಟ್ಟಿಕೊಳ್ಳುತ್ತದೆ. ಆದುದರಿಂದ ಮಂಗಗಳಲ್ಲಿ ಒಂದು 'ಕಟ್ಟಿಗೆ ಕಲ್ಲಿನ ಕಾಲ' ಇದೆ ಎಂದು ಹೇಳಬಹುದು. ಪ್ರಗತಿಯ ಮೆಟ್ಟಲುಗಳನ್ನೇರುತ್ತಿರುವ ಮಾನವನನ್ನು ಮಾತ್ರ ಮತ್ತೆ ಬೇರೆ ಕಾರಣಗಳು ಬೇರೆ ಬೇರೆ ಉಪಕರಣಗಳನ್ನು ಉಪಯೋಗಿಸಲು ಒತ್ತಾಯಪಡಿಸಿವೆ. ನೆಲದ ಮೇಲಿರುವುದನ್ನು ಒಮ್ಮೆ ಬಳಕೆಯಲ್ಲಿ ತಂದೊಡನೆ ಮಾನವನು ಕರಡಿಗಳಂತೆ ತನ್ನ ದೇಹದ ಮೇಲ್ಭಾಗವನ್ನು ಮೇಲಕ್ಕೆತ್ತಿ ಅಡಿಗಳ ಹಿಮ್ಮಡಗಳ ಮೇಲೆ ನಡೆಯಲಾರಂಭಿಸಿದನು. ದೇಹದ ಮೇಲ್ಭಾಗದ ಬೇರೆ ಬೇರೆ ಭಾಗಗಳು ತಿರುಗಾಡಲು ಉಪಯೋಗಿಸಲ್ಪಡದಿರಲು, ಹಿಡಿಯುವುದಕ್ಕೂ ನೇತಾಡುವುದಕ್ಕೂ ಉಪಯೋಗವಾಗುವುದಲ್ಲದೆ ಮತ್ತೆ ಬೇರೆ ಹೊಸ ಕೆಲಸಗಳಿಗೆ ಉಪಯೋಗವಾಗತೊಡಗಿದವು. ಕಲ್ಲು ಕಾಯಿಗಳನ್ನೊಡೆಯಲು ಉಪಯೋಗವಾದೊಡನೆ ಅದಕ್ಕೆ ಒಂದು ನಿಶ್ಚಿತವಾದ ಅನುಕೂಲವಾದ ರೂಪವನ್ನು ಕೊಡುವುದು ಮುಂದಿನ ಬಹು ಸುಲಭ ಹೆಜ್ಜೆಯಾಯಿತು. ಸಾಧಾರಣವಾಗಿ ಕಡಿದ ಕಲ್ಲು, ಚಾಕು, ಈಳಿಗೆ, ಕರಗಸ, ಸುತ್ತಿಗೆ, ಕೊಡಲಿ, ಉಳಿ ಮುಂತಾದ ಎಲ್ಲ ವಿಧವಾಗಿ ಉಪಯೋಗಿಸಲ್ಪಡುತ್ತಿತ್ತು. ಆದರೆ ಒಳ್ಳೆ ಹದವುಳ್ಳ ಉಪಕರಣವಾಗಿರಲಿಲ್ಲ. ಆದುದರಿಂದ ಕಾಲಾಂತರದಿಂದ ಮಾನವನು ಅದನ್ನು ಮಾರ್ಪಡಿಸಿದನು. ಬಡಿದಾಡುವಾಗ ಉಪಯೋಗಿಸುವ ಉಪಕರಣಕ್ಕೆ ಒಂದು ಹಿಡಿಕೆಯನ್ನೂ ಕರಗಸಕ್ಕೆ ಹಲ್ಲುಗಳನ್ನೂ ಮುಂತಾಗಿ ಯೋಜಿಸಿದನು. ಕೊನೆಗೆ ಅವು ಬೇರೆ ಬೇರೆ ಕೆಲಸಕ್ಕೆ ಬೇರೆ ಬೇರೆ ಉಪಕರಣಗಳೇ ಆದವು. ಹಾಗೆಯೇ ಗಿಡಗಳ ಟೊಂಗೆಗಳು

ಅಗಿಯುವುದಕ್ಕೂ, ಒಗೆಯುವುದಕ್ಕೂ, ಹೊಡೆದಾಡುವುದಕ್ಕೂ, ಬರ್ಚಿ' ಗದೆ, ಖಡ್ಗ, ಬಿಲ್ಲು, ಬಾಣ ಎಂಬ ರೂಪಾಂತರಗಳನ್ನು ಹೊಂದಿದವು.

ಉಪಕರಣಗಳು ಅಥವಾ ಆಯುಧಗಳು ಒಮ್ಮೆ ನಿರ್ಮಿಸಲ್ಪಟ್ಟೊಡನೆ ಜೀವನಸಮರವು ಅವುಗಳ ವೃದ್ಧಿಯನ್ನವಲಂಬಿಸಿತು. ಯುದ್ಧದಲ್ಲಿಯಂತೂ ಇಂತಹ ಆಯುಧಗಳ ಉಪಯುಕ್ತತೆ ಹೆಚ್ಚಾಗಿ ಕಂಡುಬರಹತ್ತಿತು. ರಣರಂಗದಲ್ಲಿ ಬರ್ಚಿಯನ್ನಾಗಲಿ ಕೊಡಲಿಯನ್ನಾಗಲಿ ಬಹು ಜಾಣ್ಮೆಯಿಂದ ಉಪಯೋಗಿಸಬಲ್ಲ ಯೋಧರು ಆಯುಧಗಳಿಲ್ಲದ ಎಷ್ಟು ಬಲಶಾಲಿಗಳಾಗಿದ್ದವರನ್ನೂ ಹೋಡೆದೋಡಿಸಹತ್ತಿದರು. ಹೀಗೆ ಜೀವನ ಸಮರವು, ಕೇವಲ ವಿವಿಧ ಉಪಕರಣಗಳನ್ನು ಬಿಟ್ಟು ಮಾನವನ ಬುದ್ಧಿಮತ್ತೆಯನ್ನವಲಂಬಿಸತೊಡಗಿತು. ಯೋಗ್ಯ ಬುದ್ಧಿಮತ್ತೆಯುಳ್ಳವರೂ, ಆತ್ಮರಕ್ಷಣೆಗೂ ಪರರ ಪೀಡೆಗೂ ಸರಿಯಾದ ಆಯುಧಗಳನ್ನು ನಿರ್ಮಿಸಬಲ್ಲವರೂ ಮಾತ್ರ ಯುದ್ಧದಲ್ಲಿ ಬದುಕಿ ಉಳಿಯುತ್ತಿದ್ದರು. ಆಯುಧೋಪಕರಣಗಳ ಬೆಳೆವಣಿಗೆಯಿಂದುಂಟಾದ ಇಂತಹ ಪರಿಣಾಮಗಳಿಂದ ಪಾಶವೀ ಶಕ್ತಿಗಿಂತಲೂ ಸಂಶೋಧನಶಕ್ತಿಯುಳ್ಳ ಬುದ್ಧಿಯೇ ಮೇಲು ಎಂಬುದನ್ನು ಕಂಡುಕೊಂಡರು.

ನಿಜವಾಗಿಯೂ ಉಪಕರಣಗಳನ್ನು ಸಿದ್ಧಗೊಳಿಸಿ ಅವುಗಳನ್ನು ಸುಧಾರಿಸುವ ಯುಗವು ಪ್ರಾಕೃತಿಕ ಮಾನವನಿಗೂ ಸುಧಾರಿಸಿದ ಮಾನವನಿಗೂ ನಡುವಿರುವ ವಿಶಿಷ್ಟವಾದ ಮಾರ್ಪಾಟನ್ನು ವ್ಯಕ್ತಗೊಳಿಸುತ್ತದೆ. ಕ್ರಮಾಗತವಾದ ವಿಕಾಸವು ಕೇವಲ ಅವಯವಗಳಲ್ಲಿಯ ಮಾರ್ಪಾಟಿನ ವಿಷಯವನ್ನು ಕೆಲವೊಂದು ಮಟ್ಟಿಗೆ ಬಿಟ್ಟು ಮಾನವಸಂಸ್ಕೃತಿಯ ರೀತಿಯ ಕಡೆಗೂ ಅವಶ್ಯವಾಗಿ ಲಕ್ಷ್ಯಗೊಡಬೇಕಾಗುತ್ತದೆ. ಇಂತಹ ಬದಲಾವಣೆಯು ನಿರ್ಮಿತವಾದ ಉಪಕರಣಗಳಿಗೆ ಪ್ರತ್ಯಕ್ಷವಾಗಿಯೂ ಎಲ್ಲ ಉಪಕರಣಗಳಲ್ಲಿ ಶ್ರೇಷ್ಠ ಉಪಕರಣವಾದ 'ಕೈ'ಗೆ ಅಪ್ರತ್ಯಕ್ಷವಾಗಿಯೂ ಸಂಬಂಧಿಸಿದೆ.

**ಬೆಂಕಿ :** ಬೆಂಕಿಯನ್ನು ಹೊತ್ತಿಸುವುದು ಇತಿಹಾಸ ಪೂರ್ವಕಾಲದ ಕೊನೆಯ ಮಹತ್ಕಾರ್ಯವೆಂದು ಊಹಿಸಬಹುದು. 'ಮಾತು' ಮತ್ತು 'ಉಪಕರಣ'ಗಳ ಬೆಳೆವಣಿಗೆಯು ಏಕಕಾಲಿಕವಾಗಿರಬೇಕೆಂಬುದು ಸ್ಪಷ್ಟ

ವಾಗುತ್ತದೆ. ಆದರೆ ಕಿಚ್ಚನ್ನು ಹೊತ್ತಿಸುವ, ಅದನ್ನು ನಿಯಂತ್ರಿಸುವ ಕಲ್ಪನೆ ಎಷ್ಟೋ ಕಾಲದ ನಂತರ ಉಂಟಾಗಿರಬೇಕು. ಯಾಕೆಂದರೆ ಅದಕ್ಕೆ ಚಾಣ್ಮೆಯೂ ಕರ್ಮಕುಶಲತೆಯೂ ಆವಶ್ಯಕವಾಗಿರುತ್ತವೆ. ಅದರ ಶೋಧನೆಯು ಹೀಗಿರಬಹುದು:— ಪ್ರಾಕೃತಿಕ ಜನರೆಲ್ಲರೂ ಕಟ್ಟಿಗೆಯ ಇಲ್ಲವೆ ಕಲ್ಲಿನ ತಮ್ಮ ಉಪಕರಣಗಳನ್ನು ನಿರ್ಮಿಸುವಾಗ ತೂತುಗಳನ್ನು ಕೊರೆಯುವಾಗ ಚೂಪಾದ ಕಟ್ಟಿಗೆಯ ತುಂಡುಗಳನ್ನು ಅವುಗಳಲ್ಲಿ ಸೇರಿಸಿ ತಿರುವುತ್ತಿದ್ದರು. ಏರೋಪ್ಲೇನನ್ನು ಕೂಡ ದಂಗುಗೊಳಿಸುವ ಕುಶಲತೆಯಿಂದ ಪ್ರಾಕೃತಿಕ ಮಾನವರು ಇಂತಹ ಕೆಲಸಗಳಲ್ಲಿ ಕಟ್ಟಿಗೆಯ ತುಂಡುಗಳನ್ನು ಜೋರಿನಿಂದ ತಿರುವುತ್ತಿರುವಾಗ ಅಲ್ಲಿರುವ ಕಟ್ಟಿಗೆ ಪುಡಿಗೆ ತಿಕ್ಕಾಟದ ಮೂಲಕ ಬೆಂಕಿಹತ್ತುತ್ತಿತ್ತು. ಇಂತಹ ಕಿಡಿಗಳು ಒಣ ಎಲೆಗಳ ಗುಂಪಿನ ಮೇಲೆ ವ್ಯವಸ್ಥಿತವಾಗಿ ಕೆಡವಲ್ಪಟ್ಟರೆ ಅದೆಲ್ಲವೂ ಉರಿಯಾಗಿ ಪ್ರಜ್ವಲಿಸುತ್ತಿತ್ತು. ಎಲ್ಲ ಕಾಡುಜನರು, ತಿಕ್ಕುವದರಿಂದ, ತಿರುವುವುದರಿಂದ ಇಲ್ಲವೆ ಕೊರೆಯುವುದರಿಂದ ಬೆಂಕಿಯನ್ನು ಹುಟ್ಟಿಸುತ್ತಾರೆಂಬ ಮಾತು ಈ ವಿಷಯವನ್ನೇ ಪುಷ್ಟೀಕರಿಸುತ್ತದೆ ಕೆಲವೊಂದೆಡೆಗಳಲ್ಲಿ ಬೆಂಕಿಯು ಮೊಟ್ಟಮೊದಲು ಜ್ವಾಲಾಮುಖಿಯ ಪರಿಣಾಮದ ಮುಖಾಂತರ ಜನರಿಗೆ ಗೊತ್ತಾಗಿರಬಹುದು. ಓಸಿಯಾನಿಯಾದ ನಿವಾಸಿಗಳು ಉರಿಯುತ್ತಿರುವ ಲಾವಾರಸವನ್ನೇ ಅಡಿಗೆ ಮಾಡಲು ಉಪಯೋಗಿಸಿಕೊಳ್ಳುತ್ತಾರೆ. ಕಲ್ಲನ್ನು ಕಟೆದು ಬೆಂಕಿಯನ್ನುಂಟುಮಾಡುವ ರೂಢಿಯು ಅಸಂಸ್ಕೃತರಾದ ಎಸ್ಕಿಮೊ ಜನರಲ್ಲಿ ಈಗಲೂ ಕಂಡುಬರುತ್ತದೆ. ಮಾನವನು ಬೆಂಕಿಯನ್ನು ಯಾತಕ್ಕೆ ಕಂಡುಹಿಡಿದನೆಂಬುದನ್ನು ನಿಶ್ಚಿತವಾಗಿ ಹೇಳುವದು ಕಠಿಣವಾಗಿದ್ದರೂ ಅವನು ಅದನ್ನು ಮುಖ್ಯವಾಗಿ ಅದರ ಪ್ರಖರವಾದ ಬೆಳಕಿಗಾಗಿ ಮೊಟ್ಟಮೊದಲು ಸ್ವೀಕರಿಸಿದನೆಂದು ತೋರುತ್ತದೆ. ಮುಂದೆ ಅದನ್ನು ಕಾಡು ಮೃಗಗಳನ್ನು ಅಂಜಿಸಿ ಓಡಿಸುವುದಕ್ಕಾಗಿಯೂ, ಅಡಿಗೆ ಮಾಡುವುದಕ್ಕೂ ಉಷ್ಣತೆಗಾಗಿಯೂ ಬಳಸತೊಡಗಿದನೆಂದು ತಿಳಿದುಬರುತ್ತದೆ. ಬೆಳಕಿನಿಂದುಂಟಾಗುವ ಸುಖದ ಮೂಲಕವೂ ಕತ್ತಲೆಯಿಂದುಂಟಾಗುವ ಅಂಜಿಕೆಯ ಮೂಲಕವೂ ಬೆಂಕಿಯು ಮೊದಮೊದಲು ಮಾನವನ ಮನಸ್ಸನ್ನು ಮರುಳುಗೊಳಿಸಿತು. "ಬೆಂಕಿಯ ಉಪಯುಕ್ತತೆಗಾಗಲಿ, ಅದರಿಂದುಂಟಾಗುವ

ಉಷ್ಣತೆಗಾಗಲಿ, ಪೂರ್ವದ ಜನರು ಅದನ್ನು ಪ್ರೀತಿಸಲಿಲ್ಲ. ಆದರೆ ಅದರ ಉಜ್ವಲ ಕಾಂತಿಗೂ ಹೊಳಪಿಗೂ ಅವರು ಅದನ್ನು ಅಷ್ಟೊಂದು ಗಮನಿಸುತ್ತಿದ್ದರು. ಅದರ ಕೆಂಬಣ್ಣದ ಹೊಳಪೇ ಅವರ ಮನಸ್ಸನ್ನು ಎಳೆಯಿತು. ಬಣ್ಣಗಳ ವಿಚಾರವು ಮಾನವನಲ್ಲಿ ಬಹು ಪೂರ್ವಕಾಲದಿಂದಲೇ ತಲೆದೋರಿದುದು. ಅದರ ಮುಖಾಂತರವಾಗಿಯೇ ಅವನ ಚಿತ್ತವು ಬೆಂಕಿಯ ಕಡೆಗೆ ಹರಿಯಿತು ' ಎಂದು ಗಟೇ ( Goethe ) ಎಂಬ ಕವಿಯು ಉಸುರಿದ್ದಾನೆ.

**ತಾತ್ಪರ್ಯ:** ಬೆಂಕಿಯನ್ನು ಕಂಡುಹಿಡಿದಾಗಿನಿಂದ ನಮ್ಮ ಪೂರ್ವಜರು ತಮ್ಮ ಕಾಡು ಸ್ಥಿತಿಯಿಂದ ಹೊರಗೆ ಬಂದರು. ಮಾನವನು ಅನೇಕ ವರುಷ ತೃತೀಯಾವಸ್ಥೆಯಲ್ಲಿ ( Tertiary period ) ದ್ದಾಗ ಅಜ್ಞಾನಾವಸ್ಥೆಯಿಂದ ಬುದ್ಧಿವಂತಿಕೆಯ ಶಿಖರಕ್ಕೇರಹತ್ತಿದನು. ಇಂತಹ ಮಹತ್ವದ ರೂಪಾಂತರವನ್ನುಂಟುಮಾಡಲು ಮೊದಲನೆಯ ಕಾರಣವೆಂದರೆ ಮಾನವನಿಗುಂಟಾದ ಕೈಗಳು. ಇವು ಮೊದಲು ತಿರುಗಾಡಲು ಉಪಯುಕ್ತವಾಗಿದ್ದ ಅವಯವಗಳಾಗಿದ್ದು, ಮನುಷ್ಯನು ಗಿಡದಲ್ಲಿರುವುದನ್ನು ಬಿಟ್ಟು ನೆಲದ ಮೇಲೆ ವಾಸಿಸತೊಡಗಿದಂದಿನಿಂದ ಹೆಚ್ಚು ಸಹಜವಾಗಿ ಉಪಯೋಗಿಸಲ್ಪಡಹತ್ತಿದವು. ಎರಡನೆಯ ಕಾರಣವೆಂದರೆ ಸಮಾಜದಲ್ಲಿರಬೇಕೆಂಬ ಮಾನವನ ಮನೋವೃತ್ತಿ. ಇದರಿಂದಲೇ ಅವನು ಮಾತು ಮತ್ತು ಬುದ್ಧಿಮತ್ತೆ ಇವುಗಳ ಸಹಾಯದಿಂದ ಸುವ್ಯವಸ್ಥಿತವಾದ ಸಾಮಾಜಿಕ ಸಂಘಗಳನ್ನು ಕಟ್ಟಿಕೊಂಡಿರಹತ್ತಿದನು.ಇದುವೆ ಅವನು ಸಮಸ್ತ ವಿಶ್ವದಲ್ಲಿ ಪ್ರಾಮುಖ್ಯತೆಯನ್ನು ಪಡೆದುದರ ಗುಟ್ಟು. ಮಾನವನ ಈ ಹಿರಿಯತನಕ್ಕೆ ವೈಯಕ್ತಿಕ ಬಲಾಬಲಗಳು ಕಾರಣವಾಗಿರದೆ, ಸುಸಂಘಟಿತ ಸಂಘಗಳನ್ನು ಕಟ್ಟಿ ಅವುಗಳ ಮುಖಾಂತರ ಗುಂಪುಕಟ್ಟಿಕೊಂಡು ಕೆಲಸಮಾಡುವ ಬವನಲ್ಲಿರುವ ಶಕ್ತಿಯೇ ಕಾರಣ. ಸಂಸ್ಕೃತಿಯ ಬೇರೆ ಬೇರೆ ಮೆಟ್ಟಲುಗಳ ತುಲನಾತ್ಮಕ ಅಭ್ಯಾಸವನ್ನು ಮಾಡಿದುದಾದರೆ, ವ್ಯಕ್ತಿಗೂ ಸಮಾಜಕ್ಕೂ ಇರುವ ನಿಕಟ ಸಂಬಂಧವು ಸ್ಪಷ್ಟವಾಗುವುದು.

ಸಮಾಜದ ಬಲವು ಹೆಚ್ಚಾದಂತೆ ವ್ಯಕ್ತಿಯ ಬಲವು ಕುಗ್ಗುತ್ತ ಅವನು ಸಮಾಜದ ಕೈಗೊಂಬೆಯಾಗುತ್ತಾನೆ. ಕಾಡು ಮನುಷ್ಯನು ತನಗೆ ಅವಶ್ಯವಾದ ಎಲ್ಲ ಉಪಕರಣಗಳನ್ನೂ ಆಯುಧಗಳನ್ನೂ ತಾನೇ ನಿರ್ಮಿಸುತ್ತಾನೆ.

ಆದರೆ ಸುಸಂಸ್ಕೃತನು ತನಗೆ ಬೇಕಾದ ಅನೇಕ ವಸ್ತುಗಳಿಗಾಗಿ ಹಣವನ್ನೂ ಪರರ ಪರಿಶ್ರಮವನ್ನೂ ಅವಲಂಬಿಸುತ್ತಾನೆ. ತನ್ನ ಕಾಲುಗಳ ಮೇಲೆ ತಾನು ನಿಲ್ಲಲಾರನು. ಸಮಾಜದ ಸಹಾಯದ ಮುಖಾಂತರ ಮಾತ್ರ ಸಂಸ್ಕೃತಿಯು ಹೆಚ್ಚಿನ ಮಟ್ಟಕ್ಕೆ ಏರಬಹುದು.

ಗುಂಪುಕಟ್ಟಿಕೊಂಡಿರಬೇಕೆಂಬ ಬುದ್ಧಿಯೇ ಸಮಾಜಶಾಸ್ತ್ರದ ಮೂಲ. ಅದುವೆ ಸಂಸ್ಕೃತಿಯ ವಿವಿಧ ವಿಚಾರಗಳನ್ನರಿತುಕೊಳ್ಳಲು ಹೆದ್ದಾರಿ. ಕಾಡು ಸ್ಥಿತಿಯಲ್ಲಿದ್ದ ಮಾನವನ ಬಗ್ಗೆ ನಮಗಿದ್ದ ಅಜ್ಞಾನವನ್ನು ಈಗ ತೊಳೆದುಕೊಂಡಂತಾಯಿತು. ಇನ್ನು ಮೇಲೆ ಮಾನವನ ಪ್ರಾಗೈತಿಹಾಸಿಕ ಮತ್ತು ಐತಿಹಾಸಿಕ ಸ್ಥಿತಿಗಳನ್ನು ಪರಿಕ್ಷಿಸುವಾ. ಆದರೆ ಹಾಗೆ ಮಾಡುವುದಕ್ಕಿಂತ ಮುಂಚಿತವಾಗಿ ಸಮಾಜವು ಉದ್ಭವವಾದ ರೀತಿಯ ಸಂಪೂರ್ಣ ಕ್ಷೇತ್ರವನ್ನೇ ಪರಿಶೀಲಿಸಿ ನೋಡೋಣ!

—

## ಮೂರನೆಯ ಮೆಟ್ಟಲು

### ಸಂಸ್ಕೃತಿಯ ಸಂಪೂರ್ಣ ಕ್ಷೇತ್ರದ ವಿಭಾಗಗಳು



ಮಾನವಸಮಾಜವು ಬೆಳೆಯಬೇಕಾದರೆ, ಆಹಾರ, ಮನೆ, ಅರಿವೆ, ಆಯುಧ, ಉಪಕರಣ ಮುಂತಾದವು ಅವಶ್ಯವಾಗಿ ಬೇಕು. ಆದುದರಿಂದ ಸಂಸ್ಕೃತಿಯ ಮೊದಲನೆಯ ವಿಭಾಗದಲ್ಲಿ ವೈಯಕ್ತಿಕ ಜೀವನದ ಪೋಷಣೆಗೂ, ಸಂರಕ್ಷಣೆಗೂ ಅವಶ್ಯವಾದ ಪದಾರ್ಥಗಳು ಅಡಕವಾಗಿರುತ್ತವೆ. ಈ ವಿಭಾಗವನ್ನು ನಾವು 'ಸಾಮಾಜಿಕ ಮಿತವ್ಯಯ' ವೆಂಬ ಅಂಕಿತದಿಂದ ಅರಿತುಕೊಳ್ಳಬಹುದು.

ಎರಡನೆಯ ವಿಭಾಗವು ಜೀವನದ ಕ್ರಮಗಳನ್ನೊಳಗೊಂಡಿದೆ. ಇದರಲ್ಲಿ ಒಂದಿಲ್ಲೊಂದು ರೀತಿಯಿಂದ ಮಾನವ ವಂಶವನ್ನು ಮುಂದುವರಿಸುವ

ಅನೇಕ ಮಾತುಗಳು, ತಲೆಯಿಂದ ತಲೆಗೆ ಮಾನವ ಜೀವನವು ಸಾಗಲು ಬೇಕಾಗುವ ರೀತಿನೀತಿಗಳು, ಜನನ, ಲೈಂಗಿಕ ಸಂಭೋಗ, ಮದುವೆ, ಕುಟುಂಬ—ಮುಂತಾದವು ಸಮಾವೇಶವಾಗುತ್ತವೆ.

ಮೂರನೆಯ ಗುಂಪಿನಲ್ಲಿ ಸಾಮಾಜಿಕ ಸಂಬಂಧ ಎಂದರೆ ಒಂದು ಸಮಾಜದಲ್ಲಿರುವ ವ್ಯಕ್ತಿವ್ಯಕ್ತಿಗಳಲ್ಲಿಯ ಪರಸ್ಪರ ಸಂಬಂಧ, ಸಮಾಜಕ್ಕೂ ಜಗತ್ತಿಗೂ ಇರುವ ಸಂಬಂಧ, ಪರಸ್ಪರ ಸಮಾಜಗಳ ನಡುವಿರುವ ಹಿತವಾದ ಇಲ್ಲವೆ ಅಹಿತವಾದ ಸಂಬಂಧ, ಮುಂತಾದ ವಿಷಯಗಳು ಕೂಡಿಕೊಂಡಿರುತ್ತವೆ. ಇದನ್ನು 'ಸಮಾಜ ಸಂಘಟನೆ'ಯೆಂದು ಕರೆಯಬಹುದು.

ಪ್ರಜೋತ್ಪಾದನ, ಸಾಮಾಜಿಕ ಮಿತವ್ಯಯ, ಸಮಾಜಸಂಘಟನೆ, ಇವು ಒಂದು ತ್ರಿಕೋನದಂತಿರುವವು. ಇದರಲ್ಲಿ ಸಮಾಜಸಂಘಟನೆಗೆ ಅಥವಾ ಸಜೀವ ಪ್ರಾಣಿಗಳ ಸಮುದಾಯಕ್ಕೆ ಅವಶ್ಯವಾದ ಎಲ್ಲ ಜೀವನ ಕ್ರಮಗಳು ಅಡಕವಾಗಿರುತ್ತವೆ. ಈ ಮೂರು ಮಾತುಗಳು ಪ್ರಗತಿಪರವಾದ ಉದಾತ್ತವಾದ ಬೌದ್ಧಿಕ ಜೀವನಕ್ಕೆ ಬೇಕಾದ ಭೂಮಿಕೆಯನ್ನುಂಟು ಮಾಡಿಕೊಡುವವು. ಬೌದ್ಧಿಕ ಜೀವನವನ್ನು ಶಾಸ್ತ್ರ, ನೀತಿ, ಕಲೆ ಎಂದು ಮೂರು ಬಗೆಯಾಗಿ ವಿಭಾಗಿಸಬಹುದು.

ಶಾಸ್ತ್ರದಲ್ಲಿಯೇ ಮೂರು ಭಾಗಗಳನ್ನು ಮಾಡಬಹುದು. (೧) ಶಾಸ್ತ್ರ ಮತ್ತು ಶ್ರದ್ಧೆ. ಇವೆರಡೂ ಶಾರೀರಕ ಅಥವಾ ಬೌದ್ಧಿಕ ಅನುಭವಗಳನ್ನು ಅವಲಂಬಿಸಿರುತ್ತವೆ. ಅನುಭವಗಳಿಂದ ಸಿದ್ಧವಾದ ನಿಶ್ಚಿತ ಸಿದ್ಧಾಂತಗಳಿಗೆ ಜ್ಞಾನವೆಂಬ ಅಂಕಿತ. ಇಂತಹ ಜ್ಞಾನಭಾಂಡಾರವೇ ಶಾಸ್ತ್ರ. ಅಷ್ಟೊಂದು ನಿಶ್ಚಿತವಲ್ಲದ, ಒಮ್ಮೊಮ್ಮೆ ದೋಷಯುಕ್ತವಾದ ಅನುಭವಗಳಿಗೆ ಶ್ರದ್ಧೆ ಎಂಬ ಹೆಸರು. ಧರ್ಮ ಮತ್ತು ತತ್ವಜ್ಞಾನ ಇವೆರಡೂ ಶ್ರದ್ಧೆಯ ಎರಡು ವಿಧಗಳು. (೨) ರೀತಿ-ನೀತಿಗಳು. ಇವುಗಳಲ್ಲಿ ನಡೆವಳಿಯ ಬೇರೆ ಬೇರೆ ರೀತಿಗಳೂ, ನೀತಿತತ್ವಗಳೂ ಅಡಕವಾಗಿರುತ್ತವೆ. (೩) ಕಲೆ. ಇದು ವಿಶೇಷವಾಗಿ ಸಂಪತ್ತು, ಬಿಡುವುಗಳನ್ನವಲಂಬಿಸಿರುತ್ತದೆ. ಸಂಸ್ಕೃತಿಯ ಬಹಿರಂಗ ಕಟ್ಟಡದ (Superstructure) ಅತ್ಯುನ್ನತ ಶಿಖರವು ಇದು.

ಸಂಸ್ಕೃತಿಯ ಸಂಪೂರ್ಣ ಕ್ಷೇತ್ರವನ್ನು ಕೆಳಗಿನಂತೆ ವಿಭಾಗಿಸಬಹುದು :

**ಸಾಮಾಜಿಕ ಕಾರ್ಯಗಳು** (Sociological functions) :

(೧) ಪ್ರಜೋತ್ಪಾದನ
(೨) ಸಾಮಾಜಿಕ ಸ್ವಾತಂತ್ರ್ಯ
(೩) ಸಾಮಾಜಿಕ ಸಂಘಟನೆ
} ಅ. ತಳಹದಿ

(೪) ಮಾತು
(೫) ಶಾಸ್ತ್ರ
(೬) ಧಾರ್ಮಿಕ, ತಾತ್ವಿಕ ಶ್ರದ್ಧೆ
(೭) ನೀತಿ
(೮) ನ್ಯಾಯ
(೯) ಕಲೆ
} ಬ. ಮೇಲಿನ ಕಟ್ಟಡ

—

ನಾಲ್ಕನೆಯ ಮೆಟ್ಟಿಲು

ಆಹಾರ, ಉಪಕರಣ, ಉಡುಪು, ಮನೆ
ಇವುಗಳ ವಿಕಾಸಕ್ರಮ



## ಆಹಾರದ ವಿಕಾಸಕ್ರಮ

**ಆಹಾರದ ಬಗೆಗಳು:** ಪೃಥ್ವಿಯ ಮೇಲಿನ ಪೂರ್ವಕಾಲದ ಜನಾಂಗಗಳನ್ನು ಬೇಟೆಗಾರರು, ಜಾಲಗಾರರು (fishers), ದನಗಾರರು, ಮತ್ತು ಒಕ್ಕಲುತನಮಾಡುವವರೆಂದು ವಿಭಾಗಿಸುವುದು ರೂಢಿಯಲ್ಲಿರುತ್ತದೆ. ಯಾವುದಾದರೊಂದು ಜನಾಂಗದ ಸಂಸ್ಕೃತಿಯ ಮಟ್ಟನ್ನರಿತುಕೊಳ್ಳಲು, ಅವರ ಆಹಾರದ ಅರಿವು ಸಹಾಯಕಾರಿಯಾಗುವುದೆಂದು ನಮ್ಮ ಗ್ರಹಿಕೆ. ಜೀವಿಗಳ ಜೀವನಕ್ಕೆ ಜೀವನಸಾಮಗ್ರಿಗಳ ಹುಟ್ಟುವಳಿ ಅತ್ಯಾವಶ್ಯಕವಾಗಿರುತ್ತದೆ. ಹೆಚ್ಚು ಹೆಚ್ಚು ಆಹಾರಸಾಮಗ್ರಿಗಳನ್ನು ಬೆಳೆಸಿದಂತೆ, ಸಂಸ್ಕೃತಿಯು ನೇಲ್ಪರಗತಿಯ ಮೆಟ್ಟಲುಗಳನ್ನು ಏರಿತು. ಆದುದರಿಂದ ಬಹು ಪೂರ್ವ

ಕಾಲದಿಂದ ಈಗಿನ ವರೆಗೆ ಮನುಷ್ಯನು ತನ್ನ ಆಹಾರವನ್ನು ಯಾವ ಯಾವ ರೀತಿಗಳಿಂದ ದೊರಕಿಸಿದನೆಂಬುದನ್ನು ನೋಡೋಣ.

**ಬೇಟೆಗಾರರೂ–ಜಾಲಗಾರರೂ:** ಸಂಸ್ಕೃತಿಯ ತೀರ ಮೊದಲಿನ ಅವಸ್ಥೆಯನ್ನು ಅವಲೋಕಿಸಿದರೆ, ಆಗಿನ ಜನರು ದನ ಸಾಕುವುದನ್ನಾಗಲಿ ಒಕ್ಕಲುತನವನ್ನಾಗಲಿ ಅರಿತಿರಲಿಲ್ಲವೆಂದು ಕಂಡುಬರುತ್ತದೆ. ಪಶುಗಳಿಗಿಂತ ಹೆಚ್ಚಾಗಿ ಜಾಣರಾಗಿರಲಿಲ್ಲ. ನಿಸರ್ಗದಲ್ಲಿ ದೊರೆತ ವಸ್ತುಗಳೇ ಅವರ ಆಹಾರ. ಬೇಟೆಯಾಡುವುದರಿಂದ, ಮೀನು ಹಿಡಿಯುವುದರಿಂದ ಮತ್ತು ಕಾಡು ವನಸ್ಪತಿಗಳನ್ನು ಸಂಚಯಿಸುವುದರಿಂದ ಅವರು ತಮ್ಮ ಆಹಾರವನ್ನು ದೊರಕಿಸುತ್ತಿದ್ದರು. ಐರೋಪ್ಯರು ಇಂತಹ ಜನಾಂಗಗಳನ್ನು ಸಂಶೋಧಿಸಿದಾಗ ಅವರಿನ್ನೂ ಇಂತಹ ಕಾಡುಸ್ಥಿತಿಯಲ್ಲಿಯೇ ಇದ್ದುದು ಕಂಡುಬಂದಿತು. ಯುರೋಪಖಂಡವನ್ನುಳಿದು ಪೃಥ್ವಿಯ ಬೇರೆ ಎಲ್ಲ ಭಾಗಗಳಲ್ಲಿಯೂ ಇವರು ವಾಸವಾಗಿದ್ದರು. ಇವರನ್ನು ಈ ಬಗೆಯಾಗಿ ವಿಭಾಗಿಸಬಹುದು:

**ಮೊದಲನೆಯ ಗುಂಪು:** ಕೀಳುತರಗತಿಯ ಬೇಟೆಗಾರರು–ಈ ಜನರು ಖಂಡಗಳ ತುದಿಯಲ್ಲಿರುವ ರುಕ್ಷವಾದ ಅಹಿತಕರವಾದ ಭೂಭಾಗಗಳಲ್ಲಿಯೂ ಪರ್ವತಗಳ ಅತಿ ಗಹನವಾದ ದರಿ-ಕೊಳ್ಳಗಳಲ್ಲಿಯೂ, ದಟ್ಟಡವಿಗಳಲ್ಲಿಯೂ ವಾಸವಾಗಿರುತ್ತಿದ್ದರು. ಇವರಿಗೆ ನಿಶ್ಚಿತವಾದ ಮನೆಗಳಿರಲಿಲ್ಲ. ಸಿರಿವಂತರು ಬಡವರು ಎಂಬ ಭೇದಭಾವವಿರಲಿಲ್ಲ. ನೇತಾರರನ್ನು ಅರಿತಿರಲಿಲ್ಲ. ಗುಂಪು ಗುಂಪಾಗಿ ಸ್ಥಳದಿಂದ ಸ್ಥಳಕ್ಕೆ ಸಂಚರಿಸುತ್ತಿದ್ದರು. ಈ ಗುಂಪಿಗೆ ಸಂಬಂಧಪಟ್ಟ ಒಳ್ಳೇ ಹೆಸರಾದವರೆಂದರೆ ಆಸ್ಟ್ರೇಲಿಯನ್ನರು, ಮತ್ತು ಟಾಸ್ಮಾನಿಯನ್ನರು. ಇವರು ಆಸ್ಟ್ರೇಲಿಯವನ್ನು ಹುಡುಕಿ ತೆಗೆದಾಗ ಅಲ್ಲಿ ಪೂರ್ವದಿಂದಲೂ ಮನೆಮಾಡಿಕೊಂಡಿದ್ದ ಕಪ್ಪುಬಣ್ಣದ ಕಾಡುಜನರು. ಇವರಲ್ಲಿ ಟಾಸ್ಮಾನಿಯನ್ನರೂ ಮತ್ತು ಪಶ್ಚಿಮಭಾಗದಲ್ಲಿದ್ದವರೂ ತೀರ ಕಾಡು ಸ್ಥಿತಿಯಲ್ಲಿದ್ದರು. ದಕ್ಷಿಣಭಾಗದವರು ತುಸುಮಟ್ಟಿಗೆ, ಮತ್ತು ಉತ್ತರಭಾಗದವರು ಇನ್ನೂ ಹೆಚ್ಚು ಸುಧಾರಿಸಿದವರಾಗಿದ್ದರು. ಇವರಿಗಿಂತಲೂ ಹೆಚ್ಚು ಸುಧಾರಿಸಿದವರೆಂದರೆ ಮಧ್ಯ ಆಫ್ರಿಕದ ಪಿಗ್ಮೀ ಜನರು, ಸಿಲೋನ ಮತ್ತು ಅಂದಮಾನ ನಡುಗಡ್ಡೆಗಳಲ್ಲಿರುವ ಜನರು, ಮತ್ತು ಎಸ್ಕಿಮೊ ಜನರು. ಇವರ ಮುಖ್ಯ ಆಹಾರವು ಬೇಟೆಯಾಡಿ ತಂದ ಪಶುಪಕ್ಷಿಗಳ ಮಾಂಸ.

ಮಾಂಸಾಹಾರಿಗಳಾಗಿದ್ದರೂ, ಸೃಷ್ಟಿಯಲ್ಲಿ ಸಹಜವಾಗಿ ದೊರೆವ ಶಾಕ ಗಳನ್ನು ಆಗಾಗ ಉಪಯೋಗಿಸುತ್ತಿದ್ದರು. ನೀರು ಇವರ ಮುಖ್ಯ ಪೇಯ ಪದಾರ್ಥ. ಉಪ್ಪನ್ನು ಇವರು ಅರಿತಿರಲಿಲ್ಲ.

ಈ ಜನರು ಇಂತಹ ದುಃಖಕರವಾದ ಜೀವನಕ್ರಮವನ್ನು, ಆಹಾರ ದಂತೆ ಉಪಯುಕ್ತವಾಗುವ ಎಲ್ಲ ಪದಾರ್ಥಗಳನ್ನು ತಿಂದು ಸಾಗಿಸು ತ್ತಿದ್ದರು. ಬೇಟೆಯು ಹಲವಾರು ಸಲ ಫಲಕಾರಿಯಾಗದಿರುವ ಮೂಲಕ ಕಂಟಿಗಳಲ್ಲಿ ವಾಸವಾಗಿರುತ್ತಿದ್ದವರು (Bushmen) ಇರಿವೆಗಳತತ್ತಿಗಳನ್ನು, ಹುಳಗಳನ್ನು, ಕಪ್ಪೆಗಳನ್ನು, ಕಾಡುಜೇನುತುಪ್ಪ, ಗಡ್ಡೆಗೆಣಸು, ಹಾವು ಮುಂತಾದವುಗಳನ್ನು ತಿಂದು ಉಪಜೀವಿಸುತ್ತಿದ್ದರು. ಆಸ್ಟ್ರೇಲಿಯದವರು ಬಗೆಬಗೆಯ ಬೇರುಗಳನ್ನೂ, ಮೀನ, ಕೀಟಕ, ಕಣ್ಣುಕಪ್ಪಲಿ, ಕಪ್ಪೆ, ಹಾವು, ಜೇನುತುಪ್ಪ, ಹುಳ, ಜೊಂಡಿಗ, ಪಕ್ಷಿಗಳು ಮತ್ತು ಅವುಗಳ ತತ್ತಿಗಳು, ಆವೆ, ನಾಯಿ, ಕ್ಯಾಂಗರೂ, ಮುಂತಾದವುಗಳನ್ನು ತಿಂದು ಇರುತ್ತಿದ್ದರು. ಹೇನು ತಿನ್ನುವ ರೂಢಿಯು ಇವರಲ್ಲಿತ್ತು. ಅದಕ್ಕಾಗಿ ಅವರು ಪರಸ್ಪರ ರನ್ನು ಬೇಟೆಯಾಡಿ ಕೊಂದು, ಬಹಳ ಹೇನು ದೊರೆತರೆ ಬಹು ಸಂತೋಷ ದಿಂದ ಕೇಕೆ ಹಾಕುತ್ತ ತಿನ್ನುತ್ತಿದ್ದರು.

ಈ ಅವಸ್ಥೆಯಲ್ಲಿದ್ದ ಮನುಷ್ಯನು ಎಲ್ಲವನ್ನೂ ತಿಂದು ಜೀವಿಸುವಂತ ಹನು. ಎಷ್ಟು ಅಸಹ್ಯವಾದರೂ ಅಂತಹ ಆಹಾರವನ್ನೇ ತಿನ್ನುತ್ತಿದ್ದನು. ಅಂತಹದು ಕೂಡ ಒಮ್ಮೊಮ್ಮೆ ದುರ್ಲಭವಾಗುತ್ತಿತ್ತು. ಕೀಳು ತರಗತಿಯ ಬೇಟೆಗಾರರ ಜೀವನದಲ್ಲಿ ಕೊರತೆ ಮತ್ತು ಹಸಿವು ಬಹು ಮುಖ್ಯವಾದವು ಗಳು. ಹಸಿವನ್ನು ತಡೆದುಕೊಳ್ಳಲು ಇವರು ಒಂದು ಬಗೆಯ ಹಸಿವಿನ ಕಡಗ ವನ್ನು ಹಾಕಿಕೊಳ್ಳುತ್ತಿದ್ದರು. ಇದ್ದಾಗ ಅತ್ಯಂತವಾಗಿ ತಿನ್ನುವ, ಇಲ್ಲದಾಗ ಎಷ್ಟೋ ದಿನಗಳ ವರೆಗೆ ಉಪವಾಸಮಾಡುವ ಗುಣಗಳೂ ಇವರಲ್ಲಿ ಅತಿ ಆಶ್ಚರ್ಯಕರವಾಗಿರುತ್ತಿದ್ದವು.

**ಎರಡನೆಯ ಗುಂಪು—ಮೇಲ್ತರಗತಿಯ ಬೇಟೆಗಾರರು :** ಇವರಲ್ಲಿ ಹೆಚ್ಚು ಸುಧಾರಿಸಿದ ರೀತಿಗಳು ಕಂಡುಬರುತ್ತವೆ. ಈ ಗುಂಪಿನಲ್ಲಿ ಇಂಡಿಯನ್ ಬೇಟೆಗಾರರೂ, ಕ್ಯಾಲಿಫೋರ್ನಿಯದವರೂ, ಕೋಮಾಂಚರೂ (Comanches), ಶೊಶೋನರೂ (Shoshones) ಮುಂತಾದವರು ಸಮಾವೇಶ

ವಾಗುತ್ತಾರೆ. ಇವರು ಸುಸ್ಥಿತಿಯಲ್ಲಿರಲಿಕ್ಕೆ ಕಾರಣವೆಂದರೆ, ಅಡವಿಗಳಲ್ಲಿ ಕಾಡಾಕಳ, ಕಾಡೆಮ್ಮೆ, ಚಿಗರೆ-ಸಾರಂಗಗಳ ವಿಪುಲತೆ. ಉತ್ತರ ಅಮೇರಿಕೆ ಯಲ್ಲಿ, ಪ್ಲಮ್, ಕುಂಬಳ, ನೀರುಜತ್ತ, ಕಾಡು ಜವೆಗೋದಿ ಮುಂತಾದ ಕಾಡು ಆಹಾರಸಾಮಗ್ರಿಗಳು ದೊರೆಯುತ್ತಿದ್ದವು.

**ಮೂರನೆಯ ಗುಂಪು—(೧) ಜಾಲಗಾರರು :** ಅಮೇರಿಕೆಯ ವಾಯುವ್ಯ ಭಾಗದ, ಏಶಿಯದ ಈಶಾನ್ಯ ಭಾಗದ ಸಮುದ್ರ ದಡದಲ್ಲಿರುವ ಮೀನುಗಾರರು ಈ ಗುಂಪಿನಲ್ಲಿ ಬರುತ್ತಾರೆ. ಒಕ್ಕಲುತನ, ದನಕರಗಳನ್ನು ಸಾಕುವದನ್ನರಿಯದ ಜನರಲ್ಲಿ ಇವರು ಒಳ್ಳೇ ಮುಖ್ಯರು. ಸಮುದ್ರ, ನದಿ ಗಳಲ್ಲಿ ದೊರೆವ ಮೀನುಗಳ ವೈಪುಲ್ಯದ ಮೂಲಕ ಇವರು ಆಹಾರಸಾಮ ಗ್ರಿಯ ವಿಷಯದಲ್ಲಿ ಒಳ್ಳೇ ವೈಭವಶಾಲಿಗಳು. ಇವರು ಸ್ಥಾಯಿಗಳಾಗಿ ಮನೆಮಾರು ಕಟ್ಟಿಕೊಂಡಿರುವವರು. ಇವರ ಕುಶಲತೆಯನ್ನು ಸೂಚಿಸುವ ಒಳ್ಳೇ ಆಯುಧಗಳೂ ಉಪಕರಣಗಳೂ ಪಾತ್ರೆಗಳೂ ಇವರಲ್ಲಿ ಇದ್ದುದು ಕಂಡುಬರುತ್ತದೆ. ಇವರು ತಮ್ಮ ಆಯುಧಗಳನ್ನು ತಮ್ಮ ಮನೆಮಾರು ಗಳನ್ನು ವೈಯಕ್ತಿಕವಾಗಿ ತಮ್ಮ ತಮ್ಮ ಕೈಯಲ್ಲಿಟ್ಟುಕೊಂಡಿರುತ್ತಾರೆ. ಇವರು ವ್ಯಾಪಾರಿಗಳು. ಗುಲಾಮರನ್ನಿಟ್ಟುಕೊಂಡು ಶ್ರಮವಿಭಾಗವನ್ನರಿತು ಕೊಂಡು ಕೆಲಸಮಾಡುವವರು. ಇವರ ಸಂಸ್ಕೃತಿಯ ಅವಸ್ಥೆಯು, ಆಹಾರದ ವೈಪುಲ್ಯದ ಮೂಲಕ, ದನಗಾರರ ಅಥವಾ ಒಕ್ಕಲುತನಮಾಡಿ ಕೊಂಡಿದ್ದವರ ಅವಸ್ಥೆಗಿಂತಲೂ ಮೇಲ್ತರಗತಿಯದು.

**(೨) ದನಗಾರರು:** ಜಗತ್ತಿನ ಮುಖ್ಯ ಹುಲ್ಲುಗಾವಲು ಪ್ರದೇಶ ಗಳೆಂದರೆ ಆಫ್ರಿಕೆಯೊಳಗಿನ ಬಣಪ್ರದೇಶ ಮತ್ತು ಏಶಿಯದೊಳಗಿನ 'ಸ್ಟೆಪ್ಸ' ಪ್ರದೇಶವು. ಏಶಿಯಖಂಡದಲ್ಲಿ ಪ್ರಾಮುಖ್ಯವಾಗಿ ದನಕರುಗಳನ್ನು ಸಾಕಿ ಕೊಂಡಿರುವವರೆಂದರೆ ಮಂಗೋಲಿಯನ್‌ರು, ತುರ್ಕಸ್ತಾನದವರು ಮತ್ತು ತಾರ್ತರರು. ಇವರು ಕುದುರೆ, ದನ, ಕುರಿ, ಒಂಟೆ ಮುಂತಾದವುಗಳ ಗುಂಪುಗಳೊಂದಿಗೆ ಮಧ್ಯ ಏಶಿಯದ ವಿಶಾಲವಾದ ಹುಲ್ಲುಗಾವಲು ಪ್ರದೇಶ ದಲ್ಲಿ ಒಂದೆಡೆಯಿಂದ ಮತ್ತೊಂದೆಡೆಗೆ ತಿರುಗಾಡುತ್ತಾರೆ. ಇವರೊಳಗೆ ತುರ್ಕೊಮನ್ಸ್, ಉಝ್ಬೆಗ್ಸ, ಕಿರಗೀಜ ಅಥವಾ ಕೆಸಾಕ್ಸ ಎಂಬವರು ಸುಮಾರು ಎರಡು ಮೂರು ದಶಲಕ್ಷ ಜನರಿರುತ್ತಾರೆ. ಇದಲ್ಲದೆ ಏಶಿಯದ

ತಪ್ಪಲು ಪ್ರದೇಶದ ಟಿಬೇಟರೂ, ದಕ್ಷಿಣ ಹಿಂದುಸ್ತಾನದ ತೋಡರೂ (Todas), ರೇನಡಿಯರುಗಳನ್ನು ಸಾಕುವವರೂ, ಸೆಮಾಯಿಡರೂ, ಒಸ್ಟಿ-ಯಾಕ್ಸ್, ಒಗುಲ್ಸ್, ಟುಂಗುಜ ಮೊದಲಾದವರಿರುತ್ತಾರೆ. ಆಫ್ರಿಕೆಯಲ್ಲಿ ಬಿಡೊಯಿನ್‌ರು, ಡಿಂಕ, ಬರಿ, ಮಸಾಯಿ, ವಾಹುಮ, ಗಲ್ಲ, ಸೊಮಾಲಿ, ಹೊಟೆಂಟೊಟ್ಸ ಮೊದಲಾದವರಿರುತ್ತಾರೆ. ಯುರೋಪದಲ್ಲಿ 'ಲ್ಯಾಪ್' ಜನರೇ ಮುಖ್ಯರು. ಅಮೇರಿಕೆಯನ್ನು ಕಂಡುಹಿಡಿದಾಗ ಅಲ್ಲಿ ಪೆರೂವಿಯನ್‌ರ ಹೊರತು ಇನ್ನಾವ ದನಗಾರರೂ ಇರಲಿಲ್ಲ. ಆರ್ಯರ, ಸಿದಿಯನ್‌ರ, ಪಾರ್ಥಿಯನ್‌ರ ಮೂಲಪುರುಷರು ದನಗಾರರಾಗಿದ್ದರು.

ಈ ಜನರು ಮಾಂಸಾಹಾರಿಗಳಾಗಿದ್ದರೂ ಅಷ್ಟು ಕ್ರೂರರಿದ್ದಿಲ್ಲ. ದನಗಳ ಹಿಂಡು ತನ್ನ ಸಂಪತ್ತೆಂದು ಅರಿತ ಪ್ರತಿಯೊಬ್ಬ ದನಗಾರನೂ, ತನ್ನ ದನಗಳ ಸುಖಕ್ಕೂ ಬೆಳೆವಣಿಗೆಗೂ ಅವಶ್ಯವಾದ ಕೆಲಸಗಳಲ್ಲಿಯೇ ತೊಡಗಿರುತ್ತಿದ್ದನು. ತನ್ನ ಹಿಂಡುಗಳನ್ನು ವಿಚಾರವಿಲ್ಲದೆ ಕೊಲ್ಲುತ್ತಿರಲಿಲ್ಲ. ಅವು ಬೇನೆಯಿಂದ ಬಳಲುತ್ತಿದ್ದರೆ, ಗಾಯಗೊಂಡಿದ್ದರೆ, ಸಮಾರಂಭ ಯಜ್ಞ ಧರ್ಮಕ್ರಿಯೆಗಳಿಗಾಗಿ ಬೇಕಿದ್ದರೆ ಮಾತ್ರ ಅವುಗಳನ್ನು ಕೊಲ್ಲುತ್ತಿದ್ದರು. ಅಲ್ಲದೆ ದನಗಾರರಿಗೆ ಹಾಲಿನ ಮೇಲೆ ಬಲು ಪ್ರೀತಿ ಕೆಲವರು ಪ್ರತಿ ದಿನ ೫-೯ ಸೇರು ಹಾಲು ಕುಡಿಯುವವರಿದ್ದರು. ಮತ್ತೆ ಕೆಲವರಲ್ಲಿ ಕಾಲಕಾಲಕ್ಕೆ ಸಜೀವ ಪಶುಗಳ ಮೈಯಿಂದ ರಕ್ತವನ್ನು ಹೊರಚೊಮ್ಮಿಸಿ ಅದನ್ನು ಕುಡಿಯುವ ರೂಢಿಯಿತ್ತು. ದನಗಳೇ ತಮ್ಮ ಸರ್ವಸ್ವ ಆಹಾರವೆಂದು ಯಾವ ದನಗಾರರೂ ತಿಳಿಯುತ್ತಿರಲಿಲ್ಲ. ಗಂಡಸು ಅನಾದಿಕಾಲದಿಂದ ಬಂದ ಬೇಟೆಯಾಡುವ ತನ್ನ ಉದ್ಯೋಗವನ್ನು ಮರೆತಿರಲಿಲ್ಲ. ಹೆಂಗಸು ಅಡಿಗೆಮಾಡುವುದನ್ನೂ, ಸೃಷ್ಟಿಯಲ್ಲಿ ಸಹಜವಾಗಿ ದೊರೆಯುವ ಗಡ್ಡೆಗೆಣಸು ಹಣ್ಣುಕಾಯಿಗಳನ್ನು ಕೂಡಿಸುವ ಕೆಲಸವನ್ನೂ ಸಾಗಿಸುತ್ತಿದ್ದಳು. ಕೆಲವೊಂದು ದನಗಾರರು ಭೂಮಿಯನ್ನು ಸಾಗುವಳಿ ಮಾಡುತ್ತಿದ್ದರು. ಇಲ್ಲವೆ ನೆರೆಹೊರೆಯ ಒಕ್ಕಲುತನ ಮಾಡುವವರ ಮೇಲಿನ ತಮ್ಮ ದರ್ಪದಿಂದಾಗಲಿ ಅಥವಾ ಕೆಲವೊಂದು ವಸ್ತುಗಳ ವಿನಿಮಯದಿಂದಾಗಲಿ ಕಾಳುಕಡಿಗಳನ್ನು ಹೊಂದುತ್ತಿದ್ದರು.

**(೩) ಒಕ್ಕಲುತನಮಾಡುವವರು:** ಮಾನವರಲ್ಲಿ ಬಹು ಸಂಖ್ಯಾಕರು

ಒಕ್ಕಲುತನಮಾಡುತ್ತಾರೆ. ಆದರೆ ಅವರೆಲ್ಲರೂ ಸಂಸ್ಕೃತಿಯ ಬೇರೆ ಬೇರೆ ತರಗತಿಗಳನ್ನು ತಲುಪಿದ್ದಾರೆ. ಅವರು ಕೆಲಸಮಾಡುವ ಪದ್ಧತಿಗಳೂ ಬೇರೆ ಬೇರೆಯಾಗಿರುತ್ತವೆ. ಒಕ್ಕಲುತನದಲ್ಲಿ ನಾವು ಕೆಳಗಿನ ನಾಲ್ಕು ವಿಭಾಗ ಗಳನ್ನು ಮಾಡಬಹುದು

೧. ಗುದ್ದಲಿಯಿಂದ ಮಾಡುವ ಒಕ್ಕಲುತನ.

೨. ರಂಟೆಯಿಂದ ಮಾಡುವ ಒಕ್ಕಲುತನ.

೩. ತೋಟವಾಳಿಕೆ.

೪. ವ್ಯಾವಹಾರಿಕ ಒಕ್ಕಲುತನ.

**೧. ಗುದ್ದಲಿಯಿಂದ ಮಾಡುವ ಒಕ್ಕಲುತನ:—** ಪ್ರಾಕೃತಿಕ ಜನರಲ್ಲಿ ಬಹುತರ ಎಲ್ಲ ಗುದ್ದಲಿಯಿಂದ ಒಕ್ಕಲುತನ ಮಾಡುವವರು ಶಾಕಾಹಾರಿಗಳಿರುತ್ತಾರೆ. ಕಾಳು ಇವರ ಮುಖ್ಯ ಆಹಾರ. ಬಲಿತ ಕಾಳುಗಳನ್ನು ಬೀಸಿ, ಅವನ್ನು ನೀರಿನಲ್ಲಿ ಕುದಿಸಿ, ಒಂದು ಬಗೆಯ ಮುದ್ದಿಯನ್ನು ಮಾಡುತ್ತಾರೆ. ಇಂತಹ ಊಟದ ಮುದ್ದಿಗೆ ಒಂದು ಬಗೆಯ ವಿಶಿಷ್ಟ ಮಹತ್ವವಿರುತ್ತದೆ. ಈ ಹಿಟ್ಟಿನ ಮುದ್ದಿಯೇ ಮುಂದೆ ರೋಮನ್‌ರ ಮೊದಲನೆಯ ಪ್ಯೂನಿಕ್ ಯುದ್ಧದ ಸಮಯದಲ್ಲಿ ರೊಟ್ಟಿಯ ರೂಪವನ್ನು ತಾಳಿತು. ಇಂಡಿಯನ್‌ರು ಗೋವಿನಜೋಳದಿಂದ ಈ ಹಿಟ್ಟಿನ ಮುದ್ದಿಯನ್ನು ಮಾಡುತ್ತಿದ್ದರು. ಗೋವಿನಜೋಳವನ್ನಲ್ಲದೆ, ಅವರೆ, ಕುಂಬಳ, ತಂಬಾಕು, ಬಾಳೆ, ಬಟಾಟೆ ಮುಂತಾದವುಗಳನ್ನು ಬೆಳೆಯುತ್ತಿದ್ದರು. ಓಸಿಯಾನಿ ಯನ್‌ರು ಒಕ್ಕಲುತನಕ್ಕೆ ಅತ್ಯುತ್ತಮವಾದ ಹವೆಯುಳ್ಳ ಪ್ರದೇಶದಲ್ಲಿರು ತ್ತಾರೆ ಇವರು ಒಂದು ವನಸ್ಪತಿಯ ಬೇರಿನಿಂದ ತಮ್ಮ ಆಹಾರಸಾಮಗ್ರಿ ಯನ್ನು ಹೊಂದುತ್ತಾರೆ. ಇದಲ್ಲದೆ ರೊಟ್ಟಿಯ ಹಣ್ಣು (Bread fruit) ಅವರಿಗೆ ಆಹಾರಕ್ಕಾಗಿ ಒಳ್ಳೇ ಉಪಯುಕ್ತವಾಗಿರುತ್ತದೆ. ಮೂರು ರೊಟ್ಟಿಯ ಹಣ್ಣಿನ ಗಿಡಗಳು, ಒಬ್ಬ ಮನುಷ್ಯನ ಇಡೀ ಆಯುಷ್ಯದಲ್ಲಿ ಬೇಕಾಗುವಷ್ಟು ಆಹಾರವನ್ನು ಒದಗಿಸಿಕೊಡಬಲ್ಲವಂತೆ. ಇದಲ್ಲದೆ ಬಾಳೆಯ ಹಣ್ಣು ಅವರಿಗೆ ದೊರೆಯುತ್ತದೆ. 'ರಿಟ್ಟರ'ನು ಹೇಳುವಂತೆ ಇಂತಿಷ್ಟು ಕ್ಷೇತ್ರದಲ್ಲಿ ಬೆಳೆದ ಬಾಳೆಯಹಣ್ಣು ಅಷ್ಟೇ ಕ್ಷೇತ್ರದಲ್ಲಿ ಬೆಳೆದ ಗೋದಿಯು ಪೋಷಿಸಬಹುದಾದ ಜನರಿಗಿಂತಲೂ ಇಪ್ಪತ್ತೈದುಪಟ್ಟು ಜನರನ್ನು

ಪೋಷಿಸಬಹುದಂತೆ. ಇವರು ಉಪಯೋಗಿಸುವ ಬೇರೆ ಆಹಾರಸಾಮಗ್ರಿ ಗಳೆಂದರೆ 'ಯಾಮ್' ಎಂಬ ವನಸ್ಪತಿಯ ೩೦-೪೦ ಪೌಂಡು ಭಾರವುಳ್ಳ ಬೇರುಗಳು, ಬಟಾಟೆ, ತೆಂಗು, ಕಬ್ಬು ಮುಂತಾದವು. ಇದಲ್ಲದೆ ವಿವಿಧ ಮೀನುಗಳು, ಬಿಸಿನೆತ್ತರದ ಹಲವಾರು ಹಕ್ಕಿಗಳು ಪಾರಿವಾಳಗಳು, ನೀರು-ಗೋಳಿಗಳು ಮುಂತಾದವುಗಳನ್ನು ಇವರು ಉಪಯೋಗಿಸುತ್ತಾರೆ. ಹಂದಿ ನಾಯಿಗಳನ್ನು ಆಗಾಗ ಸಾಕುತ್ತಲಿರುತ್ತಾರೆ.

ಆಫ್ರಿಕನ್‌ರು ಕಾಳುಗಳಿಂದಲೇ ಹಿಟ್ಟಿನ ಮುದ್ದಿಯನ್ನು ಮಾಡು ತ್ತಾರೆ. ಅವರು ಗೋವಿನಜೋಳ, ಅವರೆ, ಬಟಾಟೆ, ಅಕ್ಕಿ, ತಂಬಾಕು ಗಳನ್ನು ಬೆಳೆಸುತ್ತಾರೆ. ಒಕ್ಕಲುತನದೊಡನೆ ದನಸಾಕುವ ಉದ್ಯೋಗ ವನ್ನು ಜತೆಗೊಳಿಸುವ ಒಕ್ಕಲಿಗರು ಕುರಿ, ಹಂದಿ, ನಾಯಿ, ಕೋಳಿ, ನೀರು-ಗೋಳಿ, ಪಾರಿವಾಳ, ಬಾತುಗೋಳಿ ಮೊದಲಾದವುಗಳನ್ನು ಸಾಕುತ್ತಾರೆ. ಆದರೆ ಅವರ ಮುಖ್ಯ ಆಹಾರವೆಂದರೆ ಹಿಟ್ಟಿನ ಮುದ್ದಿ ಮತ್ತು ಹಾಲು. ಹಿಂದುಸ್ತಾನದಲ್ಲಿ ಈಗಲೂ ಒಕ್ಕಲುತನಮಾಡುವವರು ಆಡು, ಕುರಿ, ಕೋಳಿ, ಹಂದಿ ಮುಂತಾದವುಗಳನ್ನು ಆಹಾರಕ್ಕಾಗಿಯೂ, ಮಾರಾಟ ಕ್ಕಾಗಿಯೂ ಸಾಕಿಕೊಂಡಿರುವುದನ್ನು ನೋಡಿದರೆ ಪ್ರಾಚೀನಕಾಲದಲ್ಲಿ ಹಿಂದುಸ್ತಾನದಲ್ಲಿಯೂ ಇದೇ ರೂಢಿ ಇತ್ತೆಂದು ಹೇಳಬಹುದು.

ಗುದ್ದಲಿಯಿಂದ ಒಕ್ಕಲುತನಮಾಡುವ ಈ ಪ್ರಾಕೃತಿಕ ಜನರನ್ನು ಸಂಸ್ಕೃತಿಯ ದೃಷ್ಟಿಯಿಂದ ನೋಡಿದರೆ ಇವರಲ್ಲಿ ಅಮೇರಿಕೆಯ ಇಂಡಿ-ಯನ್‌ರು ತೀರ ಹೀನಾವಸ್ಥೆಯಲ್ಲಿರುತ್ತಾರೆಂಬುದು ಕಂಡುಬರುತ್ತದೆ. ಬೇಟೆ ಯಾಡುವುದನ್ನೊಳಗೊಂಡ ಒಕ್ಕಲುತನವು ತೀರ ಕೀಳು ತರಗತಿಯದು. ಇದರಲ್ಲಿ ಮಾನವನು ಆಹಾರವನ್ನು ದೊರಕಿಸುವ ಬಹು ಹೀನ ಉಪಾಯ ವಾದ ಬೇಟೆಯಲ್ಲಿಯೇ ತನ್ನ ತನು-ಮನಗಳನ್ನು ತೊಡಗಿಸಿಕೊಂಡಿರು ತ್ತಾನೆ. ಹೆಣ್ಣುಮಕ್ಕಳು ಭೂಮಿಯ ಸಾಗುವಳಿಯ ಕೆಲಸವನ್ನು ಮಾಡು ತ್ತಾರೆ. ಈ ಪದ್ಧತಿಯಲ್ಲಿ ಗಂಡಸು ಕೀಳು ಬಗೆಯಿಂದ ಆಹಾರವನ್ನು ದೊರಕಿಸುವ ಪ್ರಯತ್ನದ ಮೂಲಕ ಹೆಂಗಸಿಗಿಂತಲೂ ಹೆಚ್ಚು ಕಾಡುಸ್ಥಿತಿ ಯಲ್ಲಿರುತ್ತಾನೆ.

ಮೀನು ಹಿಡಿಯುವ ರೂಢಿಯುಳ್ಳ ಓಸಿಯನ್‌ರು ತುಸು ಮೇಲ್ತರ-

ಗತಿಯುವರು. ಯಾಕೆಂದರೆ ಬೇಟೆಯಾಡುವುದರಲ್ಲಿ ವೆಚ್ಚವಾಗುವಷ್ಟು ಕಾಲವು ಮೀನು ಹಿಡಿಯುವುದರಲ್ಲಿ ಆಗುವುದಿಲ್ಲ. ಮೀನು ಹಿಡಿಯುವ ಕೆಲಸವು ಒಕ್ಕಲುತನದಲ್ಲಿ ಭಾಗವಹಿಸಲು ಪ್ರತಿಬಂಧಕವಾಗುವುದಿಲ್ಲ. ಇವರ ಮುಖಂಡರು ಕೂಡ ಒಕ್ಕಲುತನದಲ್ಲಿ ಆಸ್ಥೆಯಿಂದ ಕೆಲಸಮಾಡುವರು. ಇವರಲ್ಲಿ ಸ್ವಾಭಾವಿಕವಾಗಿ ದೊರೆವ ಆಹಾರಕ್ಕಿಂತಲೂ ಸ್ವಯಂ ಪ್ರಯತ್ನದಿಂದ ದೊರೆವ ಆಹಾರದ ಮೇಲೆ ಅವಲಂಬನವು ಹೆಚ್ಚಾಗಿರುತ್ತದೆ. ಆಫ್ರಿಕನ್ನರು ಇದಕ್ಕಿಂತಲೂ ಒಂದು ಹೆಜ್ಜೆ ಮುಂದೆ ಹೋದವರು. ಒಕ್ಕಲುತನವೇ ಅವರ ಮುಖ್ಯ ಉದ್ಯೋಗ. ಬೇಟೆಯಾಡುವುದು ತೀರ ಕಡಿಮೆ. ದನಕರುಗಳನ್ನು ಸಾಕಿ ಹಾಲುಹೈನಗಳನ್ನುಪಯೋಗಿಸುವ ರೂಢಿಯೂ ಇವರಲ್ಲಿದೆ.

**೨. ರಂಟೆಯಿಂದ ಒಕ್ಕಲುತನ:** ರಂಟೆ ಮತ್ತು ದನಗಳ ಸಹಾಯದಿಂದ ಭೂಮಿಯನ್ನು ಹದಗೊಳಿಸಿ ಬೆಳೆಯನ್ನು ಬೆಳೆಯುವದು ಈ ಪದ್ಧತಿಯಲ್ಲಿ ಕಂಡುಬರುತ್ತದೆ. ಯುರೋಪದಲ್ಲಿಯ ಜನರೂ, ಆರ್ಯರು ಮತ್ತು ಸಿಮೆಟಿಕ್ ಜನರೂ ಬಹುಪೂರ್ವಕಾಲದಿಂದ ಈ ಪದ್ಧತಿಯನ್ನು ಅನುಸರಿಸುತ್ತಿದ್ದರು. ಭೂಮಿಯ ಮೇಲೆ ಬೆಳೆದಿರುವ ಗಿಡಗಂಟೆಗಳನ್ನು ಸುಡುವದರಿಂದ ಅದಕ್ಕೆ ಗೊಬ್ಬರವುಂಟಾಗುವದು. ಈ ಬಗೆಯ ಒಕ್ಕಲುತನವನ್ನು ಮೂರು ವಿಧವಾಗಿ ಸಾಗಿಸುತ್ತಾರೆ. (೧) ಹೊಲದಲ್ಲಿ ಮೂರು ಭಾಗಗಳನ್ನು ಮಾಡುವದು. ಒಂದನ್ನು ಬೀಳುಬಿಡುವುದು. ಒಂದರಲ್ಲಿ ಬೇಸಿಗೆಯ ಬೀಜಗಳನ್ನು ಮತ್ತೊಂದರಲ್ಲಿ ಚಳಿಗಾಲದ ಬೀಜಗಳನ್ನು ಬಿತ್ತುವುದು. ಬೀಳು ಬಿಡುವುದಕ್ಕೆ ಕಾರಣವೆಂದರೆ ಗೊಬ್ಬರ ಶ್ರಮಗಳನ್ನು ಕಡಿಮೆಮಾಡಿಕೊಳ್ಳುವದು. (೨) ಇಡೀ ಭೂಮಿಯಲ್ಲಿ ಕೆಲವು ವರುಷ ಕೇವಲ ಹುಲ್ಲನ್ನು ಬೆಳೆಸುವದು ಮತ್ತೆ ಕೆಲವು ವರುಷ ಬರಿ ಕಾಳುಗಳನ್ನು ಬೆಳೆಯುವದು. (೩) ಕ್ರಮದಿಂದ ಬೆಳೆಗಳನ್ನು ಬದಲಿಸುವದು. ತಂಬಾಕು, ಬೇಳೆ ಮುಂತಾದ ಭೂಮಿಗೆ ಕಸುವನ್ನುಂಟುಮಾಡಿಕೊಡುವ ಬೆಳೆಗಳನ್ನು ಒಮ್ಮೆ ಬಿತ್ತಿದರೆ ಮತ್ತೊಮ್ಮೆ ಅದೇ ಭಾಗದಲ್ಲಿ ಭೂಮಿಯಿಂದ ಕಸುವನ್ನು ಹೀರಿಕೊಳ್ಳುವ ಬೆಳೆಗಳಾದ ಕಾಳುಕಡಿ, ಎಣ್ಣೆಯಕಾಳು, ಹೆಂಪ, ಫ್ಲಾಕ್ಸ ಮೊದಲಾದವುಗಳನ್ನು ಬಿತ್ತುವದು. ಈ ಉಪಾಯದಿಂದ ಭೂಮಿಯು ಬೀಳಾಗುವ

ಉಪಾಯವನ್ನು ತಪ್ಪಿಸುವದಲ್ಲದೆ ಹೆಚ್ಚೆಚ್ಚು ಬೆಳೆ ಬೆಳೆಸಲಿಕ್ಕೂ ಸಾಧ್ಯ ವಾಗುವದು.

**೩. ತೋಟವಾಳಿಕೆ :** ಭೂಮಿಯನ್ನು ಸಾಗು ಮಾಡುವ ಎಲ್ಲ ಪದ್ಧತಿಗಳಿಗಿಂತಲೂ ಇದು ಅತ್ಯುತ್ತಮವಾದುದು. ಈ ಬಗೆಯ ಒಕ್ಕಲು ತನವು, ಪೂರ್ವಕಾಲದಲ್ಲಿ ಪೇರು, ಮೇಕ್ಸಿಕೊ ಮುಂತಾದ ಭಾಗ ಗಳಿದ್ದು, ಈಗ ಜಪಾನ, ಮುಖ್ಯವಾಗಿ ಚೀನ, ಹಿಂದುಸ್ತಾನ ದೇಶಗಳಲ್ಲಿ ದಟ್ಟಾದ ಜನವಸತಿಗೆ ಬೇಕಾದಷ್ಟು ಆಹಾರವನ್ನೊದಗಿಸಿಕೊಡುತ್ತದೆ. ಈ ಭಾಗಗಳಲ್ಲಿ ಇದುವೆ ಪ್ರಾಚೀನ ಸಂಸ್ಕೃತಿಯ ತಳಹದಿಯಾಗಿದೆ. ನೀರು, ಗೊಬ್ಬರ, ಶ್ರಮ ಈ ಮೂರು ಅಂಶಗಳು ಈ ಬಗೆಯ ಒಕ್ಕಲುತನವನ್ನು ಯಶಸ್ವಿಯಾಗಿ ಮಾಡಬಲ್ಲವು. ಶಿಸ್ತಿನಿಂದ ಕೆಲಸಮಾಡುವುದರಿಂದ ತನುಮನ ಗಳೆರಡೂ ವೃದ್ಧಿಯನ್ನು ಹೊಂದುವವು. ಹೆಚ್ಚು ಬಂಡವಲು ಅಥವಾ ಹಣದ ವೆಚ್ಚವಿಲ್ಲದೆ ಬೇಕಾದಷ್ಟು ಬೆಳೆಯನ್ನು ಬೆಳೆದುಕೊಳ್ಳಬಹುದು. ಒಂದು ಕೊಡ, ಒಂದು ಸಲಕೆ, ಒಂದು ಕಟ್ಟಿಗೆಯ ರಂಟೆ ಅಲ್ಲದೆ ಮುಖ್ಯವಾಗಿ ಒಂದು ಗುದ್ದಲಿ ಇವೇ ಅವಶ್ಯವಾಗಿ ಬೇಕಾಗುವ ಸಾಮಾನುಗಳು. ಸ್ವಾವ ಲಂಬನವೇ ಇದರ ಮುಖ್ಯ ತತ್ತ್ವವಾಗಿರುವುದರಿಂದ ಮನಸ್ಸಿಗೆ ಶಾಂತಿಯೂ, ದೇಹಕ್ಕೆ ಆರೋಗ್ಯವೂ, ಹೊಟ್ಟೆಗೆ ಆಹಾರದ ಸಮೃದ್ಧಿಯೂ ಉಂಟಾಗ ದಿರಲಾರದು.

**೪. ವ್ಯಾವಹಾರಿಕ ( ವ್ಯಾಪಾರಿ ) ಒಕ್ಕಲುತನ :** ಯಾವುದಾದ ರೊಂದು ಉದ್ಯೋಗವು ಪರಿಪೂರ್ಣತೆಯನ್ನು ಪಡೆದಿದೆಯೋ ಎಂಬುದನ್ನರಿತು ಕೊಳ್ಳಬೇಕಾದರೆ, ಅದು ಭೂಮಿಯಿಂದ ಎಷ್ಟೊಂದು ಆಹಾರವನ್ನು ದೊರಕಿಸಬಹುದೆಂಬ ಒಂದೇ ಮಾತನ್ನು ಪರೀಕ್ಷಿಸಿದರೆ ಆಗುವದಿಲ್ಲ. ಅದಕ್ಕೆ ಶ್ರಮವು ಎಷ್ಟು ಬೇಕೆಂಬುದನ್ನು ಪರೀಕ್ಷಿಸಬೇಕು. ಶ್ರಮವು ಕಡಿಮೆ ಯಾಗಿರಬೇಕು, ಆಹಾರದ ಉತ್ಪನ್ನವು ಹೆಚ್ಚಾಗಿರಬೇಕು—ಎಂದರೆ ಮಾತ್ರ ಅನೇಕರು ಇನ್ನಿತರ ಉತ್ತಮ ಕೆಲಸಗಳಲ್ಲಿ ತಮ್ಮ ಶ್ರಮವನ್ನು ವೆಚ್ಚ ಮಾಡುವರು. ಇದುವೆ ಹೆಚ್ಚಿನ ಸಂಸ್ಕೃತಿಗೆ ಮುಖ್ಯ ಕಾರಣವಾಗುವದು. ಯುರೋಪದಲ್ಲಿ ಬಂಡವಲುಗಾರಿಕೆಯು ಬೆಳೆದಂತೆ ಈ ವ್ಯಾವಹಾರಿಕ ಒಕ್ಕಲುತನವೂ ಬೆಳೆಯತೊಡಗಿತು.

ಚೀನದಲ್ಲಿ ವಿಶೇಷವಾಗಿ ಪ್ರಚಾರದಲ್ಲಿದ್ದ ಒಕ್ಕಲುತನವು (ಗುದ್ದಲಿಯಿಂದ ನೆಲವನ್ನು ಅಗಿಯುವುದು) ವೈಯಕ್ತಿಕ ಕುಟುಂಬಗಳಿಗೆ ಆಹಾರವನ್ನೊದಗಿಸಿಕೊಡುವ ಧ್ಯೇಯವನ್ನು ಸಾಧಿಸುತ್ತಿತ್ತು. ಆದರೆ ವ್ಯಾವಹಾರಿಕ ಒಕ್ಕಲುತನವು ಬಂಡವಲುಗಾರರಿಂದ ಪೋಷಿಸಲ್ಪಟ್ಟು ವ್ಯಾಪಾರ ಲಾಭಗಳಿಗೆ ಎಡೆಯುಸ್ನುಂಟುಮಾಡಿಕೊಟ್ಟಿತು. ಯುರೋಪದಲ್ಲಿ ಮೊದ ಮೊದಲು ಒಕ್ಕಲುತನವು ವ್ಯಕ್ತಿಗಳ ಕೊರತೆಗಳನ್ನು ಪೂರೈಸುತ್ತಿತ್ತು. ಬರಬರುತ್ತ ಅದು ಬಂಡವಲುಗಾರರ ಕೈಸೇರಿ ಬಂಡವಲುಗಾರಿಕೆಯನ್ನೂ ವ್ಯಾಪಾರವನ್ನೂ ವೃದ್ಧಿಗೊಳಿಸಹತ್ತಿತು. ರೈತನ ಕೊರತೆಗಳು ಒಕ್ಕಲುತನವನ್ನು ನಿಯಂತ್ರಿಸುವ ಬದಲು ಪೇಟೆಯ ಸ್ಥಿತಿಗತಿಗಳೇ ಅದನ್ನು ನಿಯಂತ್ರಿಸತೊಡಗಿದವು.

ವ್ಯಾವಹಾರಿಕಒಕ್ಕಲುತನದ ಮತ್ತೊಂದು ವೈಶಿಷ್ಟ್ಯವೆಂದರೆ, ಒಕ್ಕಲುತನವು ಮಾನವನ ಶಾರೀರಕ ಶಕ್ತಿಯಿಂದ ನಡೆಯದೆ ಒಕ್ಕಲುತನಕ್ಕೆ ಬೇಕಾಗುವ ಅನೇಕ ಯಂತ್ರಸಾಮಗ್ರಿಗಳ ನಿರ್ಮಾಣವಾಯಿತು. ಶಾರೀರಕ ಶಕ್ತಿಯಿಂದ ಬೆಳೆಯು ಅಷ್ಟೊಂದು ವಿಪುಲವಾಗಿ ಬರುತ್ತಿರಲಿಲ್ಲ. ವ್ಯಾಪಾರವು ಬೆಳೆದಂತೆ ಭೂಮಿಯ ಬೆಳೆಯು ಹೆಚ್ಚಾಗಬೇಕಾಯಿತು. ಆದುದರಿಂದಲೇ ಯಂತ್ರಗಳು ನಿರ್ಮಿಸಲ್ಪಟ್ಟವು. ಯಂತ್ರಗಳು ಹೆಚ್ಚೆಚ್ಚು ಪರಿಪೂರ್ಣತೆಯನ್ನು ಪಡೆದಂತೆ ಮಾನವನ ಶ್ರಮವು ಕಡಿಮೆಯಾಗತೊಡಗಿತು. ಒಕ್ಕಲುತನವು ಬರಬರುತ್ತ ಮಾನವನ ಪರಿಶ್ರಮವನ್ನವಲಂಬಿಸದೆ ಯಂತ್ರಗಳನ್ನವಲಂಬಿಸಹತ್ತಿತು. ಯಂತ್ರಗಳು ಬಂಡವಲುಗಾರಿಕೆಯ ಕೈಗೊಂಬೆ. ಅಂತೂ ಒಕ್ಕಲುತನವು ಬಂಡವಲುಗಾರರ ಕೈಸೇರಿತು.

ಕೃತ್ರಿಮ ಗೊಬ್ಬರವನ್ನು ಕೂಡ ವ್ಯಾವಹಾರಿಕ ಒಕ್ಕಲುತನವು ಶಾಸ್ತ್ರೀಯ ವಿಷಯಗಳ ಜ್ಞಾನದಿಂದ ಉಂಟುಮಾಡಿಕೊಟ್ಟಿತು. ಇದರಿಂದ ಉಪಯುಕ್ತವಾದ ಅನೇಕ ಸಸ್ಯಾದಿಗಳನ್ನು ಅತ್ಯುತ್ತಮವಾಗಿ ಬೆಳೆಸಲು ಸಾಧ್ಯವಾಯಿತು. ಇಂಥ ಜ್ಞಾನದ ಮೂಲಕ ದನಕರು ಮುಂತಾದ ಪ್ರಾಣಿಗಳನ್ನು ಸುವ್ಯವಸ್ಥಿತವಾಗಿ ಸಾಕುವುದು ಸುಲಭವಾಯಿತು. ಈ ಪ್ರಕಾರವಾಗಿ ಚೀನರು, ಹಿಂದೀಯರು ಭೂಮಿಯನ್ನು ಸುಧಾರಿಸಿದರು. ಯುರೋಪ್ಯರು ಮಾನವನ ಪರಿಶ್ರಮದಿಂದ ಅತಿ ವಿಪುಲ ಬೆಳೆ ಬರುವಂತೆ ಅದನ್ನು

ಸರಿಪಡಿಸಿದರು. ವ್ಯಾವಹಾರಿಕ ಒಕ್ಕಲುತನವನ್ನು ಪ್ರೋತ್ಸಾಹಿಸುವ ದೇಶಗಳಲ್ಲೆಲ್ಲ ಪಟ್ಟಣಗಳು ಬೆಳೆದವು. ಹಳ್ಳಿಗಳಿಗಿಂತಲೂ ಉದ್ಯೋಗ ಕೇಂದ್ರ ಗಳಾದ ಪಟ್ಟಣಗಳಿಗೆ ಹೆಚ್ಚು ಮಹತ್ವ ಒದಗಿತು. ಸಮಶೀತೋಷ್ಣ ಹವೆ ಯುಳ್ಳ ದೇಶಗಳಲ್ಲಿ ಔದ್ಯೋಗಿಕ ಪ್ರಯತ್ನಗಳನ್ನು ಸುಲಭಸಾಧ್ಯವಾಗಿ ಮಾಡಬಹುದಾದುದರಿಂದ ಅಲ್ಲಿ ಉದ್ಯೋಗಗಳ ಬೆಳವಣಿಗೆ ಹೆಚ್ಚುವುದು ಸಹಜವಾಯಿತು. ವ್ಯಾವಹಾರಿಕ ಒಕ್ಕಲುತನವು ಜಗತ್ತಿನ ಎಲ್ಲ ದೇಶಗಳ ಭೂಮಿಯ ಹುಟ್ಟುವಳಿಯನ್ನು ಹೆಚ್ಚಿಸಿ, ಅದನ್ನು ಕೇಂದ್ರೀಕರಿಸಿ ಕಡಿಮೆ ಹುಟ್ಟುವಳಿಯುಳ್ಳ ಅನೇಕ ಬೇರೆಬೇರೆ ದೇಶಗಳಿಗೆ ಕಳುಹಿಸಲು ಅನುವುಮಾಡಿ ಕೊಟ್ಟಿತು. ಇದರಿಂದ ಅಂತರ ರಾಷ್ಟ್ರೀಯ ಶ್ರಮವಿಭಾಗಕ್ಕೂ, ಶ್ರಮನಿಯಂತ್ರಣೆಗೂ ಆಸ್ಪದ ದೊರೆಯಿತು. ಚೀನರ, ಹಿಂದೀಯರ ಆಹಾರವು ಕೇವಲ ಅವರೇ ಹುಟ್ಟಿಸಿ ಬೆಳೆಸಿದ ಅನೇಕ ವಸ್ತುಗಳನ್ನೊಳ ಗೊಂಡಿರುತ್ತದೆ. ಆದರೆ ಐರೋಪ್ಯರ ಊಟದ ಮೇಜನ್ನು ನೋಡಿದರೆ ಜಗತ್ತಿನ ವಿವಿಧ ಭಾಗಗಳಿಂದ ಬಂದ ವಿವಿಧ ಆಹಾರದ ಸಾಮಾನುಗಳಿಂದ ಅದು ತುಂಬಿರುತ್ತದೆ. ಭೂಜಲಮಾರ್ಗಗಳ ಸೌಕರ್ಯದ ಮೂಲಕ ಜಗ ತ್ತಿನ ಬೇರೆ ಬೇರೆ ಭಾಗಗಳ ಬೇರೆ ಬೇರೆ ವ್ಯಕ್ತಿಗಳು ನಿರ್ಮಿಸಿದ ಅನೇಕ ವಸ್ತುಗಳ ಉಪಯೋಗವು ಅವುಗಳನ್ನು ನಿರ್ಮಿಸಲಾರದವರಿಗೂ ಆಗುತ್ತದೆ. ಬರಗಾಲವೆಂಬ ಭೂತದ ಉಪಟಳವು ಹಿಂದಿನ ಕಾಲದಲ್ಲಿದ್ದಷ್ಟು ಈಗಿರು ವುದು ಸಾಧ್ಯವಿಲ್ಲ. ಆದುದರಿಂದ ಒಕ್ಕಲುತನವೂ, ಯಂತ್ರಗಳೂ ಒಟ್ಟಾರೆ ಮಾನವನನ್ನು ಸಂಸ್ಕೃತಿಯ ಉನ್ನತ ಶಿಖರಕ್ಕೆ ಒಯ್ಯಬಹುದು. ಯಂತ್ರ ಗಳನ್ನು ಅತಿಯಾಗಿ ಅವಲಂಬಿಸುವುದರಿಂದಲೂ, ಅವುಗಳ ದುರುಪಯೋಗ ದಿಂದಲೂ ಮಾನವನು ಅಧೋಗತಿಗಿಳಿಯುವುದೂ ಸಾಧ್ಯವಿದೆ.

**೧ ಬೇಟೆಯಾಡುವ ಕಾಲವೂ, ಸಮಾಜಶಾಸ್ತ್ರಕ್ಕೆ ಅದರ ಮಹ ತ್ವವೂ:** ಬೇಟೆಯಾಡುವುದೂ, ಮೀನ ಹಿಡಿಯುವುದೂ ಆಹಾರವನ್ನು ಸ್ವಾಭಾವಿಕವಾಗಿ ದೊರಕಿಸಿಕೊಡುತ್ತವೆ. ದನಕರುಗಳನ್ನು ಸಾಕುವುದ ರಿಂದಲೂ, ಒಕ್ಕಲುತನದಿಂದಲೂ ಆಹಾರಸಾಮಗ್ರಿಯನ್ನು ಕೃತ್ರಿಮ ರೀತಿ ಯಿಂದ ಪಡೆಯಬಹುದು. ಆದುದರಿಂದ ಬೇಟೆಯಾಡುವುದೂ ಮೀನ ಹಿಡಿ ಯುವುದೂ ಸಂಸ್ಕೃತಿಯ ತೀರ ಕೆಳಗಿನ ಮೆಟ್ಟಲುಗಳನ್ನು ವ್ಯಕ್ತಗೊಳಿಸು

ತ್ತವೆ. ದನಗಾರರೂ, ಒಕ್ಕಲುತನಮಾಡುವವರೂ ಅತಿ ಪೂರ್ವದಲ್ಲಿ ಬೇಟೆಗಾರರೇ ಆಗಿದ್ದರೋ ಎಂಬುದನ್ನರಿಯುವದು ಬಹು ದುಸ್ತರ. ಬೇಟೆಗಾರರು ನಮ್ಮ ಪೂರ್ವಜರಾಗಿದ್ದರೋ, ಇಡೀ ಜಗತ್ತಿನ ಜನಾಂಗಗಳ ಮೂಲಭೂತ ಪುರುಷರಾಗಿದ್ದರೋ ಅಥವಾ ಕೇವಲ ಒಂದು ಉಪಾಂಗವಾಗಿದ್ದರೋ ಎಂಬುದನ್ನರಿತುಕೊಳ್ಳಬೇಕಾಗಿದೆ.

ಕೆಳಗಿನ ಕಾರಣಗಳ ಮೂಲಕ ಬೇಟೆಯಾಡುವ ಸ್ಥಿತಿಗೆ ವಿಶಾಲವಾದ ಮಹತ್ವವನ್ನು ಕೊಡಬೇಕಾಗಿದೆ.

೧. ಪೃಥ್ವಿಯ ಅನೇಕ ಭಾಗಗಳಲ್ಲಿ ಪ್ರಾಗೈತಿಹಾಸಿಕ ಕಾಲದ ಅನೇಕ ಆಯುಧಗಳೂ ಉಪಕರಣಗಳೂ ಎಲುವುಗಳೂ ದೊರೆಯುತ್ತವೆ. ಈ ಎಲುವುಗಳು ಅರ್ಧಮರ್ಧ ಸುಟ್ಟಂತಹವೂ, ಒಡೆದಂತಹವೂ, ಮನುಷ್ಯನ ಹಲ್ಲುಗಳಿಂದ ಕಡಿಯಲ್ಪಟ್ಟಂತಹವೂ ಇರುತ್ತವೆ. ಪೂರ್ವದಲ್ಲಿ ಮಾನವನು ಎಲ್ಲೆಡೆಗಳಲ್ಲಿ ಬೇಟೆಗಾರನಾಗಿದ್ದನೆಂಬುದಕ್ಕೆ ಇದೇ ಸಾಕ್ಷಿ.

೨. ಜಗತ್ತಿನ ಯಾವ ಭಾಗದಲ್ಲಿಯೂ ಮಾನವನು ಮಾಂಸಾಹಾರವನ್ನು ಸಂಪೂರ್ಣವಾಗಿ ಬಿಟ್ಟುಕೊಟ್ಟಿಲ್ಲ ಹಿಂದೀಯರು, ಪೆರೂವಿಯನ್‌ರು, ಮೇಕ್ಸಿಕೋದವರು, ಚೀನ ಜಪಾನರು ವಿಶೇಷವಾಗಿ ಮಾಂಸವನ್ನಪೇಕ್ಷಿಸುವುದಿಲ್ಲ. ಅವರು ಒಕ್ಕಲುತನದ ಮೂಲಕ ಶಾಕಾಹಾರಿಗಳಾಗಿದ್ದಾರೆ. ಹಿಂದೀಯರು ಧಾರ್ಮಿಕ ಕಾರಣಗಳಿಗಾಗಿ ಮಾಂಸವನ್ನು ಭಕ್ಷಿಸುವುದಿಲ್ಲ. ಇಂಡೋ ಆರ್ಯನ್ ಗುಂಪಿಗೆ ಸೇರಿದ ತಮ್ಮ ಇನ್ನಿತರ ಬಂಧುಗಳಂತೆ ಇವರು ದನಗಾರರ ವಂಶದಿಂದಿಳಿದು ಬಂದಿರಬಹುದು. ಬೇಟೆಗಾರನಾಗಿದ್ದ ಮಾನವನೇ ಒರಬರುತ್ತ ದನಗಾರನಾದನು. ದನಕರುಗಳನ್ನು ಮೊದಲು ಮಾಂಸಕ್ಕಾಗಿ ಸಾಕುತ್ತಿದ್ದರಲ್ಲದೆ ಕೇವಲ ಹಾಲುಹೈನ ಮುಂತಾದ ಆಹಾರ ಪದಾರ್ಥಗಳಿಗಾಗಿ ಅಲ್ಲ. ನಮಗೆ ಗೊತ್ತಿದ್ದ ಎಲ್ಲ ದನಗಾರರು ಆಹಾರ ಸಂಪಾದನೆಗಾಗಿ ಬೇಟೆಯಾಡುತ್ತಾರೆ. ಚೀನರೂ, ಜಪಾನರೂ ತಮ್ಮ ತೋಟಪಟ್ಟಿಗಳ ಹುಟ್ಟುವಳಿ ವಿಶೇಷವಾಗಿರುವುದರಿಂದ ಶಾಕಾಹಾರದಿಂದ ಉಪಜೀವಿಸುತ್ತಿದ್ದರೂ ಮಾಂಸಾಹಾರದಲ್ಲಿ ಒಂದು ವಿಶೇಷವಾದ ಮಾಧುರ್ಯವಿರುತ್ತದೆಂದು ಭಾವಿಸುತ್ತಾರೆ.

೩. ಮತ್ತೊಂದು ಸಾಕ್ಷಿಯೆಂದರೆ ಮಾನವನ ರಚನೆ—ಅವನ ಹಲ್ಲ

ಗಳು. ಅವನ ಸ್ವಭಾವದಲ್ಲಿ ಕಾಡುಮೃಗಗಳ ಕ್ರೂರತನವೂ ಶಾಕಾಹಾರಿ ಮೃಗಗಳ ದೃಢಮನಸ್ಸೂ ಸಂಮಿಶ್ರವಾಗಿರುವಂತೆ ಅವನ ಹಲ್ಲುಗಳಲ್ಲಿ ಮೇಲ್ತರಗತಿಯ ಮಂಗಗಳ ಹಲ್ಲಿನಂತೆ ಕ್ರೂರಮೃಗಗಳ ಮತ್ತು ಶಾಕಾ-ಹಾರಿ ಪ್ರಾಣಿಗಳ ಹಲ್ಲುಗಳ ಲಕ್ಷಣಗಳು ಕೂಡಿರುತ್ತವೆ.

೪. ಚಿಕ್ಕ ಮಗುಗಳ ಆಟಗಳಲ್ಲಿ ಬೇಟೆಯಾಡುವ, ಯುದ್ಧಮಾಡುವ ರೀತಿಗಳು ಪ್ರಕಟವಾಗುತ್ತವೆ. ಒಡಿದಾಡುವದು, ಹರಿದಾಡುವ ಪ್ರಾಣಿಗಳನ್ನು ಬೆನ್ನಟ್ಟುವದು ಮಗುಗಳಿಗೆ ಬಹು ಪ್ರಿಯಕರವಾದ ಆಟಗಳು. ಸಾವಿರಾರು ವರುಷಗಳ ಹಿಂದಿದ್ದ ಮಾನವನ ಬೇಟೆಯಾಡುವ ಪ್ರವೃತ್ತಿಯು ಈಗಲೂ ಪ್ರೌಢ ಮನುಷ್ಯರ ಅನೇಕ ಕೃತಿಗಳಲ್ಲಿ ಅನೇಕ ವಿಧದಿಂದ ತಲೆ-ದೋರುತ್ತದೆ.

ಆಯುಧೋಪಕರಣಗಳನ್ನು ಮಾಡಿಕೊಂಡು ಮಾನವನು ಕ್ರೂರ ಪ್ರಾಣಿಯಿಂದ ಬೇಟೆಗಾರ, ಯೋಧನೆಂಬ ರೂಪಾಂತರವನ್ನು ಹೊಂದಿದನು. ಆದರೆ ಜಗತ್ತಿನ ಇತಿಹಾಸವು— ಈ ಹೊತ್ತಿನ ದೊಡ್ಡ ದೊಡ್ಡ ಸುಧಾರಿಸಿದ ಪಟ್ಟಣಗಳಲ್ಲಿ ಕಂಡುಬರುವ ಕೊಲೆಗೃಹಗಳ ( Slaughter houses ) ದೃಷ್ಟಾಂತದಿಂದ—ರಕ್ತಲಿಖಿತವಾಗಿರುತ್ತದೆ. ಮತ್ತು ಮಾನವನ ಕಾಡು ಮೃಗಗಳಂತಹ ಕ್ರೂರತನವು ಇನ್ನೂ ಸಂಪೂರ್ಣವಾಗಿ ಸಮಾಪ್ತಿಯನ್ನು ಹೊಂದಿಲ್ಲ ಎಂಬುದಕ್ಕೆ ಸಾಕ್ಷಿಯಾಗಿದೆ.

ಭಾಷಾಶಾಸ್ತ್ರದಿಂದಲೂ ಇದೇ ಮಾತು ಸಿದ್ಧವಾಗುತ್ತದೆ. ಮಾನವನು ಮಾನವನಾದಾಗಿನಿಂದಲೂ ಮಾಂಸಾಹಾರಿಯಾಗಿದ್ದಾನೆಂಬ ಮಾತನ್ನು ಭಾಷಾಶಾಸ್ತ್ರವು ಪ್ರಮಾಣಪೂರ್ವಕವಾಗಿ ಹೇಳಬಲ್ಲದು. ' ಮಾಂಸ ' ' ಪ್ರಾಣಿ ' ಎಂಬ ಶಬ್ದಗಳಿಂದ ದ್ಯೋತಕವಾಗುವ ಅರ್ಥವು ' ಆಹಾರ ' ಎಂಬ ಅರ್ಥವನ್ನು ಸೂಚಿಸುತ್ತದೆ. ಮಧ್ಯ ಆಫ್ರಿಕೆಯಲ್ಲಿ ಆಹಾರಕ್ಕೆ ' ಥಾ ' ( Tha ) ಎಂಬ ಶಬ್ದ. ' ಥು ' ಎಂದರೆ ಮಾಂಸ ' ಥಾ ' ಎಂದರೆ ದನಕರುಗಳು. ಆಫ್ರಿಕೆಯ ಕೆಲವೊಂದು ತಂಡಗಳಲ್ಲಿ ' ಪಶು' ಮತ್ತು ' ಮಾಂಸ ' ಎಂಬುದಕ್ಕೆ ಒಂದೇ ಶಬ್ದವುಂಟು. ಮೀನಕ್ಕೆ ' ನೀರ ಮಾಂಸ ' ಎಂದು ಹೇಳುತ್ತಾರೆ.

ಪ್ರಾಣಿಜೀವನದಿಂದ ಮನುಷ್ಯಜೀವನಕ್ಕೆ ರೂಪಾಂತರವನ್ನು ಹೊಂದು

ವಾಗ, ಬೇಟೆಗಾರಿಕೆ (ಸಂಸ್ಕೃತಿಯ) ಒಂದು ಅವಸ್ಥೆ ಎಂಬ ಮಾತೂ, ಇದರೊಳಗಿಂದ ಮಾನವನು ಹಾಯ್ದು ಬಂದಿದ್ದಾನೆಂಬುದೂ ಮೇಲ್ಕಂಡ ಮಾತುಗಳಿಂದ ಸಿದ್ಧವಾಗುತ್ತದೆ.

**ದನಗಾರಿಕೆಯ** (Cattle-rearing) **ಮಹತ್ವ** : ಸಂಸ್ಕೃತಿಯ ಬೆಳೆವಣಿಗೆಯಲ್ಲಿ ದನಗಾರಿಕೆಗೆ ಯಾವ ಸ್ಥಾನವನ್ನೀಯಬೇಕೆಂಬುದನ್ನು ನಿಶ್ಚಯಿಸುವುದು ಸುಲಭವಲ್ಲ. ದನಗಾರಿಕೆಯು ಒಕ್ಕಲುತನಕ್ಕಿಂತಲೂ ಪೂರ್ವದಲ್ಲಿ ಅವಶ್ಯವಾಗಿ ಇರಬೇಕೆಂದು ಹೇಳುವದು ಸಮಂಜಸವಲ್ಲ. ಬೇಟೆಗಾರಿಕೆಯಿಂದ ಮಾನವನು ದನಗಾರಿಕೆಯನ್ನು ಅಥವಾ ಒಕ್ಕಲುತನವನ್ನು ಸ್ವೀಕರಿಸುವುದು ಅಲ್ಲಲ್ಲಿಯ ನಿಸರ್ಗಸಿದ್ಧ ಮಳೆಬೆಳೆಗಳನ್ನೂ, ವನಜಲಗಳ ಸ್ಥಿತಿಗತಿಗಳನ್ನೂ ಅವಲಂಬಿಸಿರುತ್ತದೆ.

ಅಮೇರಿಕೆಯಲ್ಲಿ ಬೇಟೆಯಾಡಲು ಯೋಗ್ಯವಾದ ಕೋಣ, ಚಿಗರಿ, ರೇನಡಿಯರ ಮೊದಲಾದ ಅನೇಕ ಪ್ರಾಣಿಗಳಿದ್ದವು. ಆದರೆ ಇವುಗಳಲ್ಲಿ ಯಾವನ್ನೂ ಸಾಕಲು ಸಾಧ್ಯವಿದ್ದಿಲ್ಲ. ತದ್ವಿರುದ್ಧವಾಗಿ ಭೂಮಿಯಿಂದ ಬೆಳೆಯನ್ನು ಬೆಳೆದುಕೊಳ್ಳುವ ಸೌಕರ್ಯಗಳನೇಕವಾಗಿದ್ದವು. ಆದುದರಿಂದ ಅಲ್ಲಿಯ ಇಂಡಿಯನ್‌ರು ದನಗಾರಿಕೆಯ ಅವಸ್ಥೆಯೊಳಗಿಂದ ಹಾಯದೆ ಒಕ್ಕಲುತನವನ್ನೇ ಪ್ರಾರಂಭಿಸಿದರು. ಅಮೇರಿಕೆಯನ್ನು ಕಂಡು ಹಿಡಿದಾಗ ದನಗಾರರ ಒಂದು ತಂಡವಾದರೂ ಕಂಡುಬರಲಿಲ್ಲ. ಪೆರೂವಿಯನ್‌ರು ಮಾತ್ರ ಲಾಮಾ ಎಂಬ ಪ್ರಾಣಿಯನ್ನು ಸಾಕುತ್ತಿದ್ದರು. ಅದೂ ಕೂಡ ಭಾರವನ್ನು ಹೊರುವುದಕ್ಕಾಗಿ. ಆದುದರಿಂದ ಅಮೇರಿಕೆಯ ಸಂಸ್ಕೃತಿಯಲ್ಲಿ ದನಗಾರಿಕೆ ಒಂದು ಮೆಟ್ಟಲಾಗಿದ್ದಂತೆ ಕಂಡುಬರುವುದಿಲ್ಲ.

ಅಮೇರಿಕೆಯನ್ನುಳಿದು ಜಗತ್ತಿನ ಇನ್ನಿತರ ಭಾಗಗಳಲ್ಲಿ ಸಂಸ್ಕೃತಿಯ ಬೆಳೆವಣಿಗೆಯು ಬೇರೆ ವಿಧವಾಗಿದ್ದಿತು. ಅಲ್ಲಿ ಬೆಳೆಸಲು ದುಸ್ತರವಾದ ಅನೇಕ ಸಸ್ಯಾದಿಗಳು ಕಂಡುಬಂದರೂ ಸಾಕಲು ಸುಲಭಸಾಧ್ಯವಾದ ವಿಧವಿಧವಾದ ಪ್ರಾಣಿಗಳು ದೊರಕುತ್ತಿದ್ದವು. ಕುದುರೆ, ಎತ್ತು, ಕುರಿ, ಆಡು ಇವೇ ಮುಖ್ಯವಾದವುಗಳು. ಆದುದರಿಂದ ಅಲ್ಲಿಯ ಜನರು ದನಗಾರರಾದರು ಮತ್ತು ಮುಂದೆ ಕ್ರಮೇಣ ಒಕ್ಕಲುತನವನ್ನು ಕೈಕೊಂಡರು. ಆರ್ಯ

ರಂತಹ ಅತ್ಯುನ್ನತಿಗೇರಿದ ಜನರ ವಿಷಯದಲ್ಲಿಯೂ ಇದೇ ಸಾಧಾರಣ ನಿಯಮವು ಕಂಡುಬರುತ್ತದೆ. ಆದುದರಿಂದ ಮಾನವನು ಒಕ್ಕಲುತನವನ್ನು ಕೈಕೊಳ್ಳುವದಕ್ಕಿಂತ ಮೊದಲು ದನಸಾಕುವ ಕೆಲಸವನ್ನು ಎಲ್ಲ ಕಡೆಯಲ್ಲಿಯೂ ಅವಶ್ಯವಾಗಿ ಕೈಕೊಂಡಿದ್ದನೆಂಬುದು ಸ್ಪಷ್ಟವಾಗುವುದಿಲ್ಲ. ಆಧುನಿಕ ಸಂಶೋಧಕರು ಬೇರೊಂದು ವಿಧವಾಗಿ ಭಾವಿಸುತ್ತಾರೆ. ಒಕ್ಕಲುತನದಿಂದಲೇ ದನಗಾರಿಕೆಯು ರೂಢಿಯಲ್ಲಿ ಬಂದಿತೆಂದು ಅವರ ಸಿದ್ಧಾಂತ. ಈ ಸಿದ್ಧಾಂತವನ್ನು ಪುಷ್ಟೀಕರಿಸಲು ಅನೇಕ ಸಂಗತಿಗಳಿದ್ದರೂ, ಅದನ್ನು ಕಾರಣಾಂತರಗಳಿಂದ ಬಲಗೆಡಿಸಬಹುದು.

**ಒಕ್ಕಲುತನದ ಬೇರೆ ಬೇರೆ ಅವಸ್ಥೆಗಳು :** ಒಕ್ಕಲುತನವು ಮೊದಲು ಕೇವಲ ಗುದ್ದಲಿಯಿಂದ ಮಾಡಲ್ಪಡುತ್ತಿತ್ತು. ರಂಟೆಗಳು ಬರಬರುತ್ತ ಉಪಯೋಗಿಸಲ್ಪಡಹತ್ತಿದವು. 'ಆಸ್ವಾಲ್ಡಹೀರ'ನು ಹೇಳುವಂತೆ ಜೋಳ, ಗೋವಿನಜೋಳ, ಸಜ್ಜೆ ಮುಂತಾದ ಕಾಳುಗಳನ್ನು ಬೆಳೆಸುವದು ಮೊದಲು ರೂಢಿಯಲ್ಲಿ ಬಂದಿರಬೇಕು. ಆ ಮೇಲೆ ಜವೆಗೋದಿ, ನಂತರ ಗೋದಿ, ರಾಯ್ ಮುಂತಾದವು ಬೆಳೆಸಲ್ಪಟ್ಟಿರಬಹುದು. ಆಧುನಿಕ ಯುಗದಲ್ಲಿ ರಂಟೆಯ ಒಕ್ಕಲುತನದಿಂದ ವ್ಯಾವಹಾರಿಕ (ಯಾಂತ್ರಿಕ) ಒಕ್ಕಲುತನವು ರೂಢಿಯಲ್ಲಿ ಬಂದಿದೆ. ದನಗಾರರಲ್ಲಿಯೇ ವ್ಯಾವಹಾರಿಕ ಒಕ್ಕಲುತನಕ್ಕೆ ಅವಶ್ಯವಾದ ಬಂಡವಲುಗಾರಿಕೆಯೂ ಅದನ್ನು ಸಂಘಟಿಸುವ ವಿಚಾರವೂ ಉಂಟಾಯಿತೆಂಬುದನ್ನು ನಾವು ಮುಂದೆ ನೋಡಬಹುದು.

ಮಾನವನ ಆಹಾರ ಸಂಪಾದನೆಯ ಕೆಲಸದಲ್ಲಿ ಬೇಟೆಯಾಡುವದೇ ತೀರ ಮೊದಲಿನ ಹೆಜ್ಜೆ ಎಂಬಂತೆ ತೋರುತ್ತದೆ. ಬರಬರುತ್ತ ಈ ಅವನ ಬೇಟೆಯಾಡುವ ಪ್ರವೃತ್ತಿ ಯೋಗ್ಯ ಸೌಕರ್ಯಗಳಿದ್ದ ಎಡೆಗಳಲ್ಲಿ ಮೀನ ಹಿಡಿಯುವುದರಲ್ಲಿ ಪರಿಣಮಿಸಹತ್ತಿತು. ಕೆಲವೊಂದು ಜನಾಂಗಗಳು ಮೀನ ಹಿಡಿಯುವುದನ್ನೂ ಒಕ್ಕಲುತನವನ್ನೂ ಎರಡನ್ನೂ ಸಾಗಿಸುತ್ತಿದ್ದರು. ಹಿಂದೀ ಮಹಾಸಾಗರದ ಮತ್ತು ಶಾಂತಿಸಾಗರದ ನಡುಗಡ್ಡೆಗಳ ನಿವಾಸಿಗಳೇ ಇವರಲ್ಲಿ ಮುಖ್ಯರಾಗಿದ್ದರು. ಈ ನಿವಾಸಿಗಳು ಮಡಗಾಸ್ಕರದಿಂದ ಈಸ್ಟರ ನಡುಗಡ್ಡೆಯ ವರೆಗೆ ಹಬ್ಬಿದ್ದರು. ಕ್ರಮೇಣ ಇವರಲ್ಲಿ ಕೆಲವರು ಕೇವಲ ದನಗಾರಿಕೆಯನ್ನು ಅಥವಾ ಒಕ್ಕಲುತನವನ್ನು ಅವಲಂಬಿಸಹತ್ತಿದರು. ಜಗತ್ತಿನ

ಉಳಿದ ಭಾಗಗಳಂತೆ ಇಲ್ಲಿಯೂ ಅನೇಕ ಮಾರ್ಪಾಟುಗಳಾಗಿ ವ್ಯಾವಹಾರಿಕ ಒಕ್ಕಲುತನವು ಈಗ ರೂಢಿಯಲ್ಲಿ ಬಂದಿದೆ. ಆಹಾರ ಸಾಮುಗ್ರಿಗಳ ಬೆಳೆವಣಿಗೆಯನ್ನು ಕೆಳಗಿನ ಆಕೃತಿಯಿಂದ ಸಂಕ್ಷೇಪವಾಗಿಅರಿತುಕೊಳ್ಳಬಹುದು.




**ಮಾನವನ ಸುಧಾರಣೆಯ ಬೇರೆ ಬೇರೆ ಅವಸ್ಥೆಗಳು:** ಮಾನವನ ಸುಧಾರಣೆಯ ಬೇರೆ ಬೇರೆ ಅವಸ್ಥೆಗಳನ್ನರಿತುಕೊಳ್ಳುವದು ಸಮಾಜಶಾಸ್ತ್ರದಲ್ಲಿ ಅತಿ ಮಹತ್ವದ ವಿಷಯವು. ಇದಕ್ಕಾಗಿ ಮಾನವರನ್ನು ಮೂರು ವಿಧವಾಗಿ ವಿಭಾಗಿಸುವುದುಂಟು—೧. ಕ್ರೂರ ಜನರು ೨. ಕಾಡು ಜನರು ೩. ಸುಧಾರಿಸಿದವರು. ಕ್ರೂರ ಜನರಲ್ಲಿ ಬೇಟೆಗಾರರು ಮೀನಗಾರರು ಬರುತ್ತಾರೆ. ಕಾಡುಜನರೆಂದರೆ ದನಗಾರರು ಮತ್ತು ಗುದ್ದಲಿಯಿಂದ ಒಕ್ಕಲುತನ ಮಾಡುವವರು. ಸುಧಾರಿಸಿದವರೆಂದರೆ ರಂಟೆಹೊಡೆಯುವವರು ತೋಟಪಟ್ಟಿ ವ್ಯಾಪಾರಗಳನ್ನು ಮಾಡುವವರು. ಮೊದಲನೆಯ ಸ್ಥಿತಿಯಲ್ಲಿ ಮಾನ

ವನು ಕೇವಲ ಪಶುಗಳಂತೆ ಸೃಷ್ಟಿಯು ಪೂರೈಸುವ ಆಹಾರದ ಸಹಾಯದಿಂದ ಉಪಜೀವಿಸುತ್ತಾನೆ. ಭವಿಷ್ಯದ ಆಗುಹೋಗುಗಳ ವಿಷಯವಾಗಿ ಅವನು ವಿಚಾರಿಸುವದಿಲ್ಲ. ಮಾನವನು ಕೃತ್ರಿಮ ಆಹಾರವನ್ನು ನಿರ್ಮಿಸುವದನ್ನರಿತ ಕೂಡಲೇ ಎರಡನೆಯ ಅವಸ್ಥೆ (ಕಾಡುಸ್ಥಿತಿ) ಸುರುವಾಗುವದು. ದನಕರುಗಳನ್ನು ಸಾಕುವದೂ ಗುದ್ದಲಿಯಿಂದ ಒಕ್ಕಲುತನ ಮಾಡುವುದೂ ರೂಢಿಯಲ್ಲಿ ಬರುತ್ತವೆ. ಮೂರನೆಯ ಅವಸ್ಥೆಯಲ್ಲಿ (ಸುಧಾರಿಸಿದ ಸ್ಥಿತಿ) ಆಹಾರದ ವಸ್ತುಗಳಲ್ಲಿ ಅಥವಾ ಅವುಗಳನ್ನು ಬೆಳೆಸುವುದರಲ್ಲಿ ಯಾವ ಹೆಚ್ಚು ಕಡಿಮೆಯೂ ಆಗುವದಿಲ್ಲ. ಆದರೆ ಅಲ್ಪ ಶ್ರಮದಿಂದ ವಿಪುಲ ಆಹಾರ ಸಾಮಗ್ರಿಯನ್ನು ಬೆಳೆಸುವದು ಸಾಧ್ಯವಾಗುತ್ತದೆ. ಇಷ್ಟಕ್ಕೆ ಸುಧಾರಣೆಯ ಕಲ್ಪನೆ ಮುಗಿದಂತಿಲ್ಲ. ಸುಧಾರಿಸಿದ ಸ್ಥಿತಿಯೆಂದರೆ ನಿಜವಾಗಿಯೂ ಶ್ರಮವಿಭಾಗ, ಉದ್ಯೋಗ-ಧಂದೆಗಳ ಬೆಳೆವಣಿಗೆ ಎಂಬ ಅರ್ಥ.

—

ಐದನೆಯ ಮೆಟ್ಟಿಲು

## ಉಪಕರಣಗಳ ಬೆಳೆವಣಿಗೆ



ಉಪಕರಣಗಳ ಬೆಳೆವಣಿಗೆಯಲ್ಲಿ ನಾಲ್ಕು ಯುಗಗಳನ್ನು ಕಲ್ಪಿಸಬಹುದು.

೧. ಕಲ್ಲಿನಯುಗ ( Stone-age ). ಇದರಲ್ಲಿ ಹಳೆಯ (Palaeolithic) ಯುಗವೆಂದೂ, ಹೊಸ ( Neolithic) ಯುಗವೆಂದೂ ಎರಡು ಭಾಗಗಳು.

೨. ತಾಮ್ರ ಮತ್ತು ಕಂಚಿನ ಯುಗ.

೩. ಕಬ್ಬಿಣದ ಯುಗ.

೪. ಯಾಂತ್ರಿಕ ಯುಗ.

ಆಹಾರದ ತರುವಾಯ ಉಪಕರಣವು ಸಂಸ್ಕೃತಿಯ ಬೆಳೆವಣಿಗೆಯನ್ನು ನಿರ್ಧರಿಸಲು ಉಪಯುಕ್ತವಾದ ವಿಷಯ. ಆಹಾರದ ವಿಭಾಗ

ಗಳನ್ನು ಅವಸ್ಥೆಗಳೆಂದೂ, ಉಪಕರಣಗಳ ವಿಭಾಗಗಳನ್ನು ಯುಗಗಳೆಂದೂ ಕರೆದಿದ್ದೇವೆ. ಒಂದಕ್ಕೆ 'ಮಾನವವಂಶ ಶಾಸ' ವೆಂದೂ (Ethnology) ಮತ್ತೊಂದಕ್ಕೆ 'ಪ್ರಾಚೀನ ವಸ್ತುಶಾಸ್ತ್ರ' ವೆಂದೂ (Archaeology) ಹೇಳುವದುಂಟು.

ಉಪಕರಣಗಳ ಇತಿಹಾಸಪೂರ್ವದ ಬೆಳೆವಣಿಗೆಯನ್ನರಿತುಕೊಳ್ಳಲು ನಾವು ಕೇವಲ 'ಪ್ರಾಚೀನ ವಸ್ತುಶಾಸ್ತ್ರ' ವನ್ನವಲಂಬಿಸಬೇಕಾಗಿಲ್ಲ. ಇವತ್ತಿಗೂ ಜೀವಿಸುತ್ತಿರುವ ಅನೇಕ ಜನರ ಬಳಿ ಬೇರೆ ಬೇರೆ ಯುಗಗಳಿಗೆ ಸಂಬಂಧಪಟ್ಟ ಅನೇಕ ಉಪಕರಣಗಳು ದೊರೆಯುತ್ತವೆ. ಹೀಗೆ ದೊರಕುವ ವಸ್ತುಗಳ ವೈಪುಲ್ಯದಿಂದಲೂ ನಾವು 'ಪ್ರಾಚೀನ ವಸ್ತುಶಾಸ್ತ್ರ' ವನ್ನು ವಿಶೇಷ ಅವಲಂಬಿಸದೆ ಅನೇಕ ಮಾತುಗಳನ್ನು ಕಂಡುಹಿಡಿಯಬಹುದು.

ಪೃಥ್ವಿಯ ಎಲ್ಲ ಜನಾಂಗಗಳು ಮೊನ್ನೆಮೊನ್ನಿನ ವರೆಗೆ ಜೀವಂತವಾಗಿದ್ದು ಯುರೋಪ್ಯರ ಸಂಪರ್ಕದಲ್ಲಿ ಒಂದಿಲ್ಲೊಂದು ವಿಧವಾಗಿ ಬಂದಿವೆ. ಇದರಿಂದಲೂ ಮಾನವನ ಉಪಕರಣಗಳ ಬಗ್ಗೆ ನಾವು ಎಷ್ಟೋ ಮಾತುಗಳನ್ನು ತಿಳಿದುಕೊಳ್ಳಬಹುದಾಗಿದೆ.

ಎಲ್ಲೆಡೆಗಳಲ್ಲಿಯೂ ನಾವು ಈ ಎಲ್ಲ ಯುಗಗಗಳು ಒಂದೇ ಕ್ರಮದಿಂದ ಅಸ್ತಿತ್ವದಲ್ಲಿ ಬಂದುದನ್ನು ಕಾಣಲಾರೆವು. ಜಗತ್ತಿನ ಹಳೆಯ ಭಾಗಗಳಾದ ಏಸಿಯಾ, ಯುರೋಪ, ಆಫ್ರಿಕಾಖಂಡಗಳಲ್ಲಿ ಕಬ್ಬಿಣಯುಗವು ಸುರುವಾದಾಗ, ಹೊಸ ಭಾಗಗಳಾದ ಅಮೇರಿಕಾ, ಆಸ್ಟ್ರೇಲಿಯ, ಓಸಿಯಾಸಿಯಾ ಮುಂತಾದ ಪ್ರದೇಶಗಳಲ್ಲ ಕಬ್ಬಿಣದ ವಿಷಯವಲ್ಲಷ್ಟೇ ಅಲ್ಲದೆ ಇನ್ನುಳಿದ ಯಾವ ಧಾತುಗಳ ವಿಷಯವಾಗಿಯೂ ಅಲ್ಲಿಯ ಜನರು ಸಂಪೂರ್ಣ ಅಜ್ಞಾನಿಗಳಾಗಿದ್ದರು. ಇದಕ್ಕೆ ಅಪವಾದವೆಂದರೆ ಪೇರು ಮತ್ತು ಮೆಕ್ಸಿಕೊಗಳಲ್ಲಿಯ ಪುರಾತನ ನಾಗರಿಕತೆಯು. ಅವುಗಳಿಗೆ ಸಂಬಂಧಪಟ್ಟವರು ಕೂಡ ಕಂಚನ್ನು ಅರಿತಿದ್ದರಲ್ಲದೆ ಕಬ್ಬಿಣವನ್ನಲ್ಲ.

## ಮಾನವ ವಂಶಶಾಸ್ತ್ರ ಮತ್ತು ಇತಿಹಾಸದಿಂದ ಊಹಿಸಬಹುದಾದ ಮಾತುಗಳು

**೧. ಕಲ್ಲಿನ ಯುಗ—(ಅ) ಹಳೆಯ** (Palaeolithic) ಕಾಲ

ಈ ಯುಗದ ವೈಶಿಷ್ಟ್ಯವೆಂದರೆ ಉಪಕರಣ ಆಯುಧಗಳಿಗೆ ಬೇಕಾ

ಗುವ ವಸ್ತುವನ್ನು (ಕಲ್ಲನ್ನು) ಪ್ರತ್ಯಕ್ಷವಾಗಿ ಪ್ರಕೃತಿಯಿಂದ ತೆಗೆದು ಕೊಂಡಿದ್ದಾರೆ. ಸಂಸ್ಕೃತಿಯು ಕೆಳಗಿನ ಮೆಟ್ಟಲಿನ ಮೇಲಿದ್ದಾಗ ಮಾನವನು ಆಹಾರವನ್ನು ಕೂಡ ಹಾಗೆಯೇ ಪ್ರಕೃತಿಯಿಂದಲೇ ಪಡೆಯುತ್ತಿದ್ದನೆಂಬ ಮಾತನ್ನು ಈಗಾಗಲೇ ನೋಡಿದ್ದೇವೆ. ಇಂತಹ ಉಪಕರಣಗಳಿಗೆ ಉಪ ಯೋಗಿಸಿದ ವಸ್ತುಗಳೆಂದರೆ:

೧. ಕಲ್ಲು.

೨. ಕಟ್ಟಿಗೆ—ಮರದ ಬೊಡ್ಡೆಗಳು, ತೊಗಟೆ, ಟೊಂಗೆ ಮುಂತಾದವು.

೩. ಪ್ರಾಣಿಗಳ ಮೈದೊಗಲು, ಎಲುವು, ಉಗುರುಗಳು, ಹಲ್ಲುಗಳು, ಕರುಳು ಗಳು, ಕೋಡುಗಳು, ಸಿಂಪುಗಳು ಮುಂತಾದವು.

ಕಲ್ಲಿನ ಯುಗದಲ್ಲಿ ಕೀಳು ಮೇಲು ತರಗತಿಯ ಬೇಟೆಗಾರರ ಎಲ್ಲ ಗುಂಪುಗಳು ಸಮಾವೇಶವಾಗುತ್ತವೆ. ಆಯುಧಗಳ ನಿರ್ಮಾಣದಲ್ಲಿ ಇವರ ಜಾಣತನವನ್ನು ನೋಡಬಹುದು.

ಮುಖ್ಯವಾದ ಆಯುಧಗಳೆಂದರೆ ಗದೆ, ಹೊಡೆಯುವ ಕಟ್ಟಿಗೆ, ಬರ್ಚಿ, ಬಿಲ್ಲುಬಾಣ, ಒಗೆಯುವ ಗದೆ, ಚಕ್ರ ಮೊದಲಾದವು. ಈ ಕಾಲದಲ್ಲಿ ಬರ್ಚಿ ಬಾಣಗಳ ಮೊನೆಗಳನ್ನು ಬಿರುಸಾದ ಕಲ್ಲು, ಸಿಂಪು ಅಥವಾ ಚೂಪಾದ ಎಲುವಿನಿಂದ ಮಾಡುತ್ತಿದ್ದರು. ಬಾಣಗಳ ತುದಿಗೆ ವಿಷವನ್ನು ಹಚ್ಚುತ್ತಿ ದ್ದರು. ಬಾಣಗಳನ್ನು ಮಾಡುವುದರಲ್ಲಿ ಇವರು ಬಹು ಚತುರರು. ಬಾಣವು ಮೈಯಲ್ಲಿ ನಟ್ಟೊಡನೆ ತುದಿಯು ಮಾತ್ರ ಗಾಯದಲ್ಲಿ ಮುಳ್ಳಿನಂತೆ ಮುರಿದು ಕೊಂಡು ಇರುತ್ತಿತ್ತು. ಉಳಿದ ಭಾಗವು ಕೆಳಕ್ಕೆ ಬೀಳುತ್ತಿತ್ತು. ಆಸ್ಟ್ರೇಲಿ ಯನ್ನರೂ ಎಸ್ಕಿಮೋ ಜನರೂ ಒಗೆಯುವ ಕಟ್ಟಿಗೆಗಳನ್ನು ದೂರದಿಂದ ಉಪಯೋಗಿಸುವ ಆಯುಧಗಳೆಂದು ಉಪಯೋಗಿಸುತ್ತಾರೆ. ಕವಣೆ, ಬಲಿ ಮುಂತಾದವುಗಳಿಂದ ಕಾಡುಮೃಗಗಳನ್ನು ಹಿಡಿಯುತ್ತಾರೆ. ಮೀನಗಳನ್ನು ಕೊಂಡಿ (hook), ಬಲಿ, ಬರ್ಚಿಗಳಿಂದ ಹಿಡಿಯುತ್ತಾರೆ. ದೊಡ್ಡ ಗಿಡಗಳ ಬೊಡ್ಡೆಗಳನ್ನು ಸುಟ್ಟು ಪೊಳ್ಳುಮಾಡಿ ಅಥವಾ ಗಿಡದ ತೊಗಟೆಯಿಂದ ಪ್ರಾಣಿಗಳ ಮೈದೊಗಲಿನಿಂದ, ನೀರಿನ ಮೇಲೆ ತೇಲಾಡಲು ದೋಣಿಗಳನ್ನು ಮಾಡುತ್ತಾರೆ. ಚಾಕು, ಉಳಿ, ಕೊಡಲಿ ಮುಂತಾದವು ಕಲ್ಲಿನಿಂದ ಮಾಡಲ್ಪಡುತ್ತವೆ. ಮುಳ್ಳುಗಳಿಂದ ಇಲ್ಲವೆ ಮೀನುಗಳ ಎಲುವುಗಳಿಂದ

ಸೂಜಿಗಳನ್ನು ಮಾಡುತ್ತಾರೆ. ಪ್ರಾಣಿಗಳ, ಸ್ನಾಯು ಕರಳುಗಳಿಂದ ದಾರವನ್ನು ಮಾಡುತ್ತಾರೆ. ಚಿತ್ರ, ಟೊಂಗೆ ಮುಂತಾದವುಗಳಿಂದ ಬುಟ್ಟಿಗಳನ್ನು ಹೆಣೆಯುತ್ತಾರೆ ಎಲ್ಲ ಕಡೆಗೂ ಕತ್ತರಿಸದೆ ತೆಗೆದ ಸಣ್ಣ ಪ್ರಾಣಿಗಳ ಮೈಮೇಲಿನ ತೊಗಲು, ಸೀಸೆ ಅಥವಾ ಚೀಲದಂತೆ ಉಪಯೋಗವಾಗುತ್ತದೆ.

ಈ ಯುಗದಲ್ಲಿ ನೇಯುವುದನ್ನೂ, ಪಾತ್ರೆಗಳನ್ನು ಮಾಡುವುದನ್ನೂ ಜನರು ಅರಿತಿರಲಿಲ್ಲ. ಆದರೆ ಬೆಂಕಿಯನ್ನು ಹೊತ್ತಿಸುವುದನ್ನೂ ಅದನ್ನು ಉಪಯೋಗಿಸುವುದನ್ನೂ ಚೆನ್ನಾಗಿ ಅರಿತಿದ್ದರು. ಮಾಂಸವನ್ನು ಬೇಯಿಸಿ ರುಚಿಮಾಡಲಿಕ್ಕೂ, ಗಿಡಗಳ ಬೊಡ್ಡೆಗಳನ್ನು ಸುತ್ತಲೂ ಸುಟ್ಟು ಅವುಗಳನ್ನು ಕೆಡುವುವುದಕ್ಕೂ, ಅವುಗಳ ಒಳಭಾಗವನ್ನು ಸುಟ್ಟು ಪೊಳ್ಳುಮಾಡಿ ನಾವುಗಳಂತೆ ಉಪಯೋಗಿಸುವುದಕ್ಕೂ, ಬರ್ಚಿಗಳ ತುದಿಗಳನ್ನು ಬಿರುಸು ಮಾಡಲು, ಹುಲ್ಲನ್ನು ಸುತ್ತಲೂ ಸುಡುವುದರಿಂದ ಅದರಲ್ಲಿಯ ಕಾಡು ಮೃಗಗಳು ಬೇಟೆಗಾರನ ಬಳಿ ಸಾರುವಂತೆ ಮಾಡುವುದಕ್ಕೂ, ಚಳಿಗಾಲದಲ್ಲಿ ಉಷ್ಣತೆಯನ್ನು ಪಡೆಯಲೂ, ರಾತ್ರಿಯಲ್ಲಿ ಬೆಳಕನ್ನು ಹೊಂದಲಿಕ್ಕೂ ಕ್ರೂರ ಮೃಗಗಳನ್ನು ಅಂಜಿಸುವುದಕ್ಕೂ ಬೆಂಕಿಯನ್ನು ಉಪಯೋಗಿಸುತ್ತಿದ್ದರು.

(ಬ) **ಹೊಸ ಯುಗ** (Neolithic phase). ಈ ಯುಗದ ಆಯುಧಗಳನ್ನು ಪರೀಕ್ಷಿಸಿದರೆ, ಕಲ್ಲಿನಿಂದಲೇ ಆಯುಧಗಳನ್ನು ಮಾಡಿದರೂ, ಅವುಗಳನ್ನು ಮಾಡುವ ರೀತಿಯಲ್ಲಿ ಎಷ್ಟೋ ಸುಧಾರಣೆಯನ್ನು ಕಾಣಬಹುದು. ಈ ಯುಗದಲ್ಲಿ ಮಾನವನು ಆಯುಧಗಳನ್ನೂ ಉಪಕರಣಗಳನ್ನೂ ತಿಕ್ಕಿ ನುಣುಪು ಮಾಡಬಲ್ಲನು. ತೂತುಗಳನ್ನು ಕೊರೆಯಬಲ್ಲನು. ಇದೇ ಯುಗದಲ್ಲಿ ಮಣ್ಣಿನ ಪಾತ್ರೆಗಳನ್ನೂ, ಮರದ ತಾಟುಗಳನ್ನೂ, ಚರ್ಮದ ಸೀಸೆಗಳನ್ನೂ, ಚರ್ಮದ ಹೊದಿಕೆಗಳನ್ನೂ ಕಾಣಬಹುದು. ಓಸಿಯಾನಿಯನ್ ಜನರ ಒಡವೆಗಳು ಬಹು ಸುಂದರವಾಗಿರುತ್ತವೆ. ಅವರ ಆಯುಧಗಳೂ, ಪಾತ್ರೆಗಳೂ ಅಂದವಾಗಿ ಕೊರೆಯಲ್ಪಟ್ಟು ಕೆತ್ತನೆಯ ಕೆಲಸದಿಂದ ಶೋಭಿಸುತ್ತವೆ. ಅವರ ಗದೆಯಂತೂ ಅನೇಕ ವರುಷಗಳ ಪರಿಶ್ರಮದಿಂದ ಕಲಾಕುಶಲತೆಯ ಕುರುಹಾಗಿ ಪರಿಣಮಿಸಿರುತ್ತದೆ.

ಈ ಯುಗದ ಜನರು ನೇಯುವುದನ್ನೂ ಪಾತ್ರೆಗಳನ್ನು ಮಾಡುವುದನ್ನೂ ಅರಿತಿದ್ದರು. ಹಳೆಯ ಯುಗದ ಬೇಟೆಗಾರರು ಬಲಿಗಳನ್ನು ಮಾಡಿ

ದರೂ, ನೂಲುವುದನ್ನೂ ನೇಯುವುದನ್ನೂ ಅರಿತಿರಲಿಲ್ಲ. ಹೊಸ ಯುಗದಲ್ಲಿ ಅಮೇರಿಕೆಯ ಇಂಡಿಯನ್‌ರೂ, ಓಷಿಯಾನಿಯನ್‌ರೂ, ಮಲಾಯದ ಜನರೂ ಕೈಮಗ್ಗಗಳನ್ನು ಮಾಡಿಕೊಂಡು ನೇಯುತ್ತಿದ್ದರು.

ಪಾತ್ರೆಗಳನ್ನು ಮಾಡುವುದನ್ನು ಹುಡಿಕಿ ತೆಗೆದುದು ಇನ್ನೂ ಮಹತ್ವದ ವಿಷಯವಾಗಿದೆ. ಪಾತ್ರೆಯು, ಒತ್ತೊಟ್ಟಿಗೆ ಕುಳಿತು ಕೆಲಸ ಮಾಡುವುದರ ಮತ್ತು ಅಡಿಗೆ ಮಾಡುವ ಕಲೆಯ ಪ್ರಾರಂಭದ ದ್ಯೋತಕವು. ಪಾತ್ರೆಯಿಂದಲೇ ಅಡಿಗೆ ಮಾಡುವುದು ಸಾಧ್ಯ.

ಅಡಿಗೆಯ ವಿಷಯದಲ್ಲೂ ಮೂರು ಅವಸ್ಥೆಗಳನ್ನು ಗುರುತಿಸಬಹುದು.

೧. ತೀರ ಕೆಳಗಿನ ತರಗತಿಯವರಿಗೆ ನೀರನ್ನು ಕಾಸುವುದು ಅಥವಾ ಮರಳಿಸುವುದು ಗೊತ್ತಿಲ್ಲ. ಈ ತರಗತಿಗೆ ಕೀಳು ಬೇಟೆಗಾರರು ಸಂಬಂಧಿಸಿರುತ್ತಾರೆ. ಈ ಜನರು ಹಸಿಮಾಂಸವನ್ನು ಅಥವಾ ಕೆಂಡದ ಮೇಲೆ ಸುಟ್ಟ ಮಾಂಸವನ್ನು ತಿನ್ನುತ್ತಾರೆ. ಅಥವಾ ಮೊದಲಿಗೆ ಕಾಯ್ದ ನೆಲದ ಪೊಳ್ಳುಗಳಲ್ಲಿ ಮಾಂಸವನ್ನಿಟ್ಟು ಸಾವಧಾನವಾಗಿ ಅದು ತಾನೇ ಬೆಂದ ಮೇಲೆ ತಿನ್ನುತ್ತಾರೆ. ಈ ಬಗೆಯಿಂದ ಬಹು ರುಚಿಕಟ್ಟಾದ ಆಹಾರವು ಸಿದ್ಧವಾಗುತ್ತದೆ. ಹೆಚ್ಚು ಸಂಧಾರಿಸಿದವರು ತಮ್ಮ ಪ್ರಯತ್ನಗಳಿಂದ ಹೊಂದಬಹುದಾದ ಪರಿಣಾಮವೇ ಇವರ ಈ ರೀತಿಯಿಂದ ಉಂಟಾಗುವುದು.

೨. ಎರಡನೆಯ ಅವಸ್ಥೆಯಲ್ಲಿ ನೀರನ್ನು ಕಟ್ಟಿಗೆಯ ಪಾತ್ರೆಯಲ್ಲಿ ಕಾಸುವರು. ಅದನ್ನು ಪ್ರತ್ಯಕ್ಷ ಉರಿಯಿಂದ ಕಾಸದೆ, ನೀರಿನಲ್ಲಿ ಸುಡುವ ಕಲ್ಲುಗಳನ್ನು ಹಾಕಿ ಕಾಸುತ್ತಾರೆ. ಇದಕ್ಕೆ ಕಲ್ಲಿನಿಂದ ಮರಳಿಸುವುದೆನ್ನುತ್ತಾರೆ. ಈ ಪದ್ಧತಿಯನ್ನು ಇಂಡಿಯನ್ ಬೇಟೆಗಾರರಲ್ಲಿ ಕಾಣಬಹುದು.

೩. ಕೊನೆಯದಾಗಿ ಒಕ್ಕಲುತನವನ್ನು ಮಾಡುವ ಇಂಡಿಯನ್‌ರಲ್ಲಿ ಬೇರೊಂದು ಬಗೆಯನ್ನು ಕಾಣಬಹುದು. ಇವರು ತಮ್ಮ ಕಟ್ಟಿಗೆಯ ಪಾತ್ರೆಗಳು ಬೆಂಕಿಯಿಂದ ಸುಡಬಾರದೆಂಬ ಉದ್ದೇಶದಿಂದ ತಮ್ಮ ಬುಟ್ಟಿಗಳ ಮತ್ತು ಪಾತ್ರೆಗಳ ಸುತ್ತಲು ಮಣ್ಣನ್ನು ತಟ್ಟಿ ಇಡುತ್ತಿದ್ದರು. ಮಣ್ಣು ಕಾಯ್ದೊಡನೆ ಅದು ಬಿರುಸಾಗಿ ಕಟ್ಟಿಗೆಯ ಪಾತ್ರೆಯ ಸಹಾಯವಿಲ್ಲದೆ, ಪಾತ್ರೆಯಂತೆ ನಿಲ್ಲುವುದೆಂಬ ಕಲ್ಪನೆ ಅವರಿಗೆ ತೋಳೆಯಿತು. ಆಮೇಲೆ ಕೈಗಳಿಂದ ಪಾತ್ರೆಗಳನ್ನು ಮಾಡಿ ಅವುಗಳನ್ನು ಚೆನ್ನಾಗಿ ಸುಟ್ಟು ಉಪಯೋಗಿಸಹತ್ತಿದರು.

ಒರಬರುತ್ತ ಇಂತಹ ಪಾತ್ರೆಗಳನ್ನು ನುಣುಪಾಗಿ ಅಂದವಾಗಿ ಕಾಣುವಂತೆ ನಕ್ಷೆಗಳಿಂದ ಸಿಂಗರಿಸಹತ್ತಿದರು.

**೨. ಕಂಚಿನ ಯುಗ**--ಕಲ್ಲಿನ ಹಳೆ ಯುಗವಾಗಲಿ ಹೊಸ ಯುಗ ವಾಗಲಿ ಧಾತುಗಳ ಉಪಯೋಗವನ್ನರಿತಿರಲಿಲ್ಲ. ಕ್ರಮೇಣ ಮೆತ್ತಗಿನ ಸುಲಭವಾಗಿ ಕರಗಬಹುದಾದ ಧಾತುಗಳು ಬಳಕೆಯಲ್ಲಿ ಬಂದವು. ಕಬ್ಬಿಣವು ಎಷ್ಟೋ ಕಾಲದ ನಂತರ ಉಪಯೋಗಿಸಲ್ಪಟ್ಟಿತು.

ಧಾತುಗಳು ಉಪಯೋಗಿಸಲ್ಪಟ್ಟುದು ಮೊದಲು ಅಮೇರಿಕೆಯ ಬೇರೆ ಬೇರೆ ಭಾಗಗಳಲ್ಲಿ ಕಂಡುಬಂದಿತು. ಇಂಡಿಯನ್ ಬೇಟೆಗಾರರು ಕಲ್ಲಿನ ಯುಗದಲ್ಲಿಯೇ ಇದ್ದಾಗ ಉತ್ತರದಲ್ಲಿ ಜನರು—ಏರೀ ಸರೋವರದ ಬಳಿ--ತಾಮ್ರವನ್ನು ಉಪಯೋಗಿಸಹತ್ತಿದರು. ಕಲ್ಲನ್ನು ತಿಕ್ಕುವಂತೆ ತಾಮ್ರ ವನ್ನೂ ಹಣಿದು ತಮ್ಮ ಕೆಲಸಕ್ಕೆ ಉಪಯೋಗಿಸುತ್ತಿದ್ದರು. ಅದನ್ನು ಇನ್ನೂ ಕರಗಿಸುತ್ತಿರಲಿಲ್ಲ. ಅಮೇರಿಕೆಯ ಮಧ್ಯಭಾಗ, ದಕ್ಷಿಣಭಾಗದಲ್ಲಿಯೂ ಕೂಡ—ಪೇರೂ ಮೆಕ್ಸಿಕೊ ಮುಂತಾದ ಸೀಮೆಗಳಲ್ಲಿ—ತಾಮ್ರ-ಕಂಚಿನ ಅತ್ಯುನ್ನತ ಸಂಸ್ಕೃತಿಯನ್ನು ಕಾಣಬಹುದಾಗಿತ್ತು. ತಾಮ್ರ-ಕಂಚುಗಳನ್ನಲ್ಲದೆ ಸೀಸ, ತವರು, ಬೆಳ್ಳಿ ಬಂಗಾರಗಳನ್ನು ಕೂಡ ಇವರು ಅರಿತಿದ್ದರು. ಆದರೆ ಕಬ್ಬಿಣವನ್ನರಿತಿರಲಿಲ್ಲ. ಕಲ್ಲಿನ ಉಪಯೋಗವು ಇನ್ನೂ ನಡೆದಿತ್ತು. ಯಾಕೆಂದರೆ, ಮೃದು ಧಾತುಗಳಿಂದ ಕಲ್ಲಿನ ಬಿರುಸಾದ ಕೆಲಸವು ಸಾಗು ವಂತಿರಲಿಲ್ಲ. ಆದುದರಿಂದ ಕಂಚಿನ ಯುಗದಲ್ಲಿಯೂ ಕೂಡ ಕಲ್ಲಿನ ಉಪ ಕರಣಗಳಿಗೆ ಇನ್ನೂ ಪ್ರಾಧಾನ್ಯವಿದ್ದುದನ್ನು ಕಾಣಬಹುದು. ಧಾತುಗಳನ್ನು ಕಣಿಗಳಿಂದ ತೋಡಿ ತೆಗೆಯುತ್ತಿದ್ದರು. ತಾಮ್ರವನ್ನು ತವರು, ಬೆಳ್ಳಿ, ಬಂಗಾರ ಮುಂತಾದವುಗಳಲ್ಲಿ ಕೂಡಿಸಿ ಅವುಗಳನ್ನು ಹೆಚ್ಚು ಮೃದುಗೊಳಿ ಸುತ್ತಿದ್ದರು. ಬೇರೆ ಬೇರೆ ಮಿಶ್ರಣಗಳು ಕೊಡಲಿ, ಉಳಿ, ಚಾಕು, ಆಭರಣ ಮುಂತಾದವುಗಳಿಗೆ ಉಪಯೋಗಿಸಲ್ಪಡುತ್ತಿದ್ದವು. ಸ್ಪೇನದ ಸುಲಿಗೆಗಾರರು ಇವೆಲ್ಲವನ್ನೂ ನೋಡಿ, ಆ ಕಾಲದ ಯುರೋಪದಲ್ಲಿ ಇಂತಹ ಪದಾರ್ಥಗಳು ಒಂದೂ ಇಲ್ಲದುದನ್ನು ಕಂಡು ಬೆರಗಾದರು.

**೩. ಕಬ್ಬಿಣದ ಯುಗ:** ಇತಿಹಾಸ ಕಾಲದಲ್ಲಿ ಕಬ್ಬಿಣವು ಹಳೆ ಜಗತ್ತಿನ (ಏಸಿಯಾ, ಯುರೋಪ, ಆಫ್ರಿಕಾ) ಎಲ್ಲಭಾಗಗಗಳಲ್ಲಿದೊರಕುತ್ತಿದ್ದು

ದನ್ನು ನಾವು ನೋಡಬಹುದು. ಸುಮೇರಿಯನ್, ಆ್ಯಸಿರೊ ಬೆಬಿಲೋನಿಯನ್, ಇಜಿಪ್ಶಿಯನ್, ಗ್ರೀಕ ಮುಂತಾದ ಸುಧಾರಿಸಿದ ಜನರಿಗಲ್ಲದೆ ಹಳೆ ಜಗತ್ತಿನ ಪ್ರಾಕೃತಿಕ ಜನರಿಗೂ ಕಬ್ಬಿಣವು ಗೊತ್ತಿದ್ದಿತು. ಏಸಿಯಾ ಮತ್ತು ಆಫ್ರಿಕೆಯಲ್ಲಿ ಕಾಡುಸ್ಥಿತಿಯಲ್ಲಿದ್ದ ಜನರು ಕೂಡ ಕಬ್ಬಿಣವನ್ನರಿತಿದ್ದರು. ಆದರೆ ಅದಕ್ಕಿಂತಲೂ ಹೆಚ್ಚಿಗೆ ಸುಧಾರಿಸಿದ ಪೇರೂವಿಯನ್‌ರಿಗೂ ಮೆಕ್ಸಿಕನ್‌ರಿಗೂ ಅದು ಗೊತ್ತಿರಲಿಲ್ಲ. ಅವರು ಕಂಚನ್ನು ಮಾತ್ರ ಅರಿತಿದ್ದರು. ನಿಜವಾಗಿಯೂ ಕಲ್ಲಿನ ಯುಗವಾದನಂತರ ತಾಮ್ರ-ಕಂಚುಗಳ ಯುಗವು ಬರುತ್ತದೆ. ಆದರೆ ಈ ಹಳೆಜಗತ್ತಿನ ಪ್ರಾಕೃತಿಕ ಜನರು ಕಲ್ಲಿನ ಯುಗವಾದೊಡನೆ ಕಬ್ಬಿಣದಯುಗವನ್ನೇ ತಲುಪಿದರು. ಈ ಬದಲಾವಣೆಗೆ ಅಷ್ಟೊಂದು ಮಹತ್ವವಿಲ್ಲ. ಯಾಕೆಂದರೆ ಅವರು ತಮ್ಮ ಸಂಶೋಧನಗಳಿಂದ ಕಬ್ಬಿಣಯುಗವನ್ನು ತಲುಪಲಿಲ್ಲ. ಮೊದಲು ಕಂಚಿನ ಯುಗದೊಳಗಿಂದ ಹಾಯ್ದು ಹೋದ ಬೇರೆ ಯಾವುದೋ ಒಂದು ಸುಧಾರಿಸಿದ ಜನಸಮುದಾಯದ ಸಹಾಯದಿಂದ ಅವರಿಗೆ ಕಬ್ಬಿಣದ ಜ್ಞಾನವಾಗಿರಬೇಕು.

ಜಗತ್ತಿನಲ್ಲಿ ಬೇಬಿಲೋನಿಯಾ ಮತ್ತು ಆ್ಯಸೀರಿಯಾ ಬಹು ಪುರಾತನ ಕಾಲದಿಂದಲೇ ಸುಸಂಸ್ಕೃತವಾದವುಗಳು. ಇಲ್ಲಿಯ ಜನರು ನಮ್ಮ ಸಂಸ್ಕೃತಿಯ ಮೂಲಪುರುಷರೆಂದು ನಾವು ಭಾವಿಸುತ್ತೇವೆ. ಇತಿಹಾಸದ ಮೂಲಕ ಇವರ ವಿಷಯವು ನಮಗೆ ತಿಳಿದಾಗಲೇ ಇವರಿಗೆ ಧಾತುಗಳ ಜ್ಞಾನವಿತ್ತೆಂಬುದು ಕಂಡುಬಂದಿತು. ಸುಸಂಘಟಿತವಾಗಿ ಕಣಿಗಳನ್ನು ತೋಡಿ ತಾಮ್ರ (ಪೂರ್ವಕಾಲದಲ್ಲಿ ಮೊಟ್ಟಮೊದಲು ಗೊತ್ತಾದ ಧಾತು) ಸೀಸು, ಬೆಳ್ಳಿ, ಬಂಗಾರವನ್ನು ತೆಗೆಯುತ್ತಿದ್ದರು. ಕಬ್ಬಿಣವನ್ನು ಕೂಡ ಇವರು ಅರಿತಿದ್ದರು. ಪಶ್ಚಿಮ ಏಶಿಯದ ಜನರಿಗೂ, ಇಜಿಪ್ತದವರಿಗೂ, ಇತಿಹಾಸಕಾಲದಲ್ಲಿ ಎಷ್ಟೋ ಹಿಂದೆಯೇ ಕಬ್ಬಿಣದ ಅರಿವು ಇತ್ತು. ಕಂಚು ಹಿತ್ತಾಳಿ ಮೊದಲಾದ ಮಿಶ್ರಣಗಳನ್ನೂ, ಧಾತುಗಳನ್ನೂ ಕಾಸುವುದನ್ನೂ, ಬಡಿಯುವುದನ್ನೂ ಒಪ್ಪ ಹಾಕುವುದನ್ನೂ ಚೆನ್ನಾಗಿ ಅರಿತಿದ್ದರು. ಮತ್ತು ಅವರು ಧಾತುಗಳಿಂದ ನಿರ್ಮಿಸಿದ ಒಡವೆಗಳು—ಚಿತ್ರಿತವಾದ ಖಡ್ಗ, ಶಿರಸ್ತ್ರಾಣ, ಢಾಲು, ಪಾತ್ರೆಗಳು—ಅತ್ಯಂತ ಪರಿಪೂರ್ಣತೆಯನ್ನು ಪಡೆದಿರುತ್ತವೆ. ಬಿರುಸಾದ ಕಲ್ಲಿನಲ್ಲಿ ಕೆಲಸಮಾಡುವುದನ್ನೂ, ಅದನ್ನು ಅತಿ ಸುಂದರ

ವಾಗಿ ಕೊರೆಯುವುದನ್ನೂ ಸುಟ್ಟ ಇಟ್ಟಿಗೆಗಳನ್ನು ಮಾಡುವುದನ್ನೂ, ಸಿಮೆಂಟ, ಪ್ಲಾಸ್ಟರ ಆಫ್ ಪ್ಯಾರಿಸ್ ಮುಂತಾದವುಗಳನ್ನೂ, ಅನೇಕ ಬಣ್ಣಗಳನ್ನೂ, ಪಾತ್ರೆಗಳಿಗೆ ಹೊಳಪು ತರುವುದನ್ನೂ, ಊದಿ ಬಗೆಬಗೆಯ ಬಣ್ಣಗಳ ಕಾಜನ್ನು ಮಾಡುವುದನ್ನೂ ಚನ್ನಾಗಿ ಬಲ್ಲವರಾಗಿದ್ದರು. ಕೆತ್ತನೆಯ ಕೆಲಸ, ವಾರ್ನಿಸ ಹಚ್ಚುವುದು, ಅನೇಕ ಕ್ಷಾರಗಳ ರಸಾಯನಿಕ ಕೃತಿ, ಇವೆಲ್ಲವುಗಳಲ್ಲಿ ಸುರಿತವರಾಗಿದ್ದರು. ಅವರ ಬಳಿಯಲ್ಲಿ ಬಹು ನಯವಾಗಿ ನೇಯುವ ಸಾಮುಗ್ರಿಗಳೂ, ಶಸ್ತ್ರಕ್ರಿಯೆಯ ಸಾಧನಗಳೂ, ಔಷಧಗಳೂ, ವಿಪುಲವಾಗಿದ್ದವು. ಇವಲ್ಲದೆ ಕೆಲವೊಂದು ಸಾಮಾನ್ಯ ಯಂತ್ರಗಳು, ಗಹನವಾದ ಯಂತ್ರಗಳು, ಬೆಣೆ, ಲಿವ್ಹರ, ಸಿಲಿಂಡರ, ಉಳಕ, ತಿರುವುವ ಮಳೆಗಳು, ತಿಗರಿ, ಊದುವ ಕೊಳವೆ, ಕೈಯಂತ್ರ, ಕೈಮುಗ್ಗ, ಗಾಳಿಯಂತ್ರ, ತಿದಿ, ಬಂಡಿ, ದೋಣಿ-ಹಡಗಗಳು, ಯುದ್ಧದ ಯಂತ್ರ, ಮುಂತಾದವುಗಳು ಅವರಿಗೆ ಗೊತ್ತಿದ್ದವು. ಅವರ ಯಾಂತ್ರಿಕ ಉಪಕರಣಗಳು ಬಹು ಯಶಸ್ವಿಯಾಗಿದ್ದವು. 'ಪೆಟ್ರೀಲ್'ನು ಹೇಳುವುದೇನಂದರೆ, 'ಪೂರ್ವಕಾಲದ ಇಜಿಪ್ತಜನರ ಯಾಂತ್ರಿಕ ಸಂಶೋಧನೆಗಳನ್ನು, ನಮ್ಮ ಸಂಶೋಧನೆಗಳೊಡನೆ ಹೋಲಿಸಿದರೆ, ಉಗಿಯಂತ್ರಕ್ಕಿಂತಲೂ ಮೊದಲು ನಮ್ಮಲ್ಲಿ ಅವರನ್ನು ಹಿಂದೆಹಾಕುವ ಯಾವ ಮಹತ್ವದ ಸಂಶೋಧನೆಯು ಆಗಿರಲಿಲ್ಲವೆಂದೂ ಹೇಳಬಹುದು.' ಯಾಂತ್ರಿಕ ಸುಧಾರಣೆಯಲ್ಲಿ ಇಷ್ಟೊಂದು ಚಾಣ್ಮೆಯನ್ನು ಪಡೆದುದನ್ನು ಪೂರ್ವಭಾಗದ ಹಳೆಜನರಾದ ಸೆಮೆಟಿಕ್ ಮತ್ತು ಹೆಮೆಟಿಕ್ ಗುಂಪುಗಳ ಶಾಶ್ವತವಾದ ಕಾರ್ಯವು ವ್ಯಕ್ತಗೊಳಿಸುತ್ತದೆ.

ಆರ್ಯರೊಳಗೆ ಅತಿ ಮೊದಲಿಗರಾದ ಗ್ರೀಕ ಮತ್ತು ರೋಮನ್ ಜನರು ಕೂಡ ಇಂತಹ ಸಂಶೋಧನೆಗಳನ್ನು ಮಾಡಿರಲಿಲ್ಲ. ಇಷ್ಟೇ ಅಲ್ಲದೆ ಕಾಡು ಜನರಾದ 'ಕೆಲ್ಟ'ರ ಕಡಿಂದ ತಿಗರಿಯನ್ನು ತಿರುವುವುದನ್ನೂ, ರೇಶಿಮೆ ವಸ್ತ್ರವನ್ನು ಮಾಡುವುದನ್ನೂ ಕಟ್ಟಿಗೆ ಪಾತ್ರೆಗಳನ್ನು ಉಪಯೋಗಿಸುವುದನ್ನೂ ಕಲಿಯಬೇಕಾಯಿತು. ಆಯುಧಗಳಲ್ಲಿಯೂ ಕೂಡ ಇವರು ವಿಶೇಷ ಸುಧಾರಣೆಗಳನ್ನು ಮಾಡಲಿಲ್ಲ. ಆಗಸ್ಟಸ್‌ನಿಂದ ಡಾಯೋಕ್ಲೇಟಿಯನ್‌ನ ವರೆಗೂ ಯುದ್ಧಸಾಮುಗ್ರಿಯಲ್ಲಿ ಯಾವ ಹೆಚ್ಚು ಕಡಿಮೆಯೂ ಆಗಿರಲಿಲ್ಲ.

ಇದಕ್ಕೆ ಕಾರಣವನ್ನು ಊಹಿಸಬಹುದು. ಯಾಂತ್ರಿಕ ಕೌಶಲ್ಯವು ಹೆಮಾ-ಸೆಮೆ ಟಿಕ್ ಜನರಲ್ಲಿ ವಿಶೇಷವಾಗಿ ಬೆಳೆದು ಒಳ್ಳೇ ಯಶಸ್ವಿಯಾಗಿ ಮುಂದೆ ಸಾಗಿದಾಗ, ಸಂಸ್ಕೃತಿಯು ಬೇರೆ ಸಮಸ್ಯೆಗಳ ಕಡೆಗೆ ಲಕ್ಷ್ಯ ಕೊಡುವ ಕಾಲವು ಅವಶ್ಯವಾಗಿ ನಡುವೇ ಉಂಟಾಗಿರಲಿಕ್ಕೆಬೇಕು. ಶಾಸ್ತ್ರೀಯ ವಿಷಯ, ತತ್ವಜ್ಞಾನ, ಕಲೆಗಳ ಕಡೆಗೆ ಗ್ರೀಕರು ತಮ್ಮ ದೃಷ್ಟಿಯನ್ನು ಹರಿಬಿಟ್ಟರು. ರೋಮನ್‌ರು ರಾಜಕೀಯ ಸಂಘಟನೆಗಳನ್ನು ಸ್ಥಾಪಿಸುವುದರಲ್ಲಿಯೂ, ಜಗತ್ತಿನ ತುಂಬ ರಾಜ್ಯವನ್ನು ಕಟ್ಟಬೇಕೆಂಬುದರಲ್ಲಿಯೂ ಮನಸ್ಸು ಹಾಕಿದರು. ಕೈಗಾರಿಕೆಯು ಮುಂದೆ ಸಾಗದೆ ನಿಂತು ಬಿಟ್ಟುದಕ್ಕೆ ಮುಖ್ಯ ಕಾರಣವೆಂದರೆ ಗುಲಾಮಗಿರಿಯು ಬೆಳವಣಿಗೆ ಮತ್ತು ಗುಲಾಮರ ಒಡೆಯರ ವಿಚಿತ್ರ ಮನೋವೃತ್ತಿ. ದುಡಿಯುವುದೆಂದರೆ ಹೇಯವಾದುದೆಂದೂ ಅದು ಗುಲಾಮರಿಗೆ ಮಾತ್ರ ಯೋಗ್ಯವಾದುದೆಂದೂ ಆಗಿನವರ ಭಾವನೆಯಾಗಿತ್ತು. ಭೌತಿಕ ವಿಷಯಗಳೊಡನೆ ಸಂಪರ್ಕವು ಹೀನ ವಿಷಯವೆಂದು ಪರಿಗಣಿಸಲ್ಪಟ್ಟಿತ್ತು. ತತ್ವಜ್ಞಾನದಲ್ಲಿಯೇ ಎಲ್ಲ ಪಂಡಿತರೂ ತೊಡಗಿರುತ್ತಿದ್ದರು. ಇಂತಹ ಮನೋವೃತ್ತಿಯು ಸಂಸ್ಕೃತಿಯ ಪ್ರಗತಿಗೆ ಶತ್ರುವಾಯಿತು. ಇದರಿಂದ ನಿರ್ದಿಷ್ಟ ಶಾಸ್ತ್ರಗಳೂ ಕೈಗಾರಿಕೆಯ ಕೌಶಲ್ಯವೂ ಬೆಳೆಯದಂತಾದವು.

ಗುಲಾಮಗಿರಿಯು ಕೈಗಾರಿಕೆಯ ಕೌಶಲ್ಯಕ್ಕೆ ಮತ್ತೊಂದು ವಿಧವಾಗಿಯೂ ನಾಶಕಾರಕವಾಗಿದೆ. ಮನುಷ್ಯರೂಪೀ ಯಂತ್ರಗಳೇ ದೊರೆಯುವಾಗ ಇನ್ನಿತರ ಯಂತ್ರಗಳ ಅವಶ್ಯಕತೆ ಎನಿಸಲಿಲ್ಲ. ಇದಕ್ಕೆ ದೃಷ್ಟಾಂತವಾಗಿ ಪಶಿಯ ಮೈನರದಲ್ಲಿ 'ಮಿಥಿಡ್ರೇಟ್ಸ' ನೆಂಬವನಿರುವಾಗ ನೀರಿನ ಯಂತ್ರಗಳು (Water mills) ಪ್ರಚಾರದಲ್ಲಿದ್ದವು. ಆದರೆ ಅದೇ ಕಾಲಕ್ಕೆ ರೋಮನ್ ಸಾಮ್ರಾಜ್ಯದಲ್ಲಿ ಬೀಸುವಂತಹ ಕಠಿಣ ಕೆಲಸವು ಕೈಯಂತ್ರಗಳಿಂದಲೇ ಸಾಗಿತ್ತು. ಮಧ್ಯಮ ಯುಗದ ವರೆಗೂ ಯಾಂತ್ರಿಕ ಬೆಳವಣಿಗೆಯು ನಿಂತು ಹೋಗಿತ್ತು.

**೪. ಯಾಂತ್ರಿಕ ಯುಗ**—ಈ ಯುಗವು ಸುಮಾರು ೧೮ನೆಯ ಶತಮಾನದ ಕೊನೆಗೆ ಪ್ರಾರಂಭವಾಯಿತು. ಅದರ ಬೆಳವಣಿಗೆಯನ್ನು ಮೂರು ವಿಧವಾಗಿ ವಿಭಾಗಿಸಬಹುದು.

೧ನೆಯ ಭಾಗ—ಯಂತ್ರಗಳು ತೀರ ಕಡಿಮೆಯಾಗಿದ್ದ ಕಾಲ. ಸಂಸ್ಕೃತಿಯ ಕೆಳಗಿನ ತರಗತಿಯಿಂದ ಶ್ರೇಷ್ಠ ನಾಗರಿಕತೆ ಸುರುವಾಗುವ ವರೆಗೂ ಈ ಕಾಲವು ಹಬ್ಬಿರುತ್ತದೆ. ಈ ಕಾಲದ ಯಂತ್ರಗಳು ಬಹು ಕಗ್ಗ ವಾಗಿದ್ದವು. ತೂತು ಕೊರೆಯುವ ಯಂತ್ರ, ಕೈಮಗ್ಗ, ಬಿಲ್ಲುಬಾಣ ಮುಂತಾದವು ಮುಖ್ಯವಾದವುಗಳು.

೨ನೆಯ ಭಾಗ—ನಾಗರಿಕತೆಯ ಕಾಲದಿಂದ ಧರ್ಮಯುದ್ಧಗಳ (Crusades) ಕಾಲದ ವರೆಗೆ ಈ ಭಾಗದ ಸಂಶೋಧನಗಳೆಲ್ಲವೂ ಪೂರ್ವ ದಲ್ಲಿದ್ದ ಹಳೆ ಜನರಿಗೇ ಸಂಬಂಧಿಸಿವೆ. ಪಶ್ಚಿಮದ ಸುಪ್ರಸಿದ್ಧ ರಾಷ್ಟ್ರ ಗಳಾಗಲಿ, ರುಮಾನೊ-ಜರ್ಮ್ಯಾನಿಕ್ ಜನರಾಗಲಿ ಇವುಗಳಲ್ಲಿ ಭಾಗಿಗಳಾಗಿ ರಲಿಲ್ಲ. ಒಂದೇ ಒಂದು ಅಪವಾದವೆಂದರೆ ಸುಮಾರು ೧೧೦೫ನೆ ಇಸ್ವಿಯಲ್ಲಿ ನಮೂದಿಸಲ್ಪಟ್ಟ ಗಾಳಿಯಂತ್ರ (Wind mill). ಆದರೆ ಅದು ಕೂಡ ಏಶಿಯಾ ಮೈನರದಲ್ಲಿ ಎಷ್ಟೋ ಮೊದಲು ಜನರಿಗೆ ಗೊತ್ತಿದ್ದಿತು.

೩ನೆಯ ಭಾಗ—ಧರ್ಮಯುದ್ಧಗಳಿಂದ ೧೮ನೆಯ ಶತಮಾನದ ವರೆಗೆ. ಅಜ್ಞಾನಯುಗವು (Dark age) ಮುಗಿದ ಬಳಿಕ ಹೊಸ ಜೀವಕಳೆಯು ಜನರಲ್ಲಿ ಹರಿದಾಡತೊಡಗಿತು. ಧರ್ಮಯುದ್ಧಗಳ ಮೂಲಕ ಅರಬರೊಡನೆ ಪಾಶ್ಚಿಮಾತ್ಯರ ಸಂಪರ್ಕ ಉಂಟಾಯಿತು. ಅರಬೀ ಸಂಸ್ಕೃತಿಯು, ತನಗೆ ಅಲೆಕ್ಸಾಂಡ್ರಿಯನ್‌ರಿಂದ, ಬಾಯಝಾಂಟಾಯಿನದಿಂದ, ಇರಾಣೀಯರಿಂದ ದೊರೆತ ಜ್ಞಾನಭಾಂಡಾರಕ್ಕೆ ಹೊಸ ಸ್ವರೂಪವನ್ನು ಕೊಡಹತ್ತಿತು. ಗ್ರೀಕ ರೋಮನ್ ತತ್ವಜ್ಞಾನಿಗಳು ಜ್ಞಾನವನ್ನು ಕೇವಲ ಜ್ಞಾನಕ್ಕಾಗಿಯೇ ಬೆಳೆಸುತ್ತಿದ್ದರು. ಮಾನಸಿಕ ಬಲವನ್ನು ಬೆಳೆಸುವುದರಲ್ಲಿಯೇ ಅದನ್ನು ಉಪ ಯೋಗಿಸುತ್ತಿದ್ದರು. ವಿಜ್ಞಾನವನ್ನು ಉಪಯುಕ್ತ ರೀತಿಯಲ್ಲಿ ಬಳಕೆಯಲ್ಲಿ ತರಬೇಕೆನ್ನುವ ವಿಚಾರವನ್ನು ತುಚ್ಛೀಕರಿಸುತ್ತಿದ್ದರು. ಆದರೆ ಸೆಮೆಟಿಕ್ ಜನರು ಈ ರೀತಿ ಭಾವಿಸುತ್ತಿರಲಿಲ್ಲ. ಜ್ಞಾನವೆಂಬುದು ಒಂದು ಅಪಾರಶಕ್ತಿ ಯೆಂದೂ, ಅದನ್ನು ಕೇವಲ ಮಾನಸಿಕ ಬೆಳವಣಿಗೆಗಲ್ಲದೆ ಮಾನವನ ಎಲ್ಲ ಸುಖಾಭಿವೃದ್ಧಿಗಾಗಿ ಬಳಸಿಕೊಳ್ಳಬೇಕೆಂದೂ ಅವರ ಅಭಿಪ್ರಾಯವಿತ್ತು. ಅನುಪಯುಕ್ತ ಸೂಕ್ಷ್ಮ ವಿಷಯಗಳನ್ನರಿತುಕೊಳ್ಳುವುದಕ್ಕೇ ಅದನ್ನು ಉಪಯೋಗಿಸದೆ, ಸೃಷ್ಟಿಯ ಬಗೆಬಗೆಯ ಚಮತ್ಕೃತಿಗಳನ್ನರಿತುಕೊಳ್ಳಲು

ಅದನ್ನು ಉಪಯೋಗಿಸಬೇಕೆಂದು ಅವರು ಉಪದೇಶಿಸುತ್ತಿದ್ದರು. ಇದುವೆ 'ಸ್ವಾಭಾವಿಕ ವಿಜ್ಞಾನ' (ಸೃಷ್ಟಿವಿಜ್ಞಾನ) (Natural science)ದ ಹುಟ್ಟಿಗೆ ಕಾರಣ. ಹೀಗೆ ಸೆಮೆಟಿಕ್ ಜನಾಂಗದ ವ್ಯಾವಹಾರಿಕ ಬುದ್ಧಿಯು ಜಗತ್ತಿಗೆ ಮಾರ್ಗದರ್ಶಿಯಾಗಿ ಜಗತ್ತಿನ ಪ್ರಗತಿಗೆ ಕಾರಣವಾಯಿತು. ಧಾರ್ಮಿಕ ಯುದ್ಧಕ್ಕಾಗಿ ಹೋದವರು ತಮ್ಮ ಶತ್ರುಗಳಿಂದ ಅಪಾರ ಬೆಲೆ ಬಾಳುವ ಜ್ಞಾನಭಾಂಡಾರವನ್ನೇ ತಂದರು. ಇದನ್ನೇ ಅವರ ವಂಶಜರು ವೃದ್ಧಿಗೊಳಿಸಿ, ಅಚ್ಚರಿಗೊಳಿಸುವ ಕೃತಿಗಳನ್ನು ಮಾಡುವುದಕ್ಕೆ ಉಪಯೋಗಿಸಿಕೊಂಡರು.

ಹದಿಮೂರನೆಯ ಶತಮಾನದಲ್ಲಿ ರೋಜರ ಬೇಕನ್(೧೨೧೪-೧೨೯೪), ಆಲ್ಬರ್ಟಸ್ ಮ್ಯಾಗ್ನಸ್ (೧೧೯೩-೧೨೮೦) ಮುಂತಾದವರ ಮುಖಾಂತರ ಹೊಸ ಬೆಳಕು ತೋರಹತ್ತಿತು. ಮಧ್ಯಮ ಯುಗದ ಪೂರ್ವ ಭಾಗದಲ್ಲಿ ಬುದ್ಧಿಮತ್ತೆಯನ್ನು ಕುಗ್ಗಿಸುವಂತಿದ್ದ ಪ್ರತಿಬಂಧಕವು ಈಗ ದೂರ ಮಾಡಲ್ಪಟ್ಟಿತು.

ಅಸಂಖ್ಯ ತಜ್ಞರು ಹೊಸಮಾರ್ಗವನ್ನು ಹಿಡಿದರು. ಜಯದ ಮೇಲೆ ಜಯವು ಉಂಟಾಗಹತ್ತಿತು. ಅನೇಕ ಸಂಶೋಧನಗಳು ನಡೆದವು. ಅವುಗಳ ಸಾರಾಂಶವನ್ನು ಕೆಳಗೆ ಕೊಟ್ಟಿದೆ.

ಹದಿಮೂರನೆ ಶತಮಾನದಲ್ಲಿ ರೋಜರ ಬೇಕನ್‌ನಿಂದ ವಿಸ್ತೃತಗೊಳಿಸುವ ಕನ್ನಡಿಗಳೂ (Magnifying glasses), ಕನ್ನಡಕಗಳೂ ಸಂಶೋಧಿಸಲ್ಪಟ್ಟವ. ಹದಿನಾಲ್ಕನೆ ಶತಮಾನದಲ್ಲಿ ಮದ್ದನ್ನು ಹುಡಿಕಿ ತೆಗೆದು, ಜಗತ್ತನ್ನು ತನ್ನ ಸ್ವಾಧೀನದಲ್ಲಿಟ್ಟುಕೊಳ್ಳಬೇಕೆಂಬ ಮಾನವನ ಹೆಗ್ಗುರಿಯ ಸಾಧನೆಯಲ್ಲಿ ಇದು ಮೂರನೆಯ ಹೆಜ್ಜೆ. ಬೆಂಕಿಯನ್ನು ಸ್ವಾಧೀನಪಡಿಸಿಕೊಂಡುದೂ, ಧಾತುಗಳ ಉಪಯೋಗವನ್ನರಿತುಕೊಂಡುದೂ ಮೊದಲಿನ ಎರಡು ಹೆಜ್ಜೆಗಳು. ತಂತೆಯನ್ನೆಳೆಯುವದು, ನಾರಿನಿಂದ ಕಾಗದ ಮಾಡುವುದು, ಕಟ್ಟಿಗೆಯಲ್ಲಿ ಕೆತ್ತನೆಯ ಕೆಲಸ, ಕಂಪಾಸು, ತೋಫು, ಒಂದೂಕು ಮೊದಲಾದವು ಹದಿನಾಲ್ಕನೆ ಶತಮಾನದ ಬೇರೆ ಸಂಶೋಧನಗಳು. ಹದಿನೈದನೆಯ ಶತಮಾನದಲ್ಲಿ ಮುದ್ರಣ ಕಲೆ ಸುರುವಾಯಿತು. ಅಮೇರಿಕೆಯನ್ನು ಹುಡಿಕಿ ತೆಗೆದುದೂ ಒಂದು ಸಂಶೋಧನದಲ್ಲಾದ ಮುನ್ನಡೆಯೆಂದೇ ಭಾವಿ

ಸಬೇಕು. ಇದರಿಂದ ಮಾನವನು ಜ್ಯೋತಿಶ್ಶಾಸ್ತ್ರದಲ್ಲಿ ಮಾಡಿದ ಪ್ರಗತಿಯು ಸೂಚಿತವಾಗುತ್ತದೆ. ಹದಿನೈದನೆಯ ಶತಮಾನದ ಇನ್ನುಳಿದ ಸಂಶೋಧನಗಳೆಂದರೆ ತಾಮ್ರದ ಮೇಲೆ ಚಿತ್ರಗಳನ್ನು ಕೊರೆಯುವದು, ಹೊಳಪಿನ ಸುಣ್ಣಪಾದ ಮಣ್ಣಿನ ಪಾತ್ರೆಗಳು, ಕಾಜಿನ ಸೀಸೆಗಳು, ಸೀಸ ಕಾಲುವೆ ಮುಂತಾದವು. ಹದಿನಾರನೆ ಶತಮಾನದಲ್ಲಿ, ಕಾಲುಚೀಲಗಳನ್ನು ಹೆಣೆಯುವದು, ಕಟ್ಟಿಗೆ ಕೊರೆಯುವ ಯಂತ್ರಗಳು, ಗಡಿಯಾರಗಳು, ಸೂಕ್ಷ್ಮದರ್ಶಕ ಯಂತ್ರಗಳು ಉಂಟಾದವು. ದೂರದರ್ಶಕ ಯಂತ್ರ, ಹವೆಯ ಭಾರ ಮಾಪಕ ಯಂತ್ರ, ಗಾಳಿಯ ಪಂಪು, ಪೆಂಡ್ಯುಲಮ್‌ವುಳ್ಳ ಗಡಿಯಾರ ಮುಂತಾದವೂ, ಹದಿನೆಂಟನೆಯ ಶತಮಾನದಲ್ಲಿ ಮೊದಲನೆಯ ಉಗಿಹಡಗ (೧೭೦೭), ಅಕ್ಷರದ ಮೊಳೆಗಳನ್ನು ತಯಾರಿಸುವ ಯಂತ್ರ (೧೭೨೪), ಮುಂತಾದವು ನಿರ್ಮಿಸಲ್ಪಟ್ಟವು.

ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ದೊಡ್ಡ ದೊಡ್ಡ ಔದ್ಯೋಗಿಕ ಯಂತ್ರಗಳು ನಿರ್ಮಿಸಲ್ಪಟ್ಟವು. ಇದರಿಂದ ವಿಜ್ಞಾನದಲ್ಲಿಯೂ ವಸ್ತು ನಿರ್ಮಾಣದಲ್ಲಿಯೂ ಕ್ರಾಂತಿಯುಂಟಾಯಿತು. ಇದು ಬಂಡವಲುಗಾರಿಕೆಗೆ ಪ್ರೋತ್ಸಾಹವನ್ನಿತ್ತಿತು. ಆದರಿಂದ ಜಗತ್ತಿನ ಸಂಸ್ಕೃತಿಯ ಸ್ವರೂಪವೇ ಬದಲಾಗಿ ಮತ್ತೊಂದು ನವಯುಗವೇ ಪ್ರಾರಂಭವಾಯಿತು.

ಕೆಳಗಿನ ಸಂಶೋಧನಗಳಿಗೆ ವಿಶೇಷ ಮಹತ್ವವಿದೆ:— ೧. ನೂಲುವ ಯಂತ್ರ ೧೭೬೪—೧೭೬೫ ಆರ್ಕರಾಯಿಟನಿಂದ; ೨. ಉಗಿಯಂತ್ರ ೧೭೬೫–೧೭೮೪ 'ವ್ಯಾಟ್ಟ' ನಿಂದ; ೩. ಯಾಂತ್ರಿಕ ಮಗ್ಗ ೧೭೮೫ 'ಕಾರ್ಟರಾಯಿಟ' ನಿಂದ; ೪. ಕಾಗದ ಮಾಡುವ ಯಂತ್ರ ೧೭೯೯ 'ಕೆಂಬರ್ಟ' ನಿಂದ. ಇವೆಲ್ಲವುಗಳಲ್ಲಿ ಉಗಿಯಂತ್ರವು ಅಪಾರ ಶಕ್ತಿಯುಳ್ಳದ್ದು. ಮಾನವನ ಪರಿಶ್ರಮವಿಲ್ಲದೆ ಇದು ಎಲ್ಲ ಯಂತ್ರಗಳನ್ನು ನಡೆಸಬಲ್ಲದು. ಎಷ್ಟು ಜನರ ಪ್ರಯತ್ನದಿಂದಲೂ ಅಸಾಧ್ಯವಾದ ಶಕ್ತಿಯನ್ನು ನಿರ್ಮಿಸಬಲ್ಲದು. ಮುಂದೆ ೧೮ನೇ ಶತಮಾನದಲ್ಲಿ ಬಿತ್ತುವುದಕ್ಕೂ ಒಕ್ಕುವದಕ್ಕೂ ಬೇಕಾಗುವ ಯಂತ್ರಗಳು, ಕಾಯಿಗಳಿಂದ ನಿಪ್ಪಿಯನ್ನೂ, ಕಾಳುಗಳಿಂದ ತವುಡನ್ನೂ ಬೇರ್ಪಡಿಸುವ ಯಂತ್ರಗಳು, ದೀಪಗಳಿಗೆ ಕಾಚಿನ ಪಾವುಗಳು ಸಿದ್ಧವಾದವು. ೧೭೮೦ರಲ್ಲಿ ಗ್ಯಾಲ್ವ್ಯಾನಿಜಮ್, ೧೭೭೪ರಲ್ಲಿ ಆಕ್ಸಿಜನ್ ಮುಂತಾದವುಗಳನ್ನು ಕಂಡು

ಹಿಡಿದರು. ಇದು ಆಧುನಿಕ ರಸಾಯನ ಶಾಸ್ತ್ರಕ್ಕೆ ಪೂರ್ವಪೀಠಿಕೆಯಾಯಿತು. ೧೯ನೆ ಶತಮಾನದಲ್ಲಿ ಕಲ್ಲಿದ್ದಲಿಯಿಂದ ಗ್ಯಾಸು (೧೮೦೩), ಫಾಸ್ಫೊರಸ್ ಕಡ್ಡಿಪೆಟ್ಟಿಗೆಗಳು, ಮಾರ್ಫಿಯಾ ಮುಂತಾದವು (೧೮೦೫), (೧೮೧೧) ಕೊಯ್ಯುವ ಯಂತ್ರ, (೧೮೧೪) ಹೊಲಿಯುವ ಯಂತ್ರ, (೧೮೨೮) ಛಾಯಾಚಿತ್ರದ ಯಂತ್ರ, (೧೮೨೯) ಪ್ರಯಾಣ ಯಂತ್ರ, (೧೮೩೦) ಉಗಿಬಂಡಿ, (೧೮೩೩) ತಂತಿ, (೧೮೪೨) ಕೃತ್ರಿಮ ಗೊಬ್ಬರ, (೧೮೪೭) ಕ್ಲೊರೊಫಾರ್ಮ್, (೧೮೬೧) ಟೆಲಿಫೋನ, (೧೮೬೭) ಡಾಯನೆಮೊ ಯಂತ್ರ ಮುಂತಾದವು ನಿರ್ಮಿಸಲ್ಪಟ್ಟವು.

ಪ್ರತಿವರುಷವೂ ಅನೇಕ ಸಂಶೋಧನಗಳಾಗುತ್ತವೆ. ಜಗತ್ತು ಎಡೆಬಿಡದೆ ಮುಂದೆ ಸಾಗುತ್ತಲಿದೆ. ಮಾನವ ಸಂಸ್ಕೃತಿಯು ಪ್ರಗತಿಪರವಿದೆ, ಎಂಬುದು ಪ್ರತಿದಿನವೂ ನಮಗೆ ಗೋಚರವಾಗುತ್ತದೆ. ಉತ್ಕ್ರಾಂತಿಯ ಪ್ರವಾಹವನ್ನು ನಿರೀಕ್ಷಿಸುತ್ತಲಿರುವ ಪ್ರತಿಯೊಬ್ಬನೂ ಮಾನವನ ಅಪಾರ ಶಕ್ತಿಯು ಭವಿಷ್ಯದಲ್ಲಿ ಯಾವ ಯಾವ ಸಂಶೋಧನಗಳನ್ನು ಮಾಡಬಲ್ಲದೆಂಬುದನ್ನು ವಿಚಾರಿಸಿದರೆ ದಂಗುಗೊಳ್ಳುವಂತಿದೆ. ವಿಮಾನ, ಧ್ವನಿವಾಹಕ ಯಂತ್ರ, ಬಾನುಲಿ ಮುಂತಾದ ಈ ಹೊತ್ತಿನ ಯಂತ್ರಗಳನ್ನು ನೋಡಿದರೆ ಮುಂದೆ ಮಾನವನು ಏನನ್ನು ಕಂಡುಹಿಡಿಯಬಹುದೆಂಬುದನ್ನು ಕಲ್ಪಿಸುವುದೂ ಅಸಾಧ್ಯವಾಗುತ್ತದೆ.

ನಮ್ಮ ಈಗಿನ ಜ್ಞಾನವು, ಪರಿಶ್ರಮವನ್ನು ಮಾನವನಿಂದ ಯಂತ್ರಕ್ಕೆ ಸ್ಥಳಾಂತರಿಸಿದೆ. ದಿನಚರಿಯ ಪ್ರತಿಯೊಂದು ಕೆಲಸದಲ್ಲಿಯೂ ಮಾನವನು ಯಂತ್ರಗಳ ಸಹಾಯ ಪಡೆಯುತ್ತಲಿದ್ದಾನೆ. ಹೀಗೆ ಯಂತ್ರಗಳು ಪ್ರತಿದಿನದ ಎಲ್ಲ ಕೆಲಸಗಳನ್ನು ಮಾಡುತ್ತಿರಲು ಮಾನವನು ತನ್ನ ವಿರಾಮವನ್ನು ಜ್ಞಾನವನ್ನು ಸಂಪಾದಿಸಲು ಸಹಜವಾಗಿ ಉಪಯೋಗಿಸಬಹುದು.

**ಉಪಕರಣಗಳ ಮುಂದಿನ ರೂಪಗಳು ಮತ್ತು ಅವುಗಳ ಬೆಳೆವಣಿಗೆ:**— ಮೊದಲಿನ ಉಪಕರಣಗಳು ಸ್ವಾಭಾವಿಕ ವಸ್ತುಗಳಿಂದಲೇ ಉಂಟಾದಂಥವು. ಸೃಷ್ಟಿಯೊಳಗೆ ಕಲ್ಲು, ಗಿಡಗಂಟಿಗಳು, ಪ್ರಾಣಿಗಳು ಉಪಲಬ್ಧವಾಗುತ್ತಿದ್ದವು.

೧. ಕಲ್ಲು ತನ್ನ ಸ್ವಾಭಾವಿಕ ಸ್ಥಿತಿಯಲ್ಲಿಯೇ ಬಾಣದಂತಾಗಲೀ

ಅಥವಾ ಜೋರಿನಿಂದ ಹೊಡೆಯುವದಕ್ಕಾಗಲಿ ಉಪಯೋಗಿಸಲ್ಪಡುತ್ತಿತ್ತು. ಬಿರುಸು ಪದಾರ್ಥಗಳನ್ನು ಒಡೆಯಲಿಕ್ಕೆ ಕಲ್ಲನ್ನು ಉಪಯೋಗಿಸುತ್ತಿದ್ದರು. ಇದರಿಂದ ಬಿರುಸಾದ ಒಂದು ಕಲ್ಲಿನಿಂದ ಬೇರೆ ಕಲ್ಲುಗಳನ್ನು ಒಡೆಯುವದು ಸಾಧ್ಯವಿದೆಯೆಂದು ಕಂಡುಬಂದಿತು. ಕಲ್ಲುಗಳನ್ನು ಒಡೆಯುವಾಗ ಹದನವಾದ ಚೂಪಾದ ತುದಿಗಳುಂಟಾಗುವಂತೆ ಒಡೆಯುತ್ತಿದರು. ಹೀಗೆ ಚಾಕು, ಕರಗಸ, ಉಳಿ, ಸುತ್ತಿಗೆ, ಕೊಡಲಿ, ಮುಂತಾದವುಗಳಂತಹ ಆಯುಧಗಳ ನಿರ್ಮಾಣವಾಯಿತು. ಒರಟುತನ್ನ ಹದನವಾದ ಬಾಯುಳ್ಳ ಉಪಕರಣವು ಕೊರೆಯಲಿಕ್ಕೂ, ಚೂಪಾದುದು ತೂತನ್ನು ಕೊರೆಯುವದಕ್ಕೂ ಉಪಯುಕ್ತವಾಗುತ್ತವೆಂದು ಕಂಡುಬಂದಿತು.

೨. ಗಿಡಗಂಟಿಗಳಿಂದ ಮಾಡಲ್ಪಟ್ಟ ಆಯುಧೋಪಕರಣಗಳು ಸ್ವರೂಪದಲ್ಲಿ ಹೆಚ್ಚು ವೈವಿಧ್ಯವನ್ನು ತಾಳಿದ್ದವು. ಗಿಡದ ಟೊಂಗೆಗಳನ್ನೂ, ಹರಿಗಳನ್ನೂ ಬೊಡ್ಡಿಗಳನ್ನೂ ಕಂಟಿಬಳ್ಳಿಗಳನ್ನೂ ಮುಳ್ಳುಗಳನ್ನೂ ಜನರು ಉಪಯೋಗಿಸುತ್ತಿದ್ದರು. ಗಿಡದ ಟೊಂಗೆಯು ಹೊಡೆಯುವದಕ್ಕೆ, ಒಗೆಯುವದಕ್ಕೆ ಅಥವಾ ಅಗಿಯುವದಕ್ಕೆ ಒರುತ್ತಿತ್ತು. ಮುಂದೆ ಅದು ಒರ್ಚಿ, ಹುಟ್ಟು, ರಂಟೆ, ಊದುಗೊಳವೆ, ಬಿಲ್ಲು ಬಾಣ ಮುಂತಾದ ರೂಪಾಂತರಗಳನ್ನು ಹೊಂದಿತು. ಬಿಲ್ಲಿನ ನಿರ್ಮಾಣದ ಬಗ್ಗೆ ಅನೇಕ ಊಹಾಪೋಹಗಳಿರುತ್ತವೆ. ಬೆಂಕಿಯನ್ನು ಹುಟ್ಟಿಸಲು ಒಂದು ಚೂಪಾದ ಕಟ್ಟಿಗೆಯನ್ನು ಒಳ್ಳೇ ಜೋರಿನಿಂದ ತಿರುಗಿಸುತ್ತಿರುವಾಗ ಈ ಬಿಲ್ಲಿನ ವಿಚಾರ ಹೊಳೆಯಿತೆಂದು ಕೆಲವರ ಮತ. ಕಟ್ಟಿಗೆಯ ಒಂದು ತುದಿಯಿಂದ ಮತ್ತೊಂದು ತುದಿಗೆ ದಾರವನ್ನು ಬಿಗಿಯಾಗಿ ಕಟ್ಟಿ ಅದನ್ನು ಮೀಟಿದರೆ ಅದರಿಂದುಂಟಾಗುವ ಇಂಪಾದ ಸ್ವರಗಳು ಮಾನವರ ಚಿತ್ತಾಕರ್ಷವನ್ನು ಮಾಡಿದವೆಂದು ಮತ್ತೆ ಕೆಲರ ಅಭಿಪ್ರಾಯ. ನಿಗ್ರೋ ಜನರು ಒಂದೇ ಬಿಗಿಯಾಗಿ ಜಗ್ಗಲ್ಪಟ್ಟ ದಾರವನ್ನು ಅನೇಕ ತಾಸುಗಳ ವರೆಗೆ ಎಳೆದೆಳೆದು ದಣಿಯದೆ ಅದರಿಂದುಂಟಾಗುವ ಶಬ್ದವನ್ನು ಕೇಳುತ್ತಾರೆಂದು ಪ್ರವಾಸಿಕರು ಹೇಳುತ್ತಾರೆ.

ನಮ್ಮ ಸುಧಾರಿಸಿದ ಕಿವಿಗಳು, ಕಗ್ಗವೆಂದು ಜರಿಯಬಹುದಾದ ಇಂತಹ ಸಪ್ಪಳವನ್ನು ಮಾನವನು ಕೇಳಿ ಸುಖಬಡುವಾಗಲೇ ಬಿಲ್ಲಿನ ಸಂಶೋಧನವಾಗಿದ್ದಿತು. ಏನಿದ್ದರೂ ತೂತು ಕೊರೆಯುವ ಉಪಕರಣಗಳು, ಗುಂ

ಹೊಡೆಯುವ ಬಿಲ್ಲುಗಳು, ದಾರಗಳುಳ್ಳ ವಾದ್ಯಗಳು ಒಂದಕ್ಕೊಂದು ತೀರ ಸಂಬಂಧಿಸಿವೆ ಎಂಬುದು ಸ್ಪಷ್ಟ.

ಬುನಾದಿಕಾಲದ ಉಪಕರಣಗಳಲ್ಲಿ ಕಂಡುಬರುವ ಕಟ್ಟಿಗೆ-ಕಲ್ಲುಗಳ ಸಂಯೋಗವೇ—ಕಟ್ಟಿಗೆಯ ಹಿಡಿಕೆಯಲ್ಲಿ ಕಲ್ಲಿನ ಆಯುಧವನ್ನು ಕೂಡಿಸುವುದು—ಸಂಯುಕ್ತ ಉಪಕರಣಗಳೂ ಆಯುಧಗಳೂ ಉಂಟಾಗುವುದಕ್ಕೆ ಕಾರಣವಾಯಿತು. ಉದಾಹರಣೆ—ಕಲ್ಲಿನ ಕೊಡಲಿ, ಕಲ್ಲಿನ ಗದೆ, ಕಲ್ಲಿನ ಸುತ್ತಿಗೆ, ಕಲ್ಲಿನ ತುದಿಯುಳ್ಳ ಬರ್ಚಿ ಬಾಣ ಮುಂತಾದವು.

ಮೊಟ್ಟಮೊದಲಿನ ಹೆಣಿಕೆಯ ಕೆಲಸವನ್ನು ಮಂಗಗಳು ಗಿಡಗಳ ಟೊಂಗೆಗಳಿಂದ ಕಂಟಿಗಳಿಂದ ಮಾಡಿದವು. ಕೆಲವೊಂದು ಪಕ್ಷಿಗಳು ತಮ್ಮ ಗೂಡುಗಳನ್ನು ಗಿಡಗಳ ಟೊಂಗೆಗಳನ್ನು ಟಿಸಿಲುಗಳನ್ನು ಒಂದನ್ನೊಂದು ಕೂಡಿಸಿ ಹೆಣೆದು ಮಾಡಿಕೊಳ್ಳುತ್ತವೆ. ಜರಬರುತ್ತ ಈ ಜ್ಞಾನವೇ ಜಾಳಿಗೆಗಳನ್ನು, ಕವಣೆಗಳನ್ನು, ಬಲಿಗಳನ್ನು, ಹೆಣಿಕೆಯ ಪಾತ್ರೆಗಳನ್ನು, ಬುಟ್ಟಿಗಳನ್ನು, ನೂಲುವುದನ್ನು ನೇಯುವುದನ್ನು ಪ್ರಚಾರದಲ್ಲಿ ತಂದಿತು. ಹೆಣೆದ ಬುಟ್ಟಿಯನ್ನು ಬೆಂಕಿಗೆ ಆಹುತಿಯಾಗಬಾರನೆಂದು ಮಣ್ಣಿನಿಂದ ಸಾರಿಸಿ ಇಡುತ್ತಿದ್ದರು. ಇದರಿಂದಲೇ ಮುಂದೆ ಪಾತ್ರೆಗಳ ನಿರ್ಮಾಣವು ಸುರುವಾಯಿತು.

ಮರದಲ್ಲಿ ಎರಡು ಗುಣಗಳಿರುತ್ತವೆ. ಅದು ತೇಲುತ್ತದೆ ಮತ್ತು ಉರುಳುತ್ತದೆ. ಆದುದರಿಂಲೇ ಅದರಿಂದ ಹಡಗು ಮತ್ತು ಗಾಡಿಗಳು ನಿರ್ಮಿಸಲ್ಪಟ್ಟವು.

ಬುನಾದಿಕಾಲದ ಹಡಗು ಈಗಲೂ 'ಹೊಟೆಂಟೋಟ್ಸ' ಎಂಬ ಜನರ ಬಳಿ ಕಂಡುಬರುತ್ತದೆ. ಅವರು ನೀರಿನಲ್ಲಿ ಗಿಡದ ಬೊಡ್ಡೆಗಳ ಮೇಲೆ ಪ್ರವಾಸ ಮಾಡುತ್ತಾರೆ. ಅವುಗಳನ್ನು ಬಹು ಪ್ರಯಾಸದಿಂದ ಕೈಗಳಿಂದಲೂ ಕಾಲುಗಳಿಂದಲೂ ತಿರುಗಿಸುತ್ತಿದ್ದರು. ಆಮೇಲೆ ಸುಟ್ಟು ಪೊಳ್ಳು ಮಾಡಲ್ಪಟ್ಟ ಗಿಡದ ಬೊಡ್ಡೆಯು ನಾವೆನಂತೆ ಉಪಯೋಗಿಸಲ್ಪಡಹತ್ತಿತು. ಹುಟ್ಟುಗಳಿಂದಲೂ, ಚುಕ್ಕಾಣಿಯ ಸಹಾಯದಿಂದಲೂ ಇದನ್ನು ನಡೆಸುತ್ತಿದ್ದರು. ದೊಡ್ಡ ದೊಡ್ಡ ಡೋಣಿಗಳು ಬೇಕೆನ್ನಿಸಿದಾಗ ಪಕ್ಕೆಲವುಗಳನ್ನು ಜೋಡಿಸಿ ಅದಕ್ಕೆ ಡೋಣಿಯ ಆಕಾರವನ್ನುಂಟುಮಾಡಿ ತೊಗಟೆಯ ಅಥವಾ ಚರ್ಮದ ಹೊದಿಕೆ ಹಾಕಿ ಉಪಯೋಗಿಸುತ್ತಿದ್ದರು.




ಉಪಕರಣಗಳ ಬುನಾದಿ ಕಾಲದ ಸ್ವರೂಪಗಳು ಮತ್ತು ಅವುಗಳ ಬೆಳವಣಿಗೆಯ ಪಟ್ಟಿ (ಕೆಳಗಿನಿಂದ ಮೇಲಕ್ಕೆ ಓದಬೇಕು)

ಮರದ ಬೇರೆ ಉಪಯೋಗವೆಂದರೆ ಉಳಕಗಳನ್ನು ಮಾಡಿ ಅವುಗಳ ಸಹಾಯದಿಂದ ಭಾರವನ್ನು ಒಯ್ಯುವದು. ಆ ಮೇಲೆ ಗಾಲಿಗಳನ್ನೂ ಅಚ್ಚನ್ನೂ ಒಂದು ಅಖಂಡ ಕಟ್ಟಿಗೆಯ ತುಂಡಿನಲ್ಲಿ ಮಾಡಿ ಅವುಗಳ ಸಹಾಯದಿಂದ ಒಜ್ಜೆಗಳನ್ನು ಸ್ಥಳನಿಂದ ಸ್ಥಳಕ್ಕೆ ಒಯ್ಯುತ್ತಿದ್ದರು. ಗಡ್ಡೆ ಹಲ್ಲುಗಳಿಂದ ಕೂಡಿದ ಗಾಲಿಗಳು ನಂತರ ನಿರ್ಮಿಸಲ್ಪಟ್ಟವು.

೩. ಪ್ರಾಣಿ ಸಾಮ್ರಾಜ್ಯದಿಂದ ದೊರೆತ ವಸ್ತುಗಳಿಂದ ಹೊಸ ಉಪಕರಣಗಳೇನೂ ಉಂಟಾಗದಿದ್ದರೂ, ಅವು ಕಲ್ಲು ಮತ್ತು ಗಿಡಗಂಟಿಗಳಿಂದ ಉಂಟಾದ ವಸ್ತುಗಳ ಸಂಖ್ಯೆಯನ್ನು ಬಹು ವಿಧವಾಗಿ ಹೆಚ್ಚಿಸಿದವು. ಕಟ್ಟಿಗೆ-ಕಲ್ಲಿನಿಂದ ನಿರ್ಮಿಸಬಹುದಾದ ವಸ್ತುಗಳನ್ನೇ, ದಂತ, ಎಲುವು, ಕೋಡು, ನಖ ಮುಂತಾದವುಗಳಿಂದ ಹೆಚ್ಚು ಅಂದವಾಗಿ ಕಾಣುವಂತೆ ನಿರ್ಮಿಸಬಹುದಾಗಿತ್ತು. ಪ್ರಾಣಿಗಳ ಚರ್ಮದಿಂದಲೇ ಮಾನವನ ಹೊದಿಕೆ ತೊಗಲಿನ ಚೀಲಗಳು, ಮುಂತಾಗವು ಉಂಟಾದವು. ಇಂತಹ ಚೀಲಗಳ ಸಹಾಯದಿಂದಲೇ ಅವನು ತನ್ನ ಅನೇಕ ವಸ್ತುಗಳನ್ನು ಸ್ಥಳಾಂತರಿಸಬಹುದಾಗಿತ್ತು. ಸಾಮಾನ್ಯ ಕೋಲಿನಿಂದ ತುಬಾಕಿಯೂ, ಮರದಿಂದ ಓಡಾಡುವ ಗಾಡಿಗಳೂ ಉಂಟಾದುದು ಮಾನವನ ಬುದ್ಧಿಪೂರ್ವಕ ಪ್ರಯತ್ನದಿಂದಲ್ಲ. ಅನೇಕ ಉಪಕರಣಗಳು ಮಾನವನಿಗೆ ತನ್ನ ದಿನ ಕರ್ಮದಲ್ಲಿ ಅಕಸ್ಮಾತ್ತಾಗಿ ಸೂಚಿತವಾಗಿರುತ್ತವೆ. ಅವು ಮುಂದೆ ವಂಶಪರಂಪರವಾಗಿ ಬೆಳೆದು ಪರಿಪೂರ್ಣತೆಯನ್ನು ಪಡೆದಿರುತ್ತವೆ. ಕೆಳಗೆ ಕೊಟ್ಟ ಪತ್ರಿಕೆಯ ಸಹಾಯದಿಂದ ಉಪಕರಣಗಳ ಹುಟ್ಟುವಳಿಯನ್ನರಿತುಕೊಳ್ಳಬಹುದು.

—

**ಆರನೆಯ ಮೆಟ್ಟಲು**

## ಹೊದಿಕೆಯ ವಿಕಾಸಕ್ರಮ

## ನಗ್ನಾವಸ್ಥೆ ಮತ್ತು ಹೊದಿಕೆ



**ನಗ್ನಾವಸ್ಥೆ:** ಮಾನವನ ಈ ಸ್ವಾಭಾವಿಕ ಮತ್ತು ಮೊಟ್ಟಮೊದಲಿನ ಸ್ಥಿತಿ ಈಗಲೂ ಜಗತ್ತಿನ ವಿವಿಧ ಭಾಗಗಳಲ್ಲಿ, ವಿಶೇಷತಃ ಉಷ್ಣಕಟಿಬಂಧ

ದಲ್ಲಿ ಪ್ರಾಕೃತಿಕ ಜನರಲ್ಲಿ ಕಂಡುಬರುತ್ತದೆ. ಇವರಲ್ಲಿ ಮುಖ್ಯರಾದವರೆಂದರೆ ಆಸ್ಟ್ರೇಲಿಯದ ಕಾಡು ಜನರು, ಅಂದಮಾನ ನಡುಗಡ್ಡೆಯವರು, ಬೋರ್ನಿಯೊ, ಈಸ್ಟರ ನಡುಗಡ್ಡೆ ಮುಂತಾದವುಗಳಲ್ಲಿಯ ನಿವಾಸಿಗಳು.

ಎಸ್ಕಿಮೋ ಜನರು ಭೂಮಿಯೊಳಗೆ ಪೊಳ್ಳು ಮಾಡಕೊಂಡಿರುವಾಗ ಯಾವ ಹೊದಿಕೆಯನ್ನೂ ಹೊದ್ದುಕೊಂಡಿರುತ್ತಿರಲಿಲ್ಲ. ನಗ್ನಾವಸ್ಥೆಯು ಆಫ್ರಿಕೆಯ ಉಷ್ಣಕಟಿಬಂಧದಲ್ಲಿ ವಿಶೇಷವಾಗಿರುತ್ತದೆ. 'ಬಲೊಂದಾ'ದ ರಾಣಿಯು ಲಿವ್ಹಿಂಗ್ಸ್ಟನ್ನನಿಗೆ ಬೆಟ್ಟಿಯಾದಾಗ ನಗ್ನಾವಸ್ಥೆಯಲ್ಲಿದ್ದಳು. 'ಕಿಸ್ಸಾಮಾ'ದ ನಿಗ್ರೋ ಸ್ತ್ರೀಯರು ಸಮಾರಂಭಗಳಿಗೆ ಅದೇ ಅವಸ್ಥೆಯಲ್ಲಿ ಬರುತ್ತಿದ್ದರು. ಅಮೇರಿಕೆಯ ಇಂಡಿಯನ್ನರಲ್ಲಿಯೂ ಅನೇಕ ತಂಡಗಳು ಯಾವ ಹೊದಿಕೆಯನ್ನೂ ಹೊದ್ದುಕೊಂಡಿರುತ್ತಿರಲಿಲ್ಲ. ಬಹಾಮಾ ನಡುಗಡ್ಡೆಗಳಲ್ಲಿಯ, ವ್ಹೆನೆಝುಯಲಾ ಮತ್ತು ಗಿಯಾನಾಗಳಲ್ಲಿಯ ಅನೇಕ ಕಾಡು ಜನರು ಬಟ್ಟೆ ಇಲ್ಲದೆ ಇರುವದನ್ನು ಸ್ಪೇನದ ಜನರು ಕಂಡಿದ್ದರು. ಒರಿನೋಕೋದಲ್ಲಿಯ ಕೆಲವು ಇಂಡಿಯನ್ನರು ಬಟ್ಟೆ ಹೊದ್ದುಕೊಳ್ಳಲು ನಾಚುತ್ತಿದ್ದರು. ಆದರೂ ಪರಕೀಯರ ಎದುರಿನಲ್ಲಿ ಬರುವಾಗ ಬಣ್ಣ ಬಡೆದುಕೊಳ್ಳದೆ ಬರುವುದು ಅಯೋಗ್ಯವೆಂದು ಅವರು ಭಾವಿಸುತ್ತಿದ್ದರು.

ಜಗತ್ತಿನಲ್ಲಿ ಪ್ರಾಕೃತಿಕ ಸ್ಥಿತಿಗಿಂತಲೂ ಬಹು ಮೇಲಕ್ಕೇರಿದವರೂ, ಅನೇಕ ಸುಧಾರಿಸಿದ ರೀತಿ ನಡಾವಳಿಗಳುಳ್ಳವರೂ ಕೆಲವರಿದ್ದರು. ಅವರಲ್ಲಿಯೂ ಕೂಡ ನಗ್ನಾವಸ್ಥೆ ಬಳಕೆಯಲ್ಲಿದ್ದಿತು. ಹಿಂದುಸ್ತಾನದ ಪೂರ್ವಕಾಲದ ಶಿಲ್ಪಿಗರ ಕೆಲಸದಲ್ಲಿ ನಗ್ನ ಸ್ತ್ರೀ ಪುರುಷರನ್ನು ಕಾಣಬಹುದು. ಫರ್ಗೂಸನ್‌ನು ಹೇಳುವಂತೆ ಹಿಂದುಸ್ಥಾನವನ್ನು ಮುಸಲ್ಮಾನರು ಆಕ್ರಮಿಸುವ ವರೆಗೂ ನಗ್ನಾವಸ್ಥೆಯು ಜನರ ನೀತಿಗೆ ವಿರೋಧಕವಾಗುವಂತೆ ತೋರುತ್ತಿರಲಿಲ್ಲ.

ಪ್ರಾಚೀನ ಇಜಿಪ್ತದ ಚಿತ್ರಗಳಲ್ಲಿಯೂ ಶಿಲ್ಪಕಲೆಯಲ್ಲಿಯೂ ಇದನ್ನೇ ಕಾಣಬಹುದು. ಅರಸನು ಸಭೆಯ ಮುಂದೆ ತಲೆಯಮೇಲೆ ಒಂದು ದೊಡ್ಡ ಮುಕುಟದೊಡನೆ, ಮೈಮೇಲೆ ಒಂದು ಟೊಂಕಕ್ಕೆ ಸುತ್ತಿದ ಒಟ್ಟೆಯ ಹೊರತು ಮತ್ತೇನಿಲ್ಲದೆ ಬರುತ್ತಿದ್ದನು. ದೊಡ್ಡ ದೊಡ್ಡ ಮನೆತನದ ಸ್ತ್ರೀಯರು ಬಹು ತೆಳುವಾದ, ಮೈ ಸ್ಪಷ್ಟವಾಗಿ ಕಾಣುವಂತಿರುವ ಬಟ್ಟೆಗಳನ್ನು

ಹೊದ್ದುಕೊಂಡು ಬರುತ್ತಿದ್ದರು. ಇಂತಹ ಬಟ್ಟೆಯನ್ನು ಹೊದ್ದುಕೊಳ್ಳು ವದೆಂದರೆ ಕೇವಲ ಅಲಂಕಾರವೆಂದಲ್ಲದೆ ಮೈ ಮುಚ್ಚಿಕೊಳ್ಳಬೇಕೆಂಬ ಉದ್ದೇಶದಿಂದಲ್ಲ. ಸ್ತ್ರೀ ಸೇವಕರೂ, ನರ್ತಕಿಯರೂ ಸಂಪೂರ್ಣ ನಗ್ನಾವಸ್ಥೆ ಯಲ್ಲಿರುತ್ತಿದ್ದರು. ಇಜಿಪ್ತದಲ್ಲಿ ಬಹು ಪ್ರಾಚೀನ ಕಾಲದಲ್ಲಿ ದೇವತೆಗಳು ತೀರ ನಗ್ನಾವಸ್ಥೆಯಲ್ಲಿಯೇ ಗೋಚರವಾಗುತ್ತಿದ್ದರಂತೆ. ಜಪಾನದಲ್ಲಿ ಈಗಲೂ ಮಧ್ಯಾಹ್ನದಲ್ಲಿ ಕಾಣಲು ಬರುವ ಅತಿಥಿಗಳನ್ನು ಜಳಕ ಮಾಡುವ ಮನೆಯಲ್ಲಿಯೇ ಜಳಕ ಮಾಡುತ್ತಿರುವಾಗ ಕಾಣುವ ಪದ್ಧತಿ ಇದೆ.

**ಬುನಾದಿ ಕಾಲದ ಹೊದಿಕೆ:–** ಬುನಾದಿ ಕಾಲದ ಹೊದಿಕೆಯ ವಿಷಯವನ್ನು ಚನ್ನಾಗಿ ಅರಿತುಕೊಳ್ಳಬೇಕಾದರೆ ಶಾರೀರಕ ಅಲಂಕಾರಗ ಳನ್ನು ನಾವು ಚನ್ನಾಗಿ ಲಕ್ಷ್ಯದಲ್ಲಿಡಬೇಕು. ಮಾನವನು ತನ್ನ ನಗ್ನಾ ವಸ್ಥೆಯನ್ನು ತೊರೆದು ಬಟ್ಟೆಗಳನ್ನು ಧರಿಸಲು ಪ್ರಾರಂಭಿಸಿದುದಕ್ಕೆ ಮೂರು ಕಾರಣಗಳುಂಟು— ರಕ್ಷಣೆಯ ಅವಶ್ಯಕತೆ, ಅಲಂಕಾರದ ಆಶೆ, ಮತ್ತು ನಾಚಿಕೆ. ಬುನಾದಿ ಕಾಲದ ಮನುಷ್ಯನಿಗೆ ನಗ್ನಾವಸ್ಥೆಯ ವಿಷಯದಲ್ಲಿ ನಾಚಿಕೆ ಎಂಬುದು ಇದ್ದಿಲ್ಲ. ನಾಚಿಕೆಯು ಬಹುಕಾಲದ ನಂತರ ಉಂಟಾ ಯಿತು. ಅದು ಅರಿವೆಯನ್ನು ಹೊದ್ದುಕೊಳ್ಳಲಿಕ್ಕೆ ಕಾರಣವಾಗಿರದೆ, ಅದನ್ನು ಹೊದ್ದುಕೊಳ್ಳುವ ರೂಢಿಯ ಪರಿಣಾಮವಾಗಿದೆ.

ಹೊದ್ದುಕೊಳ್ಳುವ ಇಚ್ಛೆ ಮೊದಲು ಉಂಟಾಗಿರದೆ ಕೇವಲ ತಮ್ಮ ದೇಹವನ್ನು ಅಲಂಕರಿಸಬೇಕೆಂಬ ಆಸೆ ಮಾನವನಲ್ಲಿ ಮೊದಲು ಅಂಕುರಿಸಿತು. ಆದುದರಿಂದ ಸಂಸ್ಕೃತಿಯ ಕೆಳಗಿನ ಅವಸ್ಥೆಗಳಲ್ಲಿ ಹೊದಿಕೆಗಿಂತ ಅಲಂಕಾರಕ್ಕೆ ಹೆಚ್ಚು ಮಹತ್ವವನ್ನೀಯಬೇಕಾಗುತ್ತದೆ. ಪ್ರಾಕೃತಿಕ ಮಾನವನು ಆಭರಣದ ವಿಷಯದಲ್ಲಿ ಅತ್ಯಂತ ಹೆಮ್ಮೆಪಡುತ್ತಿದ್ದುದನ್ನು ಕಾಣಬಹುದು. ಅದಕ್ಕಾಗಿ ಅವನು ಬೇಕಾದ ಕಷ್ಟವನ್ನು ಅನುಭೋಗಿಸಲು ಸಿದ್ಧನಿದ್ದುದನ್ನು ನೋಡ ಬಹುದು. ತನ್ನ ಸುತ್ತುಮುತ್ತಲಿರುವ ಎಲ್ಲ ವಸ್ತುಸಾಮುಗ್ರ್ಯದಿಂದ ತನ್ನ ನಗ್ನ ಶರೀರವನ್ನು ಅಲಂಕರಿಸಲು ಕಾಡುಬಗೆಯ ಆಭರಣಗಳನ್ನು ತನ್ನ ಮೈಮೇಲೆ ಹೇರಿಕೊಳ್ಳುತ್ತಿದ್ದನು. ಹಚ್ಚೀಚುಚ್ಚಿಕೊಳ್ಳುವುದನ್ನೂ ಮೈಗೆ ಬಣ್ಣ ಬಳೆದುಕೊಳ್ಳುವ ರೂಢಿಯನ್ನೂ ಇವರಲ್ಲಿ ಕಾಣಬಹುದಾಗಿತ್ತು. ಸಂಪೂರ್ಣ ನಗ್ನಾವಸ್ಥೆಯಲ್ಲಿದ್ದ ಅನೇಕ ನಿಗ್ರೋ ಜನರು ತಮ್ಮ ಶಿರೋ-

ಭೂಷಣಗಳಿಗೆ ಹೆಚ್ಚಿನ ಮಹತ್ವವನ್ನು ಕೊಡುತ್ತಿದ್ದರು. ಇವರು ತಮ್ಮ ಕೂದಲನ್ನು ನೆಣ, ಶಗಣಿ ಮುಂತಾದವುಗಳನ್ನು ಹಚ್ಚಿ ಬಿರುಸಾದ ಗುಂಪನ್ನು ಮಾಡಿ ಅದಕ್ಕೆ ವಿವಿಧ ರೂಪಗಳನ್ನು ಕೊಡುತ್ತಿದ್ದರು. ತಲೆಗೂದಲನ್ನು ಸರಿಪಡಿಸಿಕೊಳ್ಳುವುದು ಬಹು ಕಠಿಣವಾದ ಕೆಲಸವಾಗಿತ್ತು. ಒಮ್ಮೆ ಅಲಂಕೃತವಾದ ಕೂದಲನ್ನು ಹಾಗೆಯೇ ಬಹುದಿನಗಳ ವರೆಗೆ ಇಟ್ಟುಕೊಳ್ಳಲು ಆ ಜನರು ಅನೇಕಾನೇಕ ಕಷ್ಟಗಳನ್ನನುಭವಿಸುತ್ತಿದ್ದರು. ರಾತ್ರಿ ತಲೆಗಿಂಬಿನಂತಿದ್ದ ಒಂದು ಕಟ್ಟಿಗೆಯ ಆಸರದ ಮೇಲೆ ತಲೆಯನ್ನಿಟ್ಟು ಬೆನ್ನನ್ನು ನೆಲಕ್ಕೆ ಹಚ್ಚಿ, ಅತ್ತಿತ್ತ ಸರಿದಾಡದೆ ಮಲಗುತ್ತಿದ್ದರು.

ಎಷ್ಟು ಕಷ್ಟವಾದರೂ ಅಂದವಾಗಿರುವ ಆಭರಣಗಳ ವಿಷಯವಾಗಿ ಅವರ ಪ್ರೀತಿ ಕಡಿಮೆಯಾಗಲಾರದು. ಹಲ್ಲುಗಳನ್ನು ಕೆಡವುತ್ತಿದ್ದರು ಅಥವಾ ಅವುಗಳನ್ನು ಉಜ್ಜಿ ಮೊಸಳೆಯ ಹಲ್ಲಿನಂತೆ ಚೂಪಾಗಿ ಮಾಡುತ್ತಿದ್ದರು. ಅವುಗಳನ್ನು ಕಪ್ಪುಮಾಡುತ್ತಿದ್ದರು. ತಲೆಯನ್ನು ಒತ್ತಿ ಸಪಾಟುಗೊಳಿಸುತ್ತಿದ್ದರು. ಕಿವಿಗಳಲ್ಲಿಯೂ ಮೂಗಿನ ಹೊರಳೆಗಳಲ್ಲಿಯೂ ತೂತುಗಳನ್ನು ಕೊರೆಯುತ್ತಿದ್ದರು. ಮತ್ತು ಅವುಗಳಲ್ಲಿ ಕಟ್ಟಿಗೆಯ ದೊಡ್ಡ ದೊಡ್ಡ ಬೆಣೆಗಳನ್ನು ಸೇರಿಸಿ ಹರವು ಮಾಡುತ್ತಿದ್ದರು. ಮೂಗಿನಲ್ಲಿ ದೊಡ್ಡ ಮೂಗುಬಟ್ಟನ್ನು ಅಥವಾ ಬಳಿಗಳನ್ನು ಹಾಕಿಕೊಳ್ಳುತ್ತಿದ್ದರು. ಒರಬರುತ್ತ ಇಂತಹ ಕಾಡು ಅಲಂಕಾರಗಳು ಹೆಂಗಳೆಯರಲ್ಲಿ ಮಾತ್ರ ಉಳಿದದ್ದು ಕಂಡು ಬರುತ್ತದೆ. ಚೀನದ ಸ್ತ್ರೀಯರ ಪಾದಗಳನ್ನು ಕಟ್ಟಿಡುವುದೂ, ಯುರೋಪ್ಯ ಸ್ತ್ರೀಯರ ಬಿಗಿಯಾಗಿ ಪಟ್ಟಿಯನ್ನು ಟೊಂಕಕ್ಕೆ ಸುತ್ತಿಕೊಂಡು ಟೊಂಕವನ್ನು ಕೃತ್ರಿಮವಾಗಿ ಸಣ್ಣ ಮಾಡುವುದೂ ಇದಕ್ಕೆ ದೃಷ್ಟಾಂತಗಳಾಗಿವೆ. ಇಂತಹ ರೂಢಿಯು ದೇಹದ ಆಕೃತಿಯನ್ನು ವಿರೂಪಗೊಳಿಸುವುದಲ್ಲದೆ ಆರೋಗ್ಯಕ್ಕೂ ಬಹು ಅಪಾಯಕಾರಕವಾಗಿರುತ್ತದೆ.

ಪ್ರಾಕೃತಿಕ ಮಾನವನು ಸ್ವಾಭಾವಿಕವಾಗಿ ತನ್ನ ದೇಹವನ್ನು ಅಲಂಕರಿಸುವಾಗ ಎದ್ದುಕಾಣುವ ಬಣ್ಣಗಳಿಗೂ ಹೊಳಪುಳ್ಳ ವಸ್ತುಗಳಿಗೂ ಬಹಳ ಮಹತ್ವವನ್ನು ಕೊಡುತ್ತಾನೆ. ತಲೆಗೆ ಗರಿಗಳಿಂದ ಒಗಒಗೆಯ ಮುಕಟಗಳು ಮಾಡಲ್ಪಡುತ್ತವೆ. ಕಲ್ಲು, ಸಿಂಪು, ಹಲ್ಲು ಮುಂತಾದವುಗಳನ್ನು ಪೋಣಿಸಿ ಕಂಠಿಗಳನ್ನು ಮಾಡುತ್ತಾರೆ. ಟೊಂಕಕ್ಕೆ ಬೇಕಾಗುವ

ಪಟ್ಟಿಗಳು ಅತ್ಯಂತವಾಗಿ ಅಲಂಕರಿಸಲ್ಪಡುತ್ತವೆ. ತುಟಿ, ಕಿವಿ, ತೋಳು, ಮೂಗು, ಹರಡ, ಪಾದ ಇವುಗಳ ಮೇಲೆ ಅನೇಕ ಬಳೆಗಳನ್ನು ಹಾಕಿಕೊಳ್ಳುತ್ತಾರೆ.

'ಹೊಟೆಂಟಾಟ' ಸ್ತ್ರೀಯರು ಕಾಲಿನಮೇಲೆ ನೂರಾರು ಕುರಿಯ ತೊಗಲಿನ ಪಟ್ಟಿಗಳನ್ನು ಹಾಕಿಕೊಳ್ಳುತ್ತಾರೆ. ಇದರಿಂದ ನಡೆಯಲೂ ಕೂಡ ಬಹು ಕಷ್ಟವಾಗುವದು. 'ಹರೆರೊ' ಸ್ತ್ರೀಯರು ತೋಳುಗಳಲ್ಲಿ ಕಾಲುಗಳಲ್ಲಿ ಅನೇಕ ಕಬ್ಬಿಣದ ಕಡೆಗಳನ್ನು ಹಾಕಿಕೊಳ್ಳುತ್ತಾರೆ. ತಲೆಗೆ ಸುಮಾರು ೨೦ ಪೌಂಡು ಭಾರವುಳ್ಳ ತೊಗಲಿನ ಪಟ್ಟಿಯ ಮುಕುಟವನ್ನು ಇಟ್ಟುಕೊಳ್ಳುತ್ತಾರೆ.

ಉಷ್ಣದೇಶಗಳ ಪ್ರಾಕೃತಿಕ ಜನರು ಅರಿವೆಗಳನ್ನು ಕೇವಲ ಆಭರಣಗಳೆಂದು ಭಾವಿಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಪ್ರಾಚೀನ 'ಕ್ಯಾರಿಬ್' ಜನರು ತಮ್ಮ ಬಳಿಯಲ್ಲಿ ಅರಿವೆಗಳಿದ್ದರೂ ಸಾಮಾನ್ಯವಾಗಿ ಬತ್ತಲೆ ತಿರುಗಾಡುತ್ತಿದ್ದರು. ಸಮಾರಂಭಗಳಲ್ಲಿ ಮಾತ್ರ ಅವುಗಳಿಂದ ಭೂಷಿತರಾಗುತ್ತಿದ್ದರು. ಕಾಡು ಜನರಿಗೆ ಅರಿವೆಯನ್ನು ಕಾಣಿಕೆಯಾಗಿ ಕೊಡುತ್ತಿರುವ ಪ್ರವಾಸಿಕರ ಅನುಭವವೂ ಈ ಮಾತನ್ನೇ ಎತ್ತಿ ಹಿಡಿಯುತ್ತದೆ.

ಸಂಸ್ಕೃತಿಯ ತೀರ ಕೆಳಗಿನ ಅವಸ್ಥೆಯಲ್ಲಿ ಕೆಲವೊಂದು ಜನಾಂಗಗಳಿಗೆ ಹೊದಿಕೆಯು ಅಲಂಕಾರವಾಗಿರದೆ, ಹವಾಮಾನದ ಅನಿಶ್ಚಿತ ಬದಲಾವಣೆಗಳನ್ನು ತಡೆದುಕೊಳ್ಳುವುದಕ್ಕಾಗಿರುತ್ತದೆ. ಎಸ್ಕಿಮೊ ಜನರೂ ಧ್ರುವ-ಪ್ರದೇಶದಲ್ಲಿರುವ ಎಲ್ಲ ಜನರೂ ಇದಕ್ಕೆ ದೃಷ್ಟಾಂತ. ಆದರೆ ಮಾನವವಂಶವು ನಿರ್ಮಾಣವಾದ ಉಷ್ಣಪ್ರದೇಶದಲ್ಲಿ, ಹೊದಿಕೆಯ ವಿಷಯದಲ್ಲಿ ಸ್ವಸಂರಕ್ಷಣೆಯ ವಿಚಾರಕ್ಕಿಂತಲೂ ಅಲಂಕಾರ ವಿಚಾರವೇ ಮೊದಲು ಜನರ ಮನಸ್ಸಿನಲ್ಲಿ ಒಡಮೂಡಿತು.

ಹೊದಿಕೆಯು ಅಲಂಕಾರಕ್ಕೆ ಅಧೀನವಾಗಿದ್ದ ಕಾಲವು ಮುಗಿದಬಳಿಕ, ಮೊಟ್ಟಮೊದಲು ಹೊದಿಕೆಗಾಗಿ ಸೃಷ್ಟಿಯಲ್ಲಿಯ ವಸ್ತುಗಳೇ ನೇರವಾಗಿ ಉಪಯೋಗಿಸಲ್ಪಡುತ್ತಿದ್ದವು. ಮೊದಲು ಚರ್ಮವು ಕೇವಲ ಹೆಗಲಮೇಲೆ ಹಾಕಿಕೊಳ್ಳಲ್ಪಡುತ್ತಿತ್ತು. ಅಥವಾ ಟೊಂಕಕ್ಕೆ ಸುತ್ತಿಕೊಳ್ಳಲ್ಪಡುತ್ತಿತ್ತು. ಆಮೇಲೆ ಹೆಣೆದ ಹುಲ್ಲು, ಎಲೆಗಳು, ತೊಗಟಿ ಮುಂತಾದವು ಬಳಕೆಯಲ್ಲಿ

ಬಂದವು. ಈ ಕಾಡುಸ್ಥಿತಿಯಲ್ಲಿಯೇ ದೇಹಕ್ಕೆ (ಹೊದಿಕೆಗಾಗಿ) ನೆಣವನ್ನು ಬಳೆದುಕೊಳ್ಳುವ ರೂಢಿಯೂ ಇತ್ತು.

ನೆಣದ ಹೊದಿಕೆಯು, ನಮಗೆ ಬೇಸರವನ್ನುಂಟುಮಾಡುವಂತಹ ದಿದ್ದರೂ, ಬಹು ಪ್ರಾಚೀನಕಾಲದ ರೂಢಿಯಾಗಿರುತ್ತದೆ. ನೆಣವು ಬಹು ಸುಲಭಸಾಧ್ಯವಾದ ಹೊದಿಕೆ. ದೇಹವನ್ನು ಅದು ಚಳಿ-ಮಳೆಗಳಿಂದಲೂ, ಕ್ಷುದ್ರಜಂತುಗಳ ಹಿಂಸೆಯಿಂದಲೂ ಸಂರಕ್ಷಿಸುತ್ತದೆ. ಮೈದೊಗಲನ್ನು ಮೃದುಗೊಳಿಸುತ್ತದೆ. ಅದು ಯಾವ ಕ್ರಿಯೆಗೂ ಪ್ರತಿಬಂಧಕವಾಗುವುದಿಲ್ಲ. ಪ್ರಾಕೃತಿಕ ಜನರಿಗೆ ಬಹು ಪ್ರಿಯಕರವಾದ ಬಣ್ಣ ಬಳೆದುಕೊಳ್ಳುವುದು ಈ ನೆಣದ ಸಹಾಯದಿಂದ ಅತಿ ಸುಲಭವಾಗುತ್ತದೆ. ಆದುದರಿಂದ ಜಗತ್ತಿನ ಎಲ್ಲ ಪ್ರಾಕೃತಿಕ ಜನರಲ್ಲಿ ನೆಣದಿಂದ ಅಥವಾ ಎಣ್ಣೆಯಿಂದ ಮೈಯನ್ನು ತಿಕ್ಕಿ ಕೊಳ್ಳುವುದು ರೂಢಿಯಲ್ಲಿದೆ. ನೆಣವನ್ನು ಮೈಗೆ ಹಚ್ಚಿಕೊಳ್ಳುವವರ ಸ್ವಚ್ಛತೆಯ ವಿಷಯವಾಗಿ ಹೆಚ್ಚಿಗೇನೂ ಹೇಳಲಿಕ್ಕಾಗುವುದಿಲ್ಲವೆಂಬುದು ನಿಜ. 'ಗಲ್ಲ'ರು ತಮ್ಮ ದೇಹಕ್ಕೆ ಮಾಂಸವನ್ನೂ ನೆಣವನ್ನೂ ಹಚ್ಚಿ ಕೊಳ್ಳುತ್ತಾರೆ. ಅದರಿಂದ ಸಹಿಸಲಸದಳವಾದ ವಾಸನೆಯುಂಟಾಗುತ್ತದೆ. ಲಿವ್ವಿಂಗ್ಸ್ಟನ್‌ನು ಹೇಳುವಂತೆ 'ಮಕೇಲೊಲೊ' ಸ್ತ್ರೀಯರು ಮೈತೊಳೆದು ಕೊಳ್ಳಲು ನೀರನ್ನು ಕ್ವಚಿತ್ತಾಗಿ ಉಪಯೋಗಿಸುತ್ತಾರೆ. ಅದರ ಬದಲು ಒಂದು ಬಗೆಯ ತುಪ್ಪವನ್ನು ತಮ್ಮ ಶರೀರಕ್ಕೆ ಬಡೆದುಕೊಳ್ಳುತ್ತಾರೆ. ಇದ ರಿಂದ ನೊಣ, ಚಿಕ್ಕಾಡು ಗುಂಗಾಡುಗಳ ಬಾಧೆ ತಪ್ಪುತ್ತದೆಂಬುದು ನಿಜ. ಆದರೆ ಅವರ ಆರಿನೆಗಳಿಗೆ ಅಸಹ್ಯವಾದ ವಾಸನೆಯುಂಟಾಗುತ್ತದೆ. 'ಹೊಟೆಂ ಟಾಟರು' ನೆಣದೊಡನೆ ಕಾಡಿಗೆಯನ್ನು ಕೂಡಿಸುತ್ತಾರೆ. ಕಂಟಿಗರು ಇಂಥ ಪದಾರ್ಥವನ್ನೇ ಉಪಯೋಗಿಸುತ್ತಾರೆ. 'ಹೊಲಸು ಬೆಚ್ಚಗಿಡುತ್ತದೆ' ಎಂಬುದು ಅವರ ನಾಣ್ಣುಡಿ. ಅವರ ಮೈದೊಗಲು ಬಿರುಸಾದ ಕನಚವನ್ನು ಹೊದ್ದುಕೊಂಡಂತಿರುತ್ತದೆ.

**೨. ತಯಾರಿಸಿದ ಹೊದಿಕೆಗಳನ್ನು ಹೊದ್ದುಕೊಳ್ಳುವ ಕಾಲ:** ತಯಾರಿಸಿದ ಒಡನೆಗಳ ಕಾಲವು ಹೊದಿಕೆಯ ಇತಿಹಾಸದಲ್ಲಿ ಎರಡನೆಯ ಮೆಟ್ಟಲು. ಚರ್ಮವು ಅಗ್ರಸ್ಥಾನವನ್ನು ಹೊಂದುತ್ತದೆ. ಉತ್ತರಅಮೇರಿಕೆ ಯವರು ಸಂಪೂರ್ಣ ದೇಹವನ್ನು ಮುಚ್ಚುವಂತೆ ಇದರಿಂದ **ಹೊದಿಕೆಗಳನ್ನು**

ಮಾಡುತ್ತಾರೆ. ಆಮೇಲೆ ಕೆಲವೊಂದು ಗಿಡಗಳತೊಗಟೆಗಳಿಂದುಂಟಾದ ವಸ್ತು ಗಳು ಹೊದಿಕೆಗಾಗಿ ಉಪಯೋಗಿಸಲ್ಪಡುತ್ತವೆ. ಓಸಿಯಾನಿಯನ್ ಮತ್ತು ಕೆಲವೊಂದು ನೀಗ್ರೋ ಜನರ ಪೋಷಾಕು ತೊಗಟೆಯನ್ನು ಬಡಿಬಡಿದು ಹರ ವಾಗಿ ಮಾಡಿದ ವಸ್ತುವಿನಿಂದಲೇ ಮಾಡಲ್ಪಟ್ಟಿರುತ್ತದೆ. ಯುರೋಪದ ಆರ್ಯರು ನಿಂಬೇಹಣ್ಣಿನ ಗಿಡದ ಒಳದೊಗಟೆಯಿಂದ ತಮ್ಮ ಪೋಷಾಕನ್ನು ಸಿದ್ಧಗೊಳಿಸುತ್ತಿದ್ದರು. ಇದಕ್ಕೆ ಲಿಂಟವಾಟ (lintwat) ಎಂಬ ಹೆಸರು ಇತ್ತು. ಇದುವೆ ಮುಂದೆ ನಾರುಬಟ್ಟೆಯೆಂದು ಪ್ರಸಿದ್ಧಿಪಡೆಯಿತು. ಈ ಎರಡನೆಯ ಮೆಟ್ಟಲಿನಲ್ಲಿ ಹತ್ತಿ, ನಾರು ಮುಂತಾದ ಎಳೆಗಳನ್ನೀಯುವ ವಸ್ತುಗಳಿಂದ ಮಗ್ಗದ ಸಹಾಯದಿಂದ ಅರಿವೆಯನ್ನು ನೇಯುತ್ತಿದ್ದರು. ಪ್ರಾಕೃತಿಕ ಜನರಲ್ಲಿ ಮುಂದುವರಿದವರಲ್ಲಿ ನೇಯ್ದ ಸಾಮಾನುಗಳು ದೊರಕು ತ್ತಿದ್ದವು. ಓಸಿಯಾನಿಯನ್‌ರು ತೊಗಟೆಗಳ ಪಟ್ಟಿಗಳನ್ನೇ ಎಳೆಗಳಂತೆ ಉಪ-ಯೋಗಿಸುತ್ತಾರೆ. ಆದುದರಿಂದ ಅವರು ನೂಲದೆ ಒಮ್ಮೆಲೇ ನೇಯುವು ದುಂಟು. ಆಫ್ರಿಕೆಯ ಬೇರೆ ಬೇರೆ ತಂಡಗಳಲ್ಲಿಯೂ ಇದನ್ನು ಕಾಣಬಹುದು. ಪ್ರಾಚೀನಕಾಲದ ಸುಧಾರಿಸಿದ ಜನರ ಮೇಲೆ ಮಗ್ಗದ ಪರಿಣಾಮವು ಮೊಟ್ಟ ಮೊದಲಾಯಿತು. ಅಸೀರಿಯನ್‌ರ ಬಿಗಿಯಾದ ಕೋಟುಗಳೂ, ಇಜಿಪ್ತ ದವರ ಮತ್ತು ಇಂಡಿಯನ್‌ರ ಟೊಂಕದ ವರೆಗಿನ ಕೋಟುಗಳೂ (waist-coats) ಇರಾಣೀಯರ ಬಿಗಿಯಾದ ಚೊಣ್ಣಗಳೂ ಇವೇ ಮುಂತಾದವು ಮುಖ್ಯ ದೃಷ್ಟಾಂತಗಳು.

**೩. ಸಡಗರದ ಪೋಷಾಕಿನ ಕಾಲ:** (The epoch of fashion). ಈ ಕಾಲದಲ್ಲಿ ಹಳೆಯ ಕಾಲದ ಪೋಷಾಕು ಕ್ರಮೇಣ ಹೊಸ ಮಾದರಿ ಯನ್ನು ಹೊಂದಿತು. ಆಧುನಿಕ ಪೋಷಾಕು ಕೆಳಗಿನ ನಾಲ್ಕು ವಿಷಯಗಳಲ್ಲಿ ಪ್ರಾಚೀನ ಪೋಷಾಕಿನಿಂದ ಭಿನ್ನವಾಗಿರುತ್ತದೆ.

೧. ಅದರ ಅಸಾಧಾರಣತೆ (complexity).

೨. ಹೆಚ್ಚು ಅಚ್ಚುಕಟ್ಟಾಗಿರುವುದು. (ಸಿಂಪಿಗರು ಪೋಷಾಕನ್ನು ಮೈಗೆ ಸರಿಯಾಗುವಂತೆ ಕತ್ತರಿಸಿ ಮಾಡುವರು.)

೩. 'ಮಾದರಿಯ' (fashion) ಬದಲಾವಣೆ. ಇದು ಪ್ರಾಚೀನರಿಗೆ ಗೊತ್ತಿರಲಿಲ್ಲ.

೪. ವಿಶ್ವವ್ಯಾಪಕತ್ವ. (ಎಲ್ಲ ಸುಧಾರಿಸಿದ ರಾಷ್ಟ್ರಗಳನ್ನು ಆಕ್ರಮಿಸಿದೆ)

ಸಾರಾಂಶ: ಪೋಷಾಕಿನ ಬೆಳೆವಣಿಗೆಯಲ್ಲಿ ಕೆಳಗಿನ ಮೂರು ಅವಸ್ಥೆಗಳನ್ನು ಗುರುತಿಸಬಹುದು.

೧. ಸ್ವಾಭಾವಿಕ ಅಥವಾ ಉಷ್ಣಕಟಿಬಂಧಕ-ಮುಖ್ಯ ಲಕ್ಷಣಗಳು: ನಗ್ನಾವಸ್ಥೆ, ದೇಹಕ್ಕೆ ಬಣ್ಣ ಬಳಿದುಕೊಳ್ಳುವುದು, ಹಚ್ಚೀ ಚುಚ್ಚಿಕೊಳ್ಳುವುದು, ಅಲಂಕರಿಸಿಕೊಳ್ಳುವುದು, ಅವಯವಗಳ ಬೆಳೆವಣಿಗೆಯನ್ನು ಕುಗ್ಗಿಸುವುದು; ಸ್ವಾಭಾವಿಕ ವಸ್ತುಗಳನ್ನು — ಚರ್ಮ, ಎಲೆ, ಹುಲ್ಲು, ನಾರು ಮುಂತಾದವುಗಳನ್ನು—ಉಪಯೋಗಿಸುವುದು. ಈ ಅವಸ್ಥೆಯಲ್ಲಿ ತೀರ ಕೀಳು ತರಗತಿಯ ಪ್ರಾಕೃತಿಕ ಜನರು ಬರುತ್ತಾರೆ.

೨. ರಾಷ್ಟ್ರೀಯ ಪೋಷಾಕು: ಮುಖ್ಯ ಲಕ್ಷಣಗಳು: ಕೃತ್ರಿಮ ರೀತಿಯಿಂದ ಸಿದ್ಧಪಡಿಸಿದ ಪೋಷಾಕುಗಳ ಉಪಯೋಗ. ಮಗ್ಗಗಳಿಂದ ತಯಾರಿಸುವುದು. ಅವುಗಳ ತಾಳಿಕೆ ಹೆಚ್ಚು. ಈ ವಿಭಾಗದಲ್ಲಿ ಪ್ರಾಕೃತಿಕ ಜನರಲ್ಲಿಯ ಮೇಲ್ತರಗತಿಯವರೂ-ಪ್ರಾಚೀನ ಒಳ್ಳೇ ಸುಧಾರಿಸಿದ ಜನಾಂಗಗಳೂ ಸಮಾವೇಶವಾಗುತ್ತವೆ.

೩. ಸೊಬಗಿನ ಪೋಷಾಕು (The dress of fashion) ಅಥವಾ ಉತ್ತರದ ಪೋಷಾಕು: ಮುಖ್ಯ ಲಕ್ಷಣಗಳು; ಅಸಾಧಾರಣತೆ; ವ್ಯಕಟ್ಟಿಗೆ ಒಪ್ಪುವಂತೆ ಹೊಲಿಯುವಿಕೆ. ಇದರಲ್ಲಿ ಆಧುನಿಕ ಸುಸಂಸ್ಕೃತ ಮಾನವ ಕುಲವು ಸಮಾವೇಶವಾಗುತ್ತದೆ.

—

ಏಳನೆಯ ಮೆಟ್ಟಿಲು



## ನಿವಾಸಸ್ಥಾನದ ಉತ್ಕ್ರಾಂತಿ.

೧. **ಪೂರ್ವಕಾಲದಲ್ಲಿ ಮನೆಯಿಲ್ಲದಿರುವಿಕೆ:** ನಿವಾಸಸ್ಥಾನದ ವಿಷಯದಲ್ಲಿ ಇನ್ನೂ ಅನೇಕರು ಕಾಡು ಸ್ಥಿತಿಯಲ್ಲಿರುವುದನ್ನು ಕಾಣಬಹುದು.

ಚರಿವೆಯನ್ನು ಪಯೋಗಿಸದ ಜನರು ಅನೇಕರು ಇರುವಂತೆ, ಮನೆಯಿಲ್ಲ ದವರೂ ಅನೇಕರಿರುತ್ತಾರೆ. ಗುಡ್ಡುಗಾಡಿನ ವೆಡ್ಡರಿಗೆ (Veddas) ಮನೆ ಗಳಿರುವುದಿಲ್ಲ. ರಾತ್ರಿಯಲ್ಲಿ ಗಿಡದ ಬುಡದಲ್ಲಾಗಲಿ ಗಿಡಗಳ ಮೇಲಾ ಗಲಿ ವಾಸವಾಗಿರುವರು. ಮಳೆಗಾಲದಲ್ಲಿ ಗವಿಗಳಲ್ಲಿ ವಾಸಿಸುವರು. ತಾವು ವಾಸವಾಗಿರುವ ಪ್ರತಿಯೊಂದು ಗವಿಯ ಮುಂದೆ ಬೆಂಕಿಯನ್ನು ಹೊತ್ತಿಸಿ ಇಡುತ್ತಾರೆ. ಟಾಸ್ಮಾನಿಯನ್‌ರು ಗಿಡಗಳ ಪೊಳ್ಳುಗಳಲ್ಲಿ ಮಲಗುತ್ತಿದ್ದರು. ಕಂಟಿಗಳಲ್ಲಿರುವವರೂ ಮನೆಗಳನ್ನು ಕಟ್ಟಿಕೊಳ್ಳುವುದಿಲ್ಲ. ಕೇವಲ ಕಟ್ಟಿಗೆ ಗಳ ತುಂಡುಗಳನ್ನು ನೆಲದಲ್ಲಿ ಊರಿ, ಹುಲ್ಲು ಹಾಂಸೆಗಳನ್ನು ಅವುಗಳ ಮೇಲೆ ಹಾಕಿ ಬೆಂಕಿಯನ್ನು ಕಾಯ್ದಿಟ್ಟುಕೊಳ್ಳಲು ಆಧಾರವಾಗುವಂತೆ ಮಾಡಿಕೊಳ್ಳುತ್ತಾರೆ.

೨ **ಗುಡಿಸಲುಗಳು:** ಮೊಟ್ಟಮೊದಲು ಕಟ್ಟಿದ ಮನೆಗಳೆಂದರೆ ನೆಲ ದೊಳಗಿನ ಪೊಳ್ಳುಗಳು ಮತ್ತು ಗುಡಿಸಲುಗಳು. ಗಾಳಿಯಿಂದ ಪಾರಾಗಲು ಏನಾದರೊಂದು ಆಧಾರವನ್ನು ಮಾಡಿಕೊಳ್ಳಬೇಕೆಂಬ ವಿಚಾರದ ಮೂಲಕವೇ ಗುಡಿಸಲುಗಳ ನಿರ್ಮಾಣವಾಯಿತು. ಆಸ್ಟ್ರೇಲಿಯದ ಫಲವತ್ತಾದ ಭಾಗ ಗಳಲ್ಲಿಯ ನಿವಾಸಿಗಳ ಗುಡಿಸಲುಗಳು ತೀರ ಸಣ್ಣವೂ ಗಿಡ್ಡವಾಗಿಯೂ ಇರುತ್ತವೆ. ಇಬ್ಬರು ಮೂವರು ಮಾತ್ರ ಬಹು ಸಂಕೋಚದಿಂದ ಇವು ಗಳಲ್ಲಿ ಹೊರಳಾಡಬಹುದು. ಉಳಿದ ಆಸ್ಟ್ರೇಲಿಯದ ಕಾಡು ಜನರು ತೆಗ್ಗು ಗಳಲ್ಲಿ ವಾಸಿಸುತ್ತಾರೆ ಅಥವಾ ಜೇನ್ನೊಣದ ಹುಟ್ಟಿನಂತೆ, ಟೊಂಗೆಗಳಿಂದ ಗುಡಿಸಲುಗಳನ್ನು ರಚಿಸುತ್ತಾರೆ. ಇವು ಹುಲ್ಲು ಮಣ್ಣುಗಳಿಂದ ಆಚ್ಛಾ- ದಿತವಾಗಿರುತ್ತವೆ. ಇನ್ನೂ ಕೆಲವು ಆಸ್ಟ್ರೇಲಿಯದ ತಂಡಗಳು ಸುಮಾರು ಮೂವತ್ತು ಜನರನ್ನೊಳಗೊಳ್ಳಬಹುದಾದಷ್ಟು ದೊಡ್ಡ ಗುಡಿಸಲುಗಳನ್ನು ಕಟ್ಟಿಕೊಳ್ಳುತ್ತವೆ. ಇಂತಹ ಗುಡಿಸಲುಗಳನ್ನು ಡಾರ್ಲಿಂಗ ನದಿಯ ತೀರದಲ್ಲಿ ಕಾಣಬಹುದು.

**ಗುಳೇಕಾರರ ಮನೆಗಳೂ ಡೇರೆಗಳೂ:** ಇವುಗಳಲ್ಲಿ ಕಟ್ಟಿಗೆಯ ಕಂಬ ಮುಂತಾದವುಗಳಿದ್ದು, ಚರ್ಮ ಉಣ್ಣೆ ಮುಂತಾದವುಗಳಿಂದ ಇವು ಆಚ್ಛಾ ದಿತವಾಗಿರುತ್ತವೆ. ಈ ಡೇರೆಗಳು ಇಳಿಸಲು ಬರುವಂತೆಯೂ, ಬೇರೆ ಕಡೆಗೆ ಒಯ್ದು ಮತ್ತೆ ನಿಲ್ಲಿಸಲು ಬರುವಂತೆಯೂ ಮಾಡಲ್ಪಟ್ಟಿರುತ್ತವೆ. ಮಂಗೋ

ಲರ, ಕಿರಗೀ ಜನರ ಒಂದೊಂದು ಡೇರೆಯಲ್ಲಿ ಇಪ್ಪತ್ತಕ್ಕಿಂತಲೂ ಹೆಚ್ಚು ಜನರಿಗೆ ಸ್ಥಳವಿರುತ್ತದೆ. ಕೆಳತರಗತಿಯ ಕೃಷೀವಲರ ಗುಡಿಸಲುಗಳು ಹೆಚ್ಚು ಕಾಲ ಬಾಳುವಂತಿರುತ್ತವೆ. ಇವರಲ್ಲಿಯೂ ಕೂಡ ಸಂಚಾರ ಮಾಡುವ ತಂಡಗಳ ವಿಚಾರಗಳೇ ಸ್ಫುಟವಾಗಿ ಕಂಡುಬರುತ್ತವೆ. ಆದುದರಿಂದ ಕೆಂಪು ಇಂಡಿಯನ್ನರ ಮತ್ತು ಸಿದ್ದೀ ಜನರ ಗುಡಿಸಲುಗಳು ಬಹಳಾದರೆ ಎರಡು ಮೂರು ವರುಷಗಳ ವರೆಗೆ ಮಾತ್ರ ತಡೆಯಬಲ್ಲವು. ನಿಜವಾದ ಸ್ಥಳಿಕತೆಯು ಪಟ್ಟಣಗಳ ಕಾಲದ ವರೆಗೂ ಕಂಡುಬರುವುದಿಲ್ಲ. ಕೆಲವೊಂದು ತಂಡದವರ ಗುಡಿಸಲುಗಳು ಕಲ್ಲುಗೋಡೆಗಳಿಂದ ಕಟ್ಟಲ್ಪಟ್ಟಿರುತ್ತವೆ. ಚಪ್ಪರಕ್ಕೆ ಹುಲ್ಲು, ಬಿದುರು, ಬೆತ್ತ, ಎಲೆ ಮುಂತಾದವುಗಳನ್ನು ಉಪಯೋಗಿಸುತ್ತಾರೆ. ಇಂತಹ ನಿವಾಸಗಳಿಗೆ ಕಿಡಿಕೆಗಳಾಗಲಿ ಹೊಗೆಕಿಂಡಿಗಳಾಗಲಿ ಇರುವುದಿಲ್ಲ. ಹೊಗೆ ಕಿರಿಬಾಗಿಲಿನಿಂದಲೇ ಹೊರಗೆ ಹೋಗಬೇಕು.

**೩. ಮನೆ:** ಸಂಸ್ಕೃತಿ ಬೆಳೆದಂತೆ ಗುಡಿಸಲುಗಳ ಬದಲು ಮನೆಗಳು ಉಂಟಾದವು. ಸಂಸ್ಕೃತಿಯ ಕೆಳತರಗತಿಯಲ್ಲಿ ಕೂಡ ಕಟ್ಟಿಗೆ ಮನೆಗಳು ಕಂಡುಬರುತ್ತವೆ. ಉತ್ತರ ಅಮೇರಿಕೆಯ ನಿವಾಸಿಗಳು ಗಿಡದ ಬೊಡ್ಡೆಗಳಿಂದ ಕಟ್ಟಿಗೆಯ ಮನೆ ಕಟ್ಟುತ್ತಿದ್ದರು. ಇವುಗಳಲ್ಲಿ ಅನೇಕ ಕುಟುಂಬಗಳು ಏಕತ್ರವಾಗಿರುತ್ತಿದ್ದವು. ಮೊದಲಿನ ದೊಡ್ಡ ಮನೆಗಳು ಮಾನವನ ಸ್ಥಿರತೆ ಸಾಮಾಜಿಕತೆಗಳಿಗಾಗಿರುವ ಇಚ್ಛೆಯ ಕುರುಹುಗಳಾಗಿವೆ.

ಕಟ್ಟಿಗೆಯ ಮನೆ ಪುರಾತನ ಆರ್ಯ ಸಂಸ್ಕೃತಿಯ ಹೆಗ್ಗುರುತು. ಜರ್ಮನ್‌ರು ಮನೆಗಳನ್ನು ಕಟ್ಟಿಗೆಯಿಂದಲೇ ಕಟ್ಟುತ್ತಿದ್ದರು. ಆದುದರಿಂದಲೇ 'bauen'=to build, ಮತ್ತು 'baum'=tree ಎಂಬ ಶಬ್ದಗಳ ನಿಕಟಸಂಬಂಧ. ಕಟ್ಟಿಗೆಯ ಬೊಡ್ಡಿಗಳನ್ನು ಸಾಧಾರಣವಾಗಿ ಕೂಡಿಸಿ ಮನೆಗಳನ್ನು ಕಟ್ಟುತ್ತಿದ್ದರು. ಚಳಿಗಾಲದಲ್ಲಿ ತೆಗ್ಗುಗಳ ಮನೆಗಳಲ್ಲಿ ವಾಸಿಸುತ್ತಿದ್ದರು. ಸ್ತ್ರೀಯರು ಬಹುತರವಾಗಿ ಇಂತಹ ನೆಲದ ಒಡದಲ್ಲಿಯ ಮನೆಗಳಲ್ಲಿಯೇ ಇರುತ್ತಿದ್ದರು. ಆರಾಮಿಗಿಂತಲೂ ಹೆಚ್ಚು ಸುರಕ್ಷಿತವಾಗಿರುತ್ತಿದ್ದವೆಂದೇ ಹೀಗೆ ಮನೆ ಮಾಡುತ್ತಿದ್ದರು. ನೇಯುವ ಕೆಲಸವು ಕೂಡ ಇವುಗಳಲ್ಲಿಯೇ ಸಾಗುತ್ತಿತ್ತು. ಮಧ್ಯಯುಗದ ಚಿತ್ರಕಲೆ ಅಭಿವೃದ್ಧಿ ಪಡೆದಾಗ ಕಟ್ಟಿಗೆ ಮನೆಗಳು ಪಟ್ಟಣಗಳಲ್ಲಿಯೂ ಕಂಡುಬರುತ್ತಿದ್ದವು.

ಕಟ್ಟಿಗೆ ಮನೆಗಳಿದ್ದ ಮೂಲಕ ಮನೆಗಳಿಗೆ ಮೇಲಿಂದಮೇಲೆ ಬೆಂಕಿ ಹತ್ತಿ ಅನಾಹುತಗಳಾಗುತ್ತಿದ್ದವು.

ಕಲ್ಲಿನ ಉಪಯೋಗವಾದಾಗಿನಿಂದಲೇ ನಿಜವಾದ ವಾಸ್ತುಶಿಲ್ಪವು ಪ್ರಾರಂಭವಾಯಿತು. ಕಲ್ಲು ಸಿಕ್ಕದ ಸ್ಥಳದಲ್ಲಿ ಹೆಂಟೆಗಳನ್ನು ಉಪಯೋಗಿಸುತ್ತಿದ್ದರು. ಮೊದಲು ಕೇವಲ ಒಣ ಹೆಂಟೆಗಳನ್ನೂ ಕ್ರಮೇಣ ಸುಟ್ಟ ಹೆಂಟೆಗಳನ್ನೂ ಉಪಯೋಗಿಸುತ್ತಿದ್ದರು. ಅಸೀರಿಯನ್ ಬೆಬಿಲೋನಿಯನ್ ಜನರ ದೊಡ್ಡ ದೊಡ್ಡ ಪಟ್ಟಣಗಳು ಇವುಗಳಿಂದಲೇ ನಿರ್ಮಿತವಾಗಿದ್ದವು. ಗೋಡೆಗಳನ್ನು ಸಮನಾಗಿ ಕಟ್ಟಲು ಬಾರದಿದ್ದುದರಿಂದಲೂ ಕಲ್ಲಿನ ಚಪ್ಪರ ಮಾಡುವುದು ಕಠಿಣವಾದುದರಿಂದಲೂ, ಮೊದಮೊದಲು ಪಿರಾಮಿಡ್‌ದಂತಿರುವ ಮನೆಗಳನ್ನು ಕಟ್ಟುತ್ತಿದ್ದರು. ಚಪ್ಪರವನ್ನು ರಚಿಸುವ ತೊಂದರೆ ತಪ್ಪಿಸುವುದಕ್ಕಾಗಿ ಗುಮಟಗಳನ್ನು ಮಾಡಹತ್ತಿದರು. ಅಥವಾ ಇಜಿಪ್ತದಲ್ಲಿ ಮಾಡಿದಂತೆ ದೊಡ್ಡ ಹರವಾದ ಕಲ್ಲುಗಳಿಂದ, ಅಥವಾ ಕಟ್ಟಿಗೆಯಿಂದ ಚಪ್ಪರವನ್ನು ಮಾಡುತ್ತಿದ್ದರು. ಈ ಕಠಿಣ ಪ್ರಶ್ನೆಯನ್ನು ಬಿಡಿಸುವುದಕ್ಕಾಗಿ ಗುಮಟಗಳನ್ನು ರಚಿಸುವುದನ್ನೇ ಸಂಶೋಧಿಸಬೇಕಾಯಿತು. ಇದು ನಿಜವಾಗಿಯೂ ಅಸೀರಿಯನ್‌ರಿಗೂ, ಇಜಿಪ್ತದವರಿಗೂ, ಎಸ್ಕಿಮೋ ಜನರಿಗೂ ಕೂಡ ಗೊತ್ತಿತ್ತು. ಆದರೂ ಅದು ರೋಮನ್‌ರಿಂದ ಎಲ್ಲ ಕಡೆಗೂ ವ್ಯಾಪಿಸಲ್ಪಡುವವರೆಗೆ ವಿಶೇಷವಾಗಿ ಬಳಕೆಯಲ್ಲಿ ಒಂದಿರಲಿಲ್ಲ. ಆಮೇಲೆ ಶಿಲ್ಪಶಾಸ್ತ್ರದ ನವಯುಗವೇ ಪ್ರಾರಂಭವಾಯಿತು.

**ಹಳ್ಳಿಗಳೂ ಪಟ್ಟಣಗಳೂ:** ಸಂಸ್ಕೃತಿಯ ಕೆಳಗಿನ ಮೆಟ್ಟಲುಗಳಲ್ಲಿ ಮನೆಗಳನ್ನೂ ಗುಡಿಸಲುಗಳನ್ನೂ ಕಾಣಬಹುದು. ಆದರೆ ಪಟ್ಟಣಗಳು ಮಾನವನು ಸುಸಂಸ್ಕೃತಿಯ ಮೇಲ್ಮೆಟ್ಟಲುಗಳನ್ನು ಮೆಟ್ಟುವಾಗ ಉಂಟಾದವು.

ಪ್ರಾಕೃತಿಕ ಜನರ ಬಿಡಾರಗಳು ಚಿಕ್ಕ ಚಿಕ್ಕ ಕೋಟೆಗಳಂತಿರುತ್ತವೆ. ಅವು ಬೇಲಿಗಳಿಂದಲೂ, ಮಣ್ಣಿನ ಗೋಡೆಗಳಿಂದಲೂ, ಕಂದಕಗಳಿಂದಲೂ, ಶತ್ರುವಿನ ಹಲ್ಲೆಯಾಗದಂತೆ ರಕ್ಷಿಸಲ್ಪಡುತ್ತವೆ. ಅಥವಾ ಅವು ಪರ್ವತ ಶಿಖರಗಳ ಮೇಲೂ, ನಡುಗಡ್ಡೆಗಳ ಮೇಲೂ, ಗಿಡಗಳ ಮೇಲೂ ಸಹ ಕಟ್ಟಲ್ಪಡುತ್ತವೆ. 'ಹವಾಯಿ'ಯಲ್ಲಿ ಕೋಟೆಗಳು ಪರ್ವತಶಿಖರಗಳ ಮೇಲೆ

ಕಟ್ಟಲ್ಪಟ್ಟಿರುತ್ತವೆ. ಅವುಗಳ ಸುತ್ತಲು ೧೮, ೨೦ ಅಡಿ ಅಗಲವಾದ, 'ಲಾವಾ' ಗೋಡೆಗಳು ಇರುತ್ತವೆ. ಗಂಡಾಂತರ ಬಂದಾಗ ಜನರಿಂದ ಸಂಶ್ರಯ ಸ್ಥಾನಗಳಂತೆ ಉಪಯೋಗಿಸಲ್ಪಡುತ್ತವೆ.

ಸಾಧಾರಣೆಯ ಮೆಟ್ಟಲುಗಳನ್ನು ನಾವು ಹತ್ತಿದಂತೆ ಬೇರೆ ಬೇರೆ ಹಳ್ಳಿಗಳ ಸಂಖ್ಯೆ ಹೆಚ್ಚಾಗುತ್ತದೆ. ಅನೇಕ 'ನೀಗ್ರೋ' ರಾಜ್ಯಗಳಲ್ಲಿ ನಾವು ಪಟ್ಟಣಗಳನ್ನು ಕಾಣಬಹುದು. ಯುಗ್ಯಾಂಡಾದಲ್ಲಿ, 'ವ್ಯೆಸಾ' ಎಂಬ ಅರಸನ ಎರಡು ರಾಜಧಾನಿಗಳಿದ್ದವು. ಮಧ್ಯ ಆಫ್ರಿಕೆಯಲ್ಲಿ 'ಬೊರ್ನು' ವಿನ ರಾಜಧಾನಿಯಾದ 'ಕುಕುವಾ' ಎಂಬುದರ ಸುತ್ತಲು ೧೪ ಅಡಿ ಅಗಲವಾದ ಗೋಡೆ ಇತ್ತು. ಅದರ ಮೇಲೆ ಏಳು ಗೋಪುರಗಳಿದ್ದವು. ಸುಮಾರು ೬೦೦೦೦ ನಿವಾಸಿಗಳಿದ್ದರು. 'ಬೊರ್ನು' ವಿನ ಉಳಿದ ಪಟ್ಟಣಗಳಲ್ಲಿ ೧೦೦೦೦ದಿಂದ ೩೦೦೦೦ ವರೆಗೆ ಜನವಸತಿ ಇತ್ತು. 'ಟಿಂಬಕ್ಟು'ವಿನ ಜನವಸತಿ ೪೦೦೦೦ವಿತ್ತು. ಇದರಲ್ಲಿ ೧೦೦೦೦ ಪರಕೀಯರು. ಎಲ್ಲ ನಿಗ್ರೋ ಪಟ್ಟಣಗಳು ವ್ಯಾಪಾರದ ಕೇಂದ್ರಗಳಾಗಿದ್ದವು.

ಪುರಾತನ ಮೆಕ್ಸಿಕನ್ ಮತ್ತು ಪೆರೂವಿಯನ್‌ರ ಸಂಸ್ಕೃತಿಯ ಕೆಲವೊಂದು ಅವಸ್ಥೆಗಳಲ್ಲಿ, ಚೀನರಲ್ಲಿ, ಜಪಾನರಲ್ಲಿ, ಮತ್ತು ಪುರಾತನದ ಅನೇಕ ಜನಾಂಗಗಳಲ್ಲಿ, ಬೇರೊಂದು ಸ್ಥಿತಿಯನ್ನು ಕಾಣಬಹುದು. ದೊಡ್ಡ ಪಟ್ಟಣಗಳು ಕೇವಲ ವ್ಯಾಪಾರಕೇಂದ್ರಗಳಾಗಿರದೆ ವಿದ್ಯಾಪ್ರಸಾರಕಾರ್ಯದಲ್ಲಿ ಅಗ್ರಸ್ಥಾನವನ್ನು ಪಡೆದಿದ್ದವು. ಹಳ್ಳಿಗಿಂತಲೂ ಪಟ್ಟಣದಲ್ಲಿ ಜನಸಂಖ್ಯೆ ಹೆಚ್ಚು. ಇದುವೆ ಹಳ್ಳಿ-ಪಟ್ಟಣಗಳಲ್ಲಿರುವ ವ್ಯತ್ಯಾಸ. ಪಟ್ಟಣಗಳಲ್ಲಿ ಇಷ್ಟೊಂದು ಜನಸಮುದಾಯವಿರುವದು ಶ್ರಮವಿಭಾಗವು ಯೋಗ್ಯ ಮಟ್ಟನ್ನು ಮುಟ್ಟಿದಾಗಲೇ ಸಾಧ್ಯ. ಒಕ್ಕಲಿಗರೂ, ದನಗಾರರೂ ಯಾವಾಗಲೂ ತಮ್ಮ ಕಾರ್ಯಕ್ಷೇತ್ರದಲ್ಲಿರಬೇಕಾದುದರಿಂದ ಅವರು ಒಂದೇ ಒಂದು ಸ್ಥಳದಲ್ಲಿ ಬಹು ಸಂಖ್ಯಾಕರಾಗಿರುವುದು ಅಸಾಧ್ಯ. ಪಟ್ಟಣವು ಬಹುಶಃ ವ್ಯಾಪಾರಿಗಳ, ಕಲಾವಂತರ, ಮನೆಯಾಗಿರುತ್ತದೆ. ಯಾವುದೊಂದು ಪಟ್ಟಣವು ಕೋಟೆಯಾಗಬಲ್ಲದೋ ನಿವಾಸಸ್ಥಾನವಾಗಬಲ್ಲದೋ, ಪೇಟೆಯೋ ಸುಖಸದನವೋ ಎಂಬುದು ಸಾಮಾನ್ಯವಾಗಿ ಅದರ ಸ್ಥಾನ ಮತ್ತು ಸುತ್ತುಮುತ್ತಲಿನ ಪರಿಸ್ಥಿತಿಯನ್ನವಲಂಬಿಸಿರುತ್ತದೆ. ಶ್ರಮವಿಭಾಗದ

ಪರಿಣಾಮವಾಗಿಯೇ ಪಟ್ಟಣಗಳುಂಟಾಗುವವು. ಶ್ರಮವಿಭಾಗವು ಹೆಚ್ಚೆಚ್ಚು ಬೆಳೆದಂತೆ ಪಟ್ಟಣಗಳ ಸಂಖ್ಯೆ ಬೆಳೆಯುವುದು. ಎಲ್ಲ ಬೆಳವಣಿಗೆಯು, ವಿಜ್ಞಾನ, ಕಲೆ, ಸಾಹಿತ್ಯ, ಒಕ್ಕಲುತನ, ಪೋಷಾಕದಲ್ಲಿಯು ಒಸಪು ಮುಂತಾದ ಎಲ್ಲ ವಿಷಯುಗಳಲ್ಲಿಯು ಪ್ರಗತಿಯು, ಪಟ್ಟಣಗಳಲ್ಲಿ ಮೊದಲಾಗುವುದು.

ಬದಲಾವಣೆಯಾಗದೆ ಇದ್ದಂತೆ ಇರಬೇಕೆಂಬ ಮನೋವೃತ್ತಿ ಹಳ್ಳಿಯ ಜನರಲ್ಲಿರುತ್ತದೆ. ಆದುದರಿಂದಲೇ ಅವರು ತೀವ್ರ ಬದಲಾವಣೆಗಳನ್ನು ಸ್ವಾಗತಿಸುವುದಿಲ್ಲ. ಈ ಇಪ್ಪತ್ತನೆಯ ಶತಮಾನದಲ್ಲಿ ಕೂಡ, ರಾಜಮಾರ್ಗ ಗಳಿಂದ ದೂರವಿದ್ದ ಹಳ್ಳಿಗಳ ನಿವಾಸಿಗಳು, ಬುನಾದಿಕಾಲದ ಒಕ್ಕಲುತನದ ಪದ್ಧತಿಯನ್ನೇ ಅನುಸರಿಸುತ್ತಾರೆ. ಅಲ್ಲಿ ಪ್ರಗತಿಯು ಮಂದವಾಗಿಯೂ ಸ್ಥಿರವಾಗಿಯೂ ಸಾಗುತ್ತದೆ. ಆ ರೀತಿಯೇ ನಿಜವಾದ ಪ್ರಗತಿಗೆ ಮಾರ್ಗ-ದರ್ಶಿ.

ಮಾನವನು ತಾನು ಇರುವುದಕ್ಕಾಗಿ ರಚಿಸಿಕೊಂಡ ಮನೆ ಕ್ರಮೇಣ ಹೇಗೆ ಬೆಳೆಯಿತೆಂಬುದು ಕೆಳಗಿನ ಸಾರಾಂಶದಿಂದ ಗೋಚರವಾಗುತ್ತದೆ.

೧. ಬುನಾದಿಕಾಲದ ಮನೆಯಿಲ್ಲದಿರುವಿಕೆ.

೨. ಗುಡಿಸಲುಗಳು (ಡೇರೆಗಳು, ಕಲ್ಲಿನ ಮನೆಗಳು, ಹಳ್ಳಿಗಳು).

೩. ಮನೆಗಳು—ಪಟ್ಟಣಗಳು.





## ಉದ್ಯಮವಿಕಾಸದ ವಿವರ

**ಮೊದಲಿನ ಮಾತುಗಳು:** ಜಗತ್ತಿನಲ್ಲಿ ಅನೇಕ ಪ್ರಬಲ ವಸ್ತುಗಳು ಉಂಟು. ಆದರೆ ಮಾನವನಿಗಿಂತಲೂ ಬಲಿಷ್ಠ ವಸ್ತುಗಳಿಲ್ಲ. ಮಾನವನಿಗೆ ಇಂತಹ ಶಕ್ತಿಯು ಕೇವಲ ವೈಯಕ್ತಿಕ ಶಕ್ತಿಯಿಂದ ಬಂದುದಲ್ಲ. ತನ್ನ ಸರಿ ಸಮಾನ ಯೋಗ್ಯತೆಯುಳ್ಳ ಸಂಗಡಿಗರೊಡನೆ ಸಹಕರಿಸುವುದರಿಂದಲೇ ಮಾನವನಿಗೆ ಸೃಷ್ಟಿಯಲ್ಲಿ ಇನ್ನಿತರ ಸೃಷ್ಟವಸ್ತುಗಳಿಗಿಂತಲೂ ಅಧಿಕಶಕ್ತಿ ಉಂಟಾಗಿದೆ. ಸಣ್ಣಪುಟ್ಟ ವೈಯಕ್ತಿಕ ಶಕ್ತಿಗಳನ್ನು ಸುಸಂಘಟಿಸಿ, ವಿಶ್ವವ್ಯಾಪಕವಾದ ಸಹಕಾರ ಶಕ್ತಿಯನ್ನು ಮಾನವನು ನಿರ್ಮಿಸಿಕೊಂಡಿದ್ದಾನೆ. .

ಇದುವೆ ಸಮಾಜಶಾಸ್ತ್ರದ ತಳಹದಿಯ ತತ್ವ. ಉದ್ಯಮದ ವಿಕಾಸವನ್ನು ನಾವು ಪರಿಶೀಲಿಸುವಾಗ ಈ ಮಾತು ನಮಗೆ ಹೊಳೆಯುವುದು. ಮನುಷ್ಯನ ಉದ್ಯಮವು ವ್ಯಕ್ತಿಗಳ ಸಹಕಾರದಿಂದಲೇ ಬಲಪಡುವುದು. ಆದುದರಿಂದ ಉದ್ಯಮದ ಇತಿಹಾಸವೆಂದರೆ ಸಹಕಾರದ ಇತಿಹಾಸವೆಂದೇ ಕಂಡುಬರುವುದು.

ಸಹಕಾರದಿಂದ ಒಂದೇ ಒಂದು ವ್ಯಕ್ತಿಗೆ ದುಃಸಾಧ್ಯವಾದ ಕೆಲಸವು ಸಮಾಜಕ್ಕೆ ಸುಲಭಸಾಧ್ಯವಾಗುವುದು. ಶ್ರಮಸಂಮಿಶ್ರಣವು ಎರಡು ವಿಧವಾಗಿ ಆಗಬಹುದು : (೧) ಒಬ್ಬ ವ್ಯಕ್ತಿಗೆ ಒಂದು ಕೆಲಸವು ಬಹು ಕಠಿಣವಾಗಿದ್ದಾಗ ಅಥವಾ (೨) ಒಂದು ಕೆಲಸದಲ್ಲಿ ಅನೇಕ ವಿಭಾಗಗಳಿದ್ದಾಗ. ಒಂದು ಕೆಲಸದಲ್ಲಿ ಅನೇಕ ವಿಭಾಗಗಳಿದ್ದರೆ ಶ್ರಮವಿಭಾಗಕ್ಕೂ ನಿಪುಣತೆಗೂ ಆಸ್ಪದ ದೊರೆಯುತ್ತದೆ. ಇದರಿಂದ ಪೃಥಕ್ಕರಣಕ್ಕೂ (Differentiation) ಆಸುವು ದೊರೆತು ಬೇರೆಬೇರೆ ವ್ಯಕ್ತಿಗಳು ತಮ್ಮ ತಮ್ಮ ಕೆಲಸಗಳಲ್ಲಿ ನಿರತರಾಗುತ್ತಾರೆ.

ಆದುದರಿಂದ ಸಹಕಾರ ಮತ್ತು ಪೃಥಕ್ಕರಣಗಳು ಅತ್ಯಾವಶ್ಯಕವಾದ

ತತ್ವಗಳು. ಅವುಗಳ ಬದಲು ಇನ್ನಿತರ ತತ್ವಗಳನ್ನು ಕಲ್ಪಿಸುವುದಕ್ಕಾಗಲಿ ಅಥವಾ ಅವುಗಳಲ್ಲಿ ಸುಧಾರಣೆಯನ್ನು ಮಾಡುವುದಕ್ಕಾಗಲಿ ಮಾನವನಿಗೆ ಇವತ್ತಿಗೂ ಸಾಧ್ಯವಾಗಿಲ್ಲ. ಯಾಕೆಂದರೆ ವ್ಯಕ್ತಿಗಳು ತಮ್ಮ ನಿಷ್ಣಾತ ಕೆಲಸಗಳಿಂದ ಪರಸ್ಪರರಿಗೆ ಸಹಾಯಮಾಡಬೇಕೆಂದು ಕೂಡಿದಾಗ ಸಹಕಾರ ಪೃಥಕ್ಕರಣತತ್ವಗಳಿಗನುಗುಣವಾಗಿಯೇ ಹಾಗೆ ಮಾಡುತ್ತಾರೆ. ಉದಾಹರಣೆಗಾಗಿ ಬಡಿಗನೂ, ಉಪ್ಪಾರನೂ, ಕುಂಬಾರನೂ ಕೂಡಿದಾಗ ಒಂದು ಮನೆಯನ್ನು ಸಿದ್ಧಪಡಿಸಬಲ್ಲರು.

**ಶ್ರಮದ ಸುಸಂಘಟನೆ:** ಸಹಕಾರತತ್ವದ ಮೇರೆಗೆ ಕೆಲಸಮಾಡುವ ಜನರ ಗುಂಪಿನಲ್ಲಿ ಶ್ರಮದ ಸುಸಂಘಟನೆಯಿದೆ ಎಂದು ಹೇಳಬಹುದು. ಈ ಗುಂಪುಗಳು ತಮ್ಮ ವಿಸ್ತೃತಿಗನುಗುಣವಾಗಿ ವಿವಿಧ ರೂಪಗಳನ್ನು ತಾಳಬಹುದು. ಈಗ ಇಂತಹ ಗುಂಪುಗಳ ವಿಷಯವಾಗಿ ಬೇರೆಬೇರೆಯಾಗಿ ನಾವು ವಿಚಾರಿಸಬಹುದು.

ಮಾನವನು ತಂಡಗಳನ್ನು ಕಟ್ಟಿಕೊಂಡು ಸೃಷ್ಟಿಯ ವೈಚಿತ್ರ್ಯಗಳನ್ನು ಅವಲಂಬಿಸಿಕೊಂಡಿದ್ದ ಕೀಳು ತರಗತಿಯಿಂದ, ಈಹೊತ್ತು ಅವನು ಅಂತರರಾಷ್ಟ್ರೀಯ ವ್ಯಾಪಾರವೆಂಬ ರಂಗಭೂಮಿಯ ಮೇಲೆ ಜಗತ್ತನ್ನು ಆಳುತ್ತಿರುವ ವರೆಗೂ ಸುಸಂಘಟಿತ ಶ್ರಮವು ಹೇಗೆ ಕ್ರಮೇಣ ಬೆಳೆದುಬಂದಿದೆ ಎಂಬುದನ್ನು ನೋಡಬೇಕು.

**ಮೊಟ್ಟಮೊದಲಿನ ಅಥವಾ ಅತಿಪೂರ್ವದ ಆಪ್ತತ್ವದ ಅವಸ್ಥೆ:** ಸ್ವಯಂಪರಿಪೂರ್ಣವಾದ ತಂಡಗಳಲ್ಲಿ ಶ್ರಮದ ಸುಸಂಘಟನೆ: ಸಂಸ್ಕೃತಿಯು ತೀರ ಕೆಳಗಿನ ಅವಸ್ಥೆಯಲ್ಲಿ ಮನುಷ್ಯನು ತಂಡಗಳನ್ನು ಕಟ್ಟಿಕೊಂಡಿದ್ದುದು ಕಂಡುಬರುತ್ತದೆ. ಒಂದೊಂದು ತಂಡದಲ್ಲಿಯ ಜನರು ಒಂದೇ ತಂದೆತಾಯಿಗಳಿಂದ ಹುಟ್ಟಿದವರೂ ರಕ್ತಸಂಬಂಧವುಳ್ಳವರೂ ಆಗಿರುತ್ತಿದ್ದರು. ಇಂತಹ ಗುಂಪುಗಳು ತಮ್ಮ ಗುಂಪುಗಳಲ್ಲಿಯ ಜನರನ್ನು ಆಪ್ತರೆಂದೂ, ಹೊರಗಿನವರನ್ನು ಪರಕೀಯರು ಅಥವಾ ಶತ್ರುಗಳೆಂದೂ ಭಾವಿಸುತ್ತಿದ್ದರು. ತಮ್ಮೊಳಗಿನವನಿಗಾದ ಅಪರಾಧದ ಬಗ್ಗೆ ಸೇಡುತೀರಿಸಿಕೊಳ್ಳುವುದು ತಮ್ಮೆಲ್ಲರ ಕರ್ತವ್ಯವೆಂದು ಅರಿತಿರುತ್ತಿದ್ದರು. ತಮ್ಮ ನೆರೆಹೊರೆಯ ತಂಡದವರೊಡನೆ

ಸುದೀರ್ಘ ಕಲಹಗಳಲ್ಲಿ ತೊಡಗಿರುತ್ತಿದ್ದರು. ತಮ್ಮ ಏಕೀಕರಣದಿಂದಲೇ ತಮ್ಮ ಜೀವನಸಮರವನ್ನು ಸಾಗಿಸುತ್ತಿದ್ದರು.

ಯುದ್ಧಗಳಂತಹ ಹೋರಗಿನ ಕೆಲಸಗಳಲ್ಲಿಯೇ ಅವರಲ್ಲಿ ಸುಸಂಘಟನೆ ಆಗಿರುತ್ತಿತ್ತೆಂತಲ್ಲ. ಶಾಂತತೆಯ ಅನೇಕ ಚಟುವಟಿಕೆಗಳಲ್ಲಿಯೂ ಇಂತಹ ಸುಸಂಘಟನೆ ಕಂಡುಬರುತ್ತಿತ್ತು. ಆದುದರಿಂದ ಅದು ಸಾಂಪತ್ತಿಕ ಐಕ್ಯಕ್ಕೂ (Economic union), ಶ್ರಮದ ಸಂಘಟನೆಗೂ ಸಹಾಯ ಕಾರಿಯಾಗುತ್ತಿತ್ತು. ಎಲ್ಲರೂ ಕೂಡಿಕೊಂಡು ವೈಯ್ಯಕ್ತಿಕವಾಗಿ ಮಾಡ ಲಸಾಧ್ಯವಾದ ಕೆಲಸಗಳನ್ನು ಮಾಡುತ್ತಿದ್ದರು. ಬೇಟೆಯಾಡುವುದರಲ್ಲಿ ಅನೇಕರು ಕೂಡಿಕೊಂಡು ಬೇಟೆಯನ್ನು ಗುರುತಿಸಿ ಅದನ್ನು ನಿರ್ದಿಷ್ಟ ಸ್ಥಳಕ್ಕೆ ತರಲು ಪ್ರಯತ್ನಿಸುತ್ತಿದ್ದರು. ಅನೇಕರು ಕೂಡಿಕೊಂಡು ವನ್ಯ ಪಶುಗಳನ್ನು ಕೊಲ್ಲುತ್ತಿದ್ದರು. ಎಲ್ಲರೂ ಕೂಡಿ ಮೀನು ಹಿಡಿಯುತ್ತಿದ್ದರು. ಗಿಡ ಕಡಿಯುವುದರಲ್ಲಿಯೂ ಕಾಡುಪಶುಗಳನ್ನು ಹಿಡಿಯುವುದಕ್ಕೆ ತಗ್ಗು ತೋಡುವುದರಲ್ಲಿಯೂ ಎಲ್ಲರೂ ಸಹಕರಿಸುತ್ತಿದ್ದರು. ಕಟ್ಟಿಗೆಗಳನ್ನು ಉಜ್ಜಿ, ಬೆಂಕಿ ಹೊತ್ತಿಸುತ್ತಿದ್ದರು. ಮೀನುಗಳ ಬಲಿಗಳನ್ನು ಮಾಡುವುದ ರಲ್ಲಿಯೂ, ನಾವುಗಳನ್ನು, ಗುಡಿಸಲುಗಳನ್ನು ಕಟ್ಟುವುದರಲ್ಲಿಯೂ ಎಲ್ಲರೂ ಭಾಗವಹಿಸುತ್ತಿದ್ದರು.

ಬೇಟೆಯಿಂದ ದೊರೆತ ಆಹಾರವು ಎಲ್ಲರ ಸೊತ್ತು. ಈ ಕಾಡು ಜನರಲ್ಲಿ ಅತಿಥಿಸತ್ಕಾರವು ಅಸ್ತಿತ್ವದಲ್ಲಿತ್ತು. ಊಟವು ನಡೆದಾಗ ನೆರೆಯವರು ಭಾಗ ವಹಿಸಬಹುದಿತ್ತು. ಬರಗಾಲದಲ್ಲಿ ತಮ್ಮಲ್ಲಿದ್ದಬಿದ್ದುದನ್ನೆಲ್ಲ ಸರಿಸಮಾನ ವಾಗಿ ಹಂಚುತ್ತಿದ್ದರು. ಈಗಲೂ ಕೂಡ ಎಷ್ಟೋ ಬೇಟೆಗಾರರಲ್ಲಿ, ಆಸ್ಟ್ರೇಲಿಯನ್‌ರಲ್ಲಿ, ಎಸ್ಕಿಮೋ ಜನರಲ್ಲಿ ಈ ಸಾಂಘಿಕ ರೀತಿಯು ಪ್ರಚಾರ ದಲ್ಲಿದೆ. ಬೇಟೆಯಲ್ಲಿ ಸಿಕ್ಕ ಪ್ರಾಣಿಯನ್ನು ಕೆಲವೊಂದು ನಿಯಮಗಳಂತೆ ಈಗಲೂ ಹಂಚುತ್ತಾರೆ. ಉದಾರಮನಸ್ಸು ಮಿಗಿಲಾದದ್ದೆಂದೂ, ಸಾಮಗ್ರಿ ಗಳ ವೈಪುಲ್ಯವನ್ನು ಗೆಳೆಯರಲ್ಲಿ ವಿಭಾಗಿಸದೆ ಬಚ್ಚಿಟ್ಟುಕೊಳ್ಳುವುದು ಕಳ್ಳ ತನವೆಂದೂ ಭಾವಿಸುತ್ತಿದ್ದರು.

ಪ್ರಾಕೃತಿಕ ಜನರ ಆದರಾತಿಥ್ಯವು ಸುಸಂಸ್ಕೃತರನ್ನೂ ಎಷ್ಟೋಸಲ ದಂಗುಬಡಿಸಿವೆ. ಆದರಾತಿಥ್ಯದ ಅವಶ್ಯಕತೆ ತಮಗೇ ಹೆಚ್ಚಾಗಿದ್ದರೂ ಆ

ಜನರು ಅತಿಥಿಸತ್ಕಾರವನ್ನು ಮಾಡುವರು. ಈಸ್ಟರ ನಡುಗಡ್ಡೆಯ ಕೃಶ-ಕಾಯರಾದ ನಿವಾಸಿಗಳು 'ಕುಕ್' ನ ಗೆಳೆಯರನ್ನು ತಮ್ಮ ಬಡ ಊಟದಲ್ಲಿ ಭಾಗಿಗಳಾಗಲು ಆಮಂತ್ರಿಸಿದರು. ಡಾರ್ವಿನ್‌ನು ಹೇಳುವಂತೆ ಫ್ಯೂಜಿಯನ್‌ರಲ್ಲಿ ಒಂದು ಅರಿವೆಯ ತುಣುಕು ಕೂಡ ಚೂರುಚೂರಾಗಿ ಹರಿಯಲ್ಪಟ್ಟು ಎಲ್ಲರಲ್ಲಿಯೂ ಹಂಚಲ್ಪಡುತ್ತದೆ. ಯಾವನೂ ಮತ್ತೊಬ್ಬನಿಗಿಂತ ಸಿರಿವಂತನಾಗಬಾರದೆಂಬುದೇ ಇದರ ಗೂಢಾರ್ಥ. ಹಿಂದಿಯರಲ್ಲಿ ಅತಿಥಿಸತ್ಕಾರವು ಅತಿಶಯವಾಗಿತ್ತೆಂದೂ ಈಗಲೂ ಇದೆಯೆಂದು ಹೇಳಬಹುದು. ಸೋಮಾರಿಗಳು ಉದ್ಯೋಗಿಗಳ ಅತಿಥಿಗಳಾಗುತ್ತಿದ್ದರು. ಆದುದರಿಂದ ಉದ್ಯೋಗಕ್ಕಿಂತ ಸೋಮಾರಿತನವೇ ಒಮ್ಮೊಮ್ಮೆ ಹೆಚ್ಚು ಪ್ರೋತ್ಸಾಹ ಹೊಂದುತ್ತಿತ್ತು. ಆಫ್ರಿಕೆಯಲ್ಲಿ ಬಂದವರೆಲ್ಲರೊಡನೆ ಊಟ ಮಾಡುವುದು ಸಾರ್ವತ್ರಿಕ ಪದ್ಧತಿಯಾಗಿದೆ. ಈ ಪದ್ಧತಿಯನ್ನು ಈಗಲೂ ಹಿಂದುಸ್ಥಾನ, ಚೀನ, ಇಟಲಿ, ಜರ್ಮನಿಗಳ ರೈತಾವಳಿಯು ಅನುಸರಿಸುತ್ತಿದೆ.

ತಾವು ವಾಸವಾಗಿರುವ ಪ್ರದೇಶದ ಭೂಮಿಯು ಕೂಡ ತಂಡದಲ್ಲಿರುವವರೆಲ್ಲರ ಸಮಾನವಾದ ಆಸ್ತಿ ಎಂದು ಭಾವಿಸುತ್ತಾರೆ. ಎಂದ ಮೇಲೆ ಬುನಾದಿಕಾಲದ ಜನಾಂಗಗಳಲ್ಲಿ ಸಾಂಘಿಕ ತತ್ವವು ಎಷ್ಟು ದೃಢವಾಗಿ ಬೇರೂರಿತ್ತೆಂಬುದು ಸ್ಪಷ್ಟವಾಗುತ್ತದೆ. ಆದರೂ ಬುನಾದಿಕಾಲದ ಮನುಷ್ಯನಿಗೆ ಸ್ವಂತ ಆಸ್ತಿಯ ವಿಚಾರವಿರಲಿಲ್ಲವೆಂದು ತಿಳಿಯುವದು ತಪ್ಪು. ಆಯುಧಗಳು, ಉಪಕರಣಗಳು, ಸಂಸಾರಕ್ಕೆ ಬೇಕಾಗುವ ವಸ್ತುಗಳು, ಆಭರಣಗಳು ಮುಂತಾದವು ಒಬ್ಬನ ಸ್ವಂತ ಆಸ್ತಿಯೆಂದು ಗಣಿಸಲ್ಪಡುತ್ತಿದ್ದವು. ಯಾವನೊಬ್ಬನು ಮೃತನಾದರೆ ಅವನ ಇಂತಹ ಆಸ್ತಿಯು ಅವನ ಮಕ್ಕಳುಮರಿಗಳಿಗೆ ಹೋಗದೆ, ಅವನೊಡನೆ ಅವನ ಗೋರಿಯಲ್ಲಿ ಹುಗಿಯಲ್ಪಡುತ್ತಿತ್ತು. ತಂಡದ ಜನರು ತೀರ ಕೀಳುತರಗತಿಯಲ್ಲಿದ್ದಾಗಲೂ ಒಳ್ಳೇ ಬಲಿಷ್ಠವಾದ ಸುಸಂಘಟನೆಗಳನ್ನು ಮಾಡಿಕೊಂಡು, ಯುದ್ಧಕಾಲದಲ್ಲಿಯೂ ಶಾಂತತೆಯಲ್ಲಿಯೂ ಎಲ್ಲರೂ ಒಟ್ಟಾಗಿ ಕೆಲಸಮಾಡುತ್ತಿದ್ದರು.

ಸಂಸ್ಕೃತಿಯ ತೀರ ಕೆಳಗಿನ ಸ್ಥಿತಿಯಲ್ಲಿ ನಾವು ಕಾಣಬಹುದಾದ ತಂಡಗಳಲ್ಲಿಯೂ ಶ್ರಮಸಂಘಟನೆಯ ಬೇರೊಂದು ರೂಪವು ಕಂಡುಬರುತ್ತದೆ. ಅದಾವುದೆಂದರೆ 'ಕುಟುಂಬ'— ಮಾನವನನ್ನು ತನ್ನ ಹೆಂಡಿರು

ಮಕ್ಕಳೊಡನೆ ತೀವ್ರವಾಗಿ ಸಂಬಂಧಿಸುವುದು. ಕುಟುಂಬವು ಕೇವಲ ಸಾಮಾಜಿಕ ಸಮುದಾಯವಾಗಿರದೆ, ಸಾಂಪತ್ತಿಕ ಅಭಿವೃದ್ಧಿಗಾಗಿಯೂ ನಿರ್ಮಿತವಾಗಿರುತ್ತದೆ. ಲಿಂಗಗಳಿಗನುಗುಣವಾಗಿ ಪೃಥಕ್ಕರಣತತ್ವದ ಮೇರೆಗೆ ಗಂಡಹೆಂಡಿರಲ್ಲಿ ಶ್ರಮವಿಭಾಗವಾಗುವುದೇ ಸಾಂಪತ್ತಿಕ ಅಭಿವೃದ್ಧಿಗೆ ಕಾರಣ. ಗಂಡಸು ಯೋಧನೂ ಬೇಟೆಗಾರನೂ ಆಗಿರುತ್ತಾನೆ. ತನ್ನ ಕೆಲಸಗಳಿಗೆ ಬೇಕಾದ ಆಯುಧಗಳನ್ನೂ, ಉಪಕರಣಗಳನ್ನೂ ಮಾಡಿಕೊಳ್ಳುತ್ತಾನೆ. ಹೆಂಗಸು ಗುಡಿಸಲನ್ನು ಕಟ್ಟುವುದು, ಬೆಂಕಿಯನ್ನು ಹೊತ್ತಿಸುವುದು, ಅಡಿಗೆ ಮಾಡುವುದು, ಶಿಶುಸಂಗೋಪನ ಮುಂತಾದ ಅನೇಕ ಮಹತ್ವದ ಕೆಲಸಗಳನ್ನು ಮಾಡಬೇಕಾಗುತ್ತದೆ. ಇಂತು ಕೆಲಸಗಳಲ್ಲಿ ಹೆಂಗಸು ಗಂಡಸಿಗೆ ಯೋಗ್ಯವಾಗುವಂತೆ ಪೃಥಕ್ಕರಣವನ್ನು ಕಾಣಬಹುದು. ಒಂದೊಂದು ಕೆಲಸದಲ್ಲಿ ನುರಿತವರು ಎಲ್ಲರೂ ಒಮ್ಮನಸ್ಸಿನಿಂದ ದುಡಿದರೆ ಶ್ರಮವಿಭಾಗವು ಸಾಧ್ಯವಾಗುವುದು. ಹೆಣ್ಣು ಗಂಡು ಪರಸ್ಪರರಿಗೆ ಪೂರಕಗಳಾಗಿರಬೇಕು. ಪೂರ್ವಕಾಲದ ಮದುವೆ ಎಂದರೆ ಸಾಂಪತ್ತಿಕ ಬೆಳವಣಿಗೆಗಾಗಿಮಾಡಿದ ಐಕ್ಯ.

ಕುಟುಂಬವು ತಂಡದ ಒಂದು ಭಾಗ. ತಂಡವೇ ಅದಕ್ಕೆ ಬೇಕಾದುದೆಲ್ಲವನ್ನು ನಿರ್ಮಿಸುತ್ತದೆ. ಕುಟುಂಬಕ್ಕಿಂತಲೂ ತಂಡವೇ ಸ್ವಯಂ ಪರಿಪೂರ್ಣವಾಗಿರುತ್ತದೆ.

ಈ ಮೊದಲೇ ಹೇಳಿದಂತೆ ಸಂಸ್ಕೃತಿಯ ಕೆಳಮೆಟ್ಟಲಿನಲ್ಲಿ ಶ್ರಮಸಂಘಟನೆಯ ಎರಡು ರೂಪಗಳನ್ನುಕಾಣಬಹುದು-(೧) ಉದ್ಯಮ, ಆಹಾರ ಭೂಮಿಗಳನ್ನು ಸಾಮೂಹಿಕವಾಗಿ ಉಪಯೋಗಿಸಿಕೊಳ್ಳುವ ತಂಡಗಳು ಮತ್ತು (೨) ಗಂಡಸು ಹೆಂಗಸರಲ್ಲಿ ಶ್ರಮವಿಭಾಗ ಮಾಡಿಕೊಂಡ ಕುಟುಂಬಗಳು.

ಇವೆರಡರುಗಳಲ್ಲಿ ಯಾವುದು ಹಳೆಯದೆಂದು ನಿರ್ಧಾರವಾಗಿ ಹೇಳಲು ಬರುವಂತಿಲ್ಲ. ಅತಿ ಪೂರ್ವದಲ್ಲಿ ತಂಡಗಳ ಸಂಘಟನೆಯೇ ಇತ್ತೆಂದೂ, ಕುಟುಂಬಗಳು ನಂತರ ಉಂಟಾಗಿರಬೇಕೆಂದೂ ತೋರುತ್ತದೆ.

**ಎರಡನೆಯ ಅಥವಾ ಮೇಲ್ತರಗತಿಯ ಅಸ್ತಿತ್ವದ ಅವಸ್ಥೆ:-** ಬರಬರುತ್ತ ಈ ಸ್ವಯಂ ಪರಿಪೂರ್ಣವಾದ ತಂಡಗಳೇ ಪರಸ್ಪರರನ್ನವಲಂಬಿ

ಸುವ ರಾಷ್ಟ್ರಗಳಾಗಿ ಪರಿಣಮಿಸಿದುವು. ಹೀಗೆ ಪರಾವಲಂಬಿಗಳಾಗಲು ಸುರುವುಮಾಡಿದ ಮೊದಲನೆಯ ಹೆಜ್ಜೆಯೆಂದರೆ, ಒಂದು ತಂಡವು ತನ್ನ ನೆರೆ-ಹೊರೆಯ ತಂಡದೊಡನೆ ತನ್ನ ಭೂಮಿಯಲ್ಲಿ ಬೆಳೆದ ಪದಾರ್ಥಗಳನ್ನು ವಿನಿಮಯ ಮಾಡಲು ಪ್ರಾರಂಭಿಸಿದುದು. ಇದರ ಪರಿಣಾಮವಾಗಿ ಶ್ರಮ-ವಿಭಾಗವು ಬೆಳೆದು, ತಂಡ ಕುಟುಂಬಗಳಲ್ಲಿ ಅಲ್ಲದೆ ಪರಕೀಯರೊಡನೆ ವ್ಯಾಪಾರವನ್ನು ಕೈಕೊಳ್ಳುವ ಬೇರೊಂದು ಜನಸಮುದಾಯವು ಉಂಟಾಯಿತು. ಶ್ರಮವಿಭಾಗವನ್ನರಿಯದ ಎಷ್ಟೋ ತಂಡಗಳಲ್ಲಿಯೂ ಪರಸ್ಪರರೊಡನೆ ವ್ಯಾಪಾರಕ್ಕಾಗಿದ್ದ ಸಂಬಂಧವು ಕಂಡುಬರುತ್ತಿದೆ. ಆದರೆ ಆಸ್ಟ್ರೇಲಿಯ ಮತ್ತು ಬೋರ್ನಿಯಾದ ಕೆಲವೊಂದು ತಂಡಗಳಲ್ಲಿ ಮಾತ್ರ ಈ ಪದ್ಧತಿ ಇದ್ದಿರಲಿಲ್ಲ. ೧೭೭೦ ರಲ್ಲಿ ಆಸ್ಟ್ರೇಲಿಯದ ಕೆಲವೊಂದು ತಂಡಗಳ ಸಂಪರ್ಕ ಪಡೆದ ಕಪ್ತಾನ 'ಕುಕ್'' ನು ಹೇಳುವದೇನಂದರೆ: ಅವರೊಡನೆ ನಾವು ವ್ಯಾಪಾರ ಮಾಡುವದು ಅಸಾಧ್ಯವಾಯಿತು. ನಾವು ಕೊಟ್ಟ ಸಾಮಾನುಗಳನ್ನು ಅವರು ಸ್ವೀಕರಿಸುತ್ತಿದ್ದರು. ಅವುಗಳ ಬದಲಾಗಿ ನಾವು ಅವರಿಂದ ಕೆಲವು ವಸ್ತುಗಳನ್ನು ಇಚ್ಛಿಸುತ್ತೇವೆಂಬ ಸಮ್ಮ ಸನ್ನೆಗಳು ಅವರಿಗೆ ತಿಳಿಯುತ್ತಿದ್ದಿಲ್ಲ. 'ಡಾಂಪೀಯರ'ನು ಅವರಬಗ್ಗೆ ಹೀಗೆ ಹೇಳುತ್ತಾನೆ: ಅವರು ವ್ಯಾಪಾರದ ವಿಷಯವನ್ನೇ ಅರಿತಿರಲಿಲ್ಲ. ನಾವು ಮಾಡುವ ಸನ್ನೆಗಳೆಲ್ಲ ವ್ಯರ್ಥವಾಗುತ್ತಿದ್ದವು. ಅವರು ಬೆಪ್ಪಾಗಿ ನಿಲ್ಲುತ್ತಿದ್ದರು. ಮಂಗಗಳಂತೆ ಹಲ್ಲು ಕಿರಿಯುತ್ತ ಒಬ್ಬರನ್ನೊಬ್ಬರು ನೋಡುತ್ತ ನಿಲ್ಲುತ್ತಿದ್ದರು. ಬೋರ್ನಿಯೋದೊಳಗಿನ ಕೆಲವೊಂದು ಜನಾಂಗಗಳು ಇದೇ ರೀತಿ ವರ್ತಿಸುತ್ತಿದ್ದವೆಂದು 'ಬಾಕ್'' ಎಂಬವನು ಹೇಳುತ್ತಾನೆ. ತಮಗೆ ಬೇಕಾದುದೆಲ್ಲವನ್ನು ಒತ್ತಾಯದಿಂದ, ಕೊಲೆಮಾಡುವುದರಿಂದ ಕೂಡ ದೊರಕಿಸುವ ರೂಢಿ ಅವರಿಗಿತ್ತಂತೆ.

**ಬುನಾದಿಕಾಲದ ವಿನಿಮಯದ ಬಗೆಗಳು:–** ಎರಡನೆಯ ಅವಸ್ಥೆಯನ್ನು ತಲುಪಿದ ಪ್ರಾಕೃತಿಕ ಜನರಲ್ಲಿ ವಸ್ತು–ವಿನಿಮಯವು ಹೇಗಿತ್ತೆಂಬುದನ್ನು ವಿಚಾರಿಸೋಣ.

೧. **ಮೌನ ವಿನಿಮಯ:** ಇದು 'ಹೆರೊಡೋಟಸ್'ನಿಗೆ ಗೊತ್ತಿತ್ತು. ಪಶ್ಚಿಮ ಆಫ್ರಿಕೆಯ ತೀರಕ್ಕೆ ಹೋಗಿಬರುತ್ತಿದ್ದ ಕಾರ್ಥೆಜೇನಿಯನ್ನರ

ಬಗ್ಗೆ ಅವನು ಹೀಗೆ ಹೇಳುತ್ತಾನೆ. ಕಾರ್ಥೆಜೀನಿಯನ್ನರು ಆಫ್ರಿಕೆಯ ಕಾಡು ಜನರಿದ್ದ ಬಳಿಗೆ ಬಂದೊಡನೆ ತಮ್ಮ ಸರಕುಗಳನ್ನು ಸಮುದ್ರ ತೀರದ ಮೇಲೆ ಇಳುಹಿ, ಅವುಗಳನ್ನು ಅಂದವಾಗಿ ದಂಡೆಯ ಮೇಲಿಡುತ್ತಿದ್ದರು. ಆಮೇಲೆ ಅವರು ಹಡಗವನ್ನೇರಿ ದೊಡ್ಡ ಹೊಗೆಯನ್ನುಂಟುಮಾಡುತ್ತಿದ್ದರು. ಅಲ್ಲಿಯ ನಿವಾಸಿಗಳು ಹೊಗೆಯನ್ನು ನೋಡಿ ಸಮುದ್ರದ ದಂಡೆಗಿಳಿದು ಬಂದು, ಸರಕುಗಳ ಒದಲು ಬಂಗಾರವನ್ನಿಟ್ಟು ಅಲ್ಲಿಂದ ತುಸು ದೂರ ಹಿಂದೆ ಸರಿಯುತ್ತಿದ್ದರು. ಆಮೇಲೆ ಕಾರ್ಥೆಜೀನಿಯನ್ನರು ಹಡಗದಿಂದಿಳಿದು ಹೋಗಿ ಬಂಗಾರವನ್ನು ಪರೀಕ್ಷಿಸುತ್ತಿದ್ದರು. ಬಂಗಾರದ ಪ್ರಮಾಣವು ಸರಕಿಗೆ ಯೋಗ್ಯವಾದದ್ದಿದ್ದರೆ ಅದನ್ನು ತೆಗೆದುಕೊಂಡು ಪರ್ಯಟನ ಮಾಡುತ್ತಿದ್ದರು. ಅದು ಸಾಕಷ್ಟು ಇಲ್ಲದಿದ್ದರೆ ಮತ್ತೆ ತಮ್ಮ ಹಡಗುಗಳಿಗೆ ಮರಳಿ, ದಾರೀಕಾಯುತ್ತ ಕುಳಿತುಕೊಳ್ಳುತ್ತಿದ್ದರು. ಅಲ್ಲಿಯ ನಿವಾಸಿಗಳು ಮತ್ತೆ ಬಂದು ಅವರನ್ನು ತೃಪ್ತಿಪಡಿಸುವಂತೆ ಮತ್ತಿಷ್ಟು ಬಂಗಾರವನ್ನು ಇಡುತ್ತಿದ್ದರು. ಯಾವ ಪಕ್ಷದವರೂ ಇನ್ನೊಂದು ಪಕ್ಷಕ್ಕೆ ಅಪಾಯ ಮಾಡುತ್ತಿದ್ದಿಲ್ಲ. ಅವರಲ್ಲಿ ಯಾರೂ ಬಂಗಾರವನ್ನಾಗಲಿ ಸರಕುಗಳನ್ನಾಗಲಿ ಇಬ್ಬರಿಗೂ ತೃಪ್ತಿಯಾಗುವವರೆಗೆ ಮುಟ್ಟುತ್ತಿರಲಿಲ್ಲ.

ನಿಜವಾಗಿಯೂ ಇಂತಹ ವಸ್ತು-ವಿನಿಮಯವು ಪಶ್ಚಿಮ ಆಫ್ರಿಕೆಯಲ್ಲಿ ನಾಯಗರ ನದಿಯ ದಂಡೆಯ ಮೇಲೂ, ಜಗತ್ತಿನ ಇನ್ನಿತರ ಎಷ್ಟೋ ಭಾಗಗಳಲ್ಲಿಯೂ ಇನ್ನೂ ನಡೆಯುತ್ತದೆ. ಇಂಥ ಎಲ್ಲ ವ್ಯಾಪಾರವೂ ಒಂದು ಶಬ್ದವನ್ನು ಕೂಡ ಉಪಯೋಗಿಸದೆ ದೂರದಿಂದಲೇ ಸಾಗುತ್ತದೆ. ಇದು ಬುನಾದಿಕಾಲದ ಪರಸ್ಪರ ತಂಡಗಳಲ್ಲಿರುವ ಅವಿಶ್ವಾಸದ ಮತ್ತು ವೈರತ್ವದ ದ್ಯೋತಕವಾಗಿರುತ್ತದೆ. ಸಂಸ್ಕೃತಿಯ ಅಭಿವೃದ್ಧಿಗೆ ವ್ಯಾಪಾರವು ಅಮೌಲ್ಯ ಸಾಧನವೆಂಬುದು ಈಗ ವಿದಿತವಾಗಿದೆ. ಜನರಲ್ಲಿ ಶಾಂತತಾಪರಿಪೂರ್ಣವಾದ ಸಂಪರ್ಕವನ್ನು ಅದು ಬೆಳೆಸುತ್ತದೆ.

**೨. ಅತಿಥಿ ಕಾಣಿಕೆ ( Guest-gift )ಯಿಂದ ವಿನಿಮಯ:-** ಮಧ್ಯ ಬ್ರೆಝಿಲದಲ್ಲಿ ಈ ಪದ್ಧತಿಯು ರೂಢಿಯಲ್ಲಿತ್ತು. ಕೆಲವೊಂದು ತಂಡಗಳು ಕೆಲವೊಂದು ವಿಶಿಷ್ಟ ವಿನಿಮಯ ವಸ್ತುಗಳನ್ನು ಪಡೆದಿರುತ್ತಿದ್ದವು. ಆ ವಸ್ತುಗಳನ್ನೇ ಅವು ವಿನಿಮಯಕ್ಕಾಗಿ ಉಪಯೋಗಿಸುತ್ತಿದ್ದವು. ಕೊರ

ಳಲ್ಲಿ ಸರಮಾಡಿ ಹಾಕಿಕೊಳ್ಳಬಹುದಾದ ಚೌಕು ಸಿಂಪಿನ ಚೂರುಗಳು, ನೂಲು, ಉಯ್ಯಾಲೆ. ತಂಬಾಕು, ಮುಂತಾದವುಗಳಲ್ಲಿ ಒಂದೊಂದನ್ನು ಒಂದೊಂದು ತಂಡವು ವಿಶೇಷವಾಗಿ ಹೊಂದಿರುತ್ತಿತ್ತು. ಇಂತಹ ವಸ್ತು ಗಳನ್ನು ಆ ತಂಡಗಳು ಅತಿಥಿಯ ಕಾಣಿಕೆಯ ರೀತಿಯಿಂದ ಕೇಳಿಗಿನಂತೆ ವಿನಿ ಮಯ ಮಾಡುತ್ತಿದ್ದವು. ' ಪ್ರವಾಸಿಕನು ತನ್ನೊಡನೆ ಕೆಲವೊಂದು ಸರಕು ಗಳನ್ನು ತಂದಿರುತ್ತಿದ್ದನು. ತಾನು ಆದರದಿಂದ ಬರಮಾಡಿಕೊಳ್ಳಲ್ಪಟ್ಟರೆ ತನ್ನ ಯಜಮಾನನಿಗೆ ತನ್ನ ಸರಕುಗಳಲ್ಲಿಯ ಕೆಲವೊಂದು ವಸ್ತುಗಳನ್ನು ಕಾಣಿಕೆಯಾಗಿ ಕೊಟ್ಟು ಅದಕ್ಕೆ ಪ್ರತಿಯಾಗಿ ತನಗೆ ಬೇಕಾದ ವಸ್ತುವಾವು ದೆಂಬುದನ್ನು ವ್ಯಕ್ತಗೊಳಿಸುತ್ತಿದ್ದನು. ಇಂತಹ ತನಗೆ ಬೇಕಾದ ವಸ್ತುವಿನ ಅಲ್ಪಾಂಶವನ್ನು ಮಾತ್ರ ಮೊದಲು ಪಡೆದು ಉಳಿದುದನ್ನು ತಾನು ಹೋಗಲು ವಾಗ ಹೊಂದುತ್ತಿದ್ದನು. ಹೀಗೆ ವ್ಯಾಪಾರವು ಅತಿಥಿಯು ತಂದ ಕಾಣಿಕೆ ಗಳ ವಿನಿಮಯದಿಂದ ನಡೆಯುತ್ತಿತ್ತು.

೩. ವಿನಿಮಯದ ಹೆಚ್ಚು ಸುಧಾರಿಸಿದ ರೂಪವೆಂದರೆ ಪೇಟೆಗಳ ನಿರ್ಮಾಣ. ಕೆಲವೊಂದು ತಂಡಗಳು ತಮ್ಮತಮ್ಮೊಳಗೆ ಜಗಳಾಟಗಳುಂಟಾಗ ಬಾರದೆಂದು ತಮ್ಮ ಪ್ರದೇಶಗಳ ಅಂಚಿನಲ್ಲಿ ಕೆಲವೊಂದು ಭಾಗವನ್ನು ಬರಿದಾಗಿ ಬಿಟ್ಟುಬಿಡುವ ರೂಢಿಯನ್ನಿಟ್ಟುಕೊಂಡಿದ್ದವು. ಇಂತಹ ತಟಸ್ಥ ಪ್ರದೇಶ ಗಳಲ್ಲಿ ಸಂತೆಗಳು ಅಥವಾ ಜಾತ್ರೆಗಳು ಕೆಲವೊಂದು ನಿರ್ದಿಷ್ಟ ಕಾಲಕ್ಕೆ ನೆರೆ ಯುತ್ತಿದ್ದವು. ಅಲ್ಲಿ ನೆರೆಹೊರೆಯ ತಂಡಗಳ ವಸ್ತುಗಳ ವಿನಿಮಯವು ಸಾಗುತ್ತಿತ್ತು. ಈ ಪ್ರಕಾರ ಉತ್ತರ ಅಮೇರಿಕೆಯ ಇಂಡಿಯನ್‌ರ ಒಂದು ದೊಡ್ಡ ಸಂತೆ ಮಿಸಿಸಿಪಿ ನದಿಯ ದಂಡೆಯ ಮೇಲೆ ನರಯುತ್ತಿತ್ತು. ' ಇಲ್ಲಿ ಎಲ್ಲರೂ ವ್ಯಾಪಾರಕ್ಕಾಗಿ ಕಲೆಯುತ್ತಿದ್ದರು. ವಿರುದ್ಧ ಪಕ್ಷಗಳಲ್ಲಿ ವ್ಯಾಪಾ ರವು ಮುಗಿಯುವ ವರೆಗೆ ಒಪ್ಪಂದವು ಸ್ವೀಕರಿಸಲ್ಪಡುತ್ತಿತ್ತು. '

ಪೂರ್ವಕಾಲದ ಈ ಎಲ್ಲ ಬಗೆಯ ವಿನಿಮಯದಲ್ಲಿ ಕೇವಲ ವಸ್ತುಗಳ ಪ್ರತ್ಯಕ್ಷ ವಿನಿಮಯದಿಂದಲೇ ಕೆಲಸವು ನಡೆಯುತ್ತಿತ್ತು. ದ್ರವ್ಯವಾಗಲಿ ಅಥವಾ ಬೇರೆ ಯಾವುದೊಂದು ವಿನಿಮಯಕ್ಕೆ ಸಹಾಯಕಾರಿಯಾದ ಮಧ್ಯವರ್ತಿ ವಸ್ತುವಾಗಲಿ ಇರುತ್ತಿರಲಿಲ್ಲ. ಅದಲ್ಲದೆ ಪ್ರತಿಯೊಬ್ಬನೂ ಏಕಕಾಲಕ್ಕೆ ಮಾರುವವನೂ ಕೊಳ್ಳುವವನೂ ಆಗಿರುತ್ತಿದ್ದನು. ಪ್ರತ್ಯೇಕ

ವಾದ ವ್ಯಾಪಾರೀ ವರ್ಗವೇ ಆಗ ಇರಲಿಲ್ಲ. ತನ್ನ ವ್ಯಾಪಾರವನ್ನು ಪ್ರತಿ ಯೊಬ್ಬನೂ ತಾನೇ ಮಾಡಿಕೊಳ್ಳುತ್ತಿದ್ದನು.

**೩ನೆಯ ಅಥವಾ ಪೂರ್ವದ ಔದ್ಯೋಗಿಕ ಅವಸ್ಥೆ:-** ಅರ್ಧ ಸುಧಾ ರಿಸಿದ ಜನರಲ್ಲಿ ಹೊಲಗಳ ಮತ್ತು ಹಳ್ಳಿಗಳ ಆಡಳಿತೆ: ನಾವು ಇಲ್ಲಿಯ ವರೆಗೆ ಪರಿಶೀಲಿಸಿದ ಎಲ್ಲ ಜನರು ಸಾಂಪತ್ತಿಕ ದೃಷ್ಟಿಯಿಂದಲೂ ಸಾಮಾಜಿಕ ದೃಷ್ಟಿಯಿಂದಲೂ ಸಮಾನರಾಗಿದ್ದರು. ಇನ್ನೂ ಯಜಮಾನ ಮತ್ತು ಸೇವಕ, ಸಿರಿವಂತ ಮತ್ತು ಬಡವ ಎಂಬ ಭೇದವು ಉಂಟಾಗಿರಲಿಲ್ಲ. ಲಿಂಗ ಭೇದಕ್ಕನುಗುಣವಾಗಿ ಶ್ರಮವಿಭಾಗವಾಗಿತ್ತಲ್ಲದೆ ಅದಕ್ಕಿಂತಲೂ ಹೆಚ್ಚಿನ ಶ್ರಮವಿಭಾಗ ಅಥವಾ ವಿಶಿಷ್ಟ ಉದ್ಯೋಗಗಳು ಇನ್ನೂ ಬೆಳೆದಿರಲಿಲ್ಲ.

ನಾವು ಈ ಬೇಟೆಗಾರರಿಂದ ಮತ್ತು ದನಗಾರರಿಂದ ನಮ್ಮ ನೋಟ ವನ್ನು ತಿರುಗಿಸಿ ಓಸಿಯಾನಿಯಾದ ಮತ್ತು ಆಫ್ರಿಕೆಯ ಒಕ್ಕಲುತನ ಕೈಕೊಂ ಡವರನ್ನು ನಿರೀಕ್ಷಿಸಿದರೆ ದೃಶ್ಯವು ಬದಲಾಗುತ್ತದೆ. ಸಾಮಾಜಿಕ ಅಸಮ ತೆಯು ಗೋಚರವಾಗುತ್ತದೆ. ಅದರಿಂದಲೇ ಸಾಂಪತ್ತಿಕ ಅಸಮತೆಯೂ, ಜನರು ವಿಶಿಷ್ಟ ಉದ್ಯೋಗಗಳನ್ನು ಕೈಕೊಳ್ಳುವುದೂ ಕಂಡುಬರುತ್ತದೆ.

ಒಕ್ಕಲುತನವು ಸ್ಥಾಯೀ ಜೀವನಕ್ಕೆ ಎಡೆಮಾಡಿಕೊಟ್ಟೊಡನೆ, ಯುದ್ಧದಲ್ಲಿ ಸೆರೆಸಿಕ್ಕವರನ್ನು ಗುಲಾಮರನ್ನಾಗಿ ಮಾಡಿ ಅವರನ್ನು ಕೊಲ್ಲು ವದರ ಬದಲು, ಜಯಶಾಲಿಗಳು ಅವರನ್ನು ತಮ್ಮ ಹೊಲಗಳಲ್ಲಿ ದುಡಿಯಲು ಹಚ್ಚುತ್ತಿದ್ದರು. ಇದರಿಂದ ಸಾಮಾಜಿಕ ಮತ್ತು ಸಾಂಪತ್ತಿಕ ಭೇದಭಾವ ಗಳುಂಟಾದವು. ಯಜಮಾನರು ತಾವು ಸುಲಭ ಕೆಲಸಗಳನ್ನು ಕೈಕೊಂಡು ಒಟಟಾದ ಕಠಿಣ ಕೆಲಸಗಳನ್ನು ತಮ್ಮ ಗುಲಾಮರಿಗೆ ಕೊಡುತ್ತಿದ್ದರು. ಇಂತಹ ಪೃಥಕ್ಕರಣದಿಂದುಂಟಾದ ಶ್ರಮ ಸಂಘಟನೆಯ ಬದಲಾವಣೆಯನ್ನು ಈಗ ಪರಿಶೀಲಿಸುವಾ. ಮೊದಲು ಪೊಲಿನೇಸಿಯಾದಲ್ಲಿ ಅದು ಉಂಟಾದ ಬಗೆಯನ್ನು ಆ ಮೇಲೆ ಆಫ್ರಿಕೆಯಲ್ಲಿ ಅದು ತಾಳಿದ ರೂಪವನ್ನು ನೋಡೋಣ:

**(ಅ)i ಪೊಲಿನೇಸಿಯಾದಲ್ಲಿ ಶ್ರಮಸಂಘಟನೆ ii ಅಧಿಕಾರಯುಕ್ತ ಏಕತ್ರ ಕುಟುಂಬಗಳು:–** ಪೊಲಿನೇಸಿಯಾದಲ್ಲೆಲ್ಲ. ಸಮಾಜವು ಮೂರು ವಿಧವಾಗಿರುತ್ತದೆ-(೧) ಸರದಾರರು–ರಾಜ್ಯದಾಡಳಿತೆ ಮಾಡುವವರು, (೨) ಸ್ವತಂತ್ರರು ಮತ್ತು, (೩) ಗುಲಾಮರು ಎಂದರೆ ಯುದ್ಧದಲ್ಲಿ ಸೆರೆಯಾಳು

ಗಳಾದವರು. ಸರದಾರರು ಅಪಾರವಾದ ಆಸ್ತಿಯನ್ನು ಪಡೆದಿರುತ್ತಾರೆ. ಗುಲಾಮರು ಅದರಲ್ಲಿಯ ಕೆಲಸವನ್ನು ಸಾಗಿಸಿಕೊಂಡು ಹೋಗುತ್ತಾರೆ. ಶ್ರಮವಿಭಾಗದ ಮೂಲಕ ಒಂದು ಏಕತ್ರ ಕುಟುಂಬದ ಎಲ್ಲ ಕೊರತೆಗಳು ಅದರೊಳಗಿನ ಜನರ ಕೆಲಸಗಳಿಂದಲೇ ಪೂರೈಸಲ್ಪಡುತ್ತವೆ. ದಣಿಯು ಅನೇಕ ಸ್ವತಂತ್ರರನ್ನೂ ತನ್ನೆಡೆಗೆಳೆದುಕೊಂಡು ಅವರು ತನ್ನನ್ನು ಅವಲಂಬಿಸುವಂತೆ ಮಾಡುತ್ತಾನೆ. ಒಬ್ಬೊಬ್ಬ ಪೊಲಿನೇಸಿಯದ ಸರದಾರನ ಒಳಿ ಹೊಲದಲ್ಲಿ ಕೆಲಸ ಮಾಡುವವರು, ಮೀನುಗಾರರು, ದೋಣಿಗಳನ್ನು ಕಟ್ಟುವವರು, ಬಡಿಗರು, ಬಲಿಗಾರರು, ಕಟ್ಟಿಗೆ ಕಡಿಯುವವರು, ಮನೆಯಲ್ಲಿ ಕೆಲಸ ಮಾಡುವ ಸೇವಕರು, ಅಡಿಗೆಯವರು ಮುಂತಾಗಿ ಇರುತ್ತಾರೆ. ಇದಲ್ಲದೆ ನೇಯುವ, ಹೊಲಿಯುವ, ಹಾಡುವ, ಕುಣಿಯುವ ಸ್ತ್ರೀಯರೂ ಇರುತ್ತಾರೆ.

ಇಂತಹ ಸಂಘಟನೆಗಳಲ್ಲಿ ಶ್ರಮವಿಭಾಗವು ಕೇವಲ ಲಿಂಗಭೇದವನ್ನ ನುಸರಿಸದೆ ವೈವಿಧ್ಯವನ್ನು ಪಡೆದಿರುತ್ತದೆ. ಗಂಡಸಿನ ಕೆಲಸದಲ್ಲಿಯೇ ಶ್ರಮವಿಭಾಗವು ಎಷ್ಟೋ ವಿಸ್ತೀರ್ಣವಾಗಿರುತ್ತದೆ. ಒಬ್ಬೊಬ್ಬನು ಒಂದೊಂದು ವಿಶಿಷ್ಟ ಕೆಲಸವನ್ನು ಕೈಕೊಂಡು ತನ್ನ ಜನರ ಕೊರತೆಗಳನ್ನು ಒಂದೊಂದು ವಿಧವಾಗಿ ಪೂರೈಸುತ್ತಾನೆ. ಸಣ್ಣ ಸಣ್ಣ ಕುಟುಂಬಗಳೇ ಬೆಳೆದು ಇಂತಹ ಸ್ವಯಂ ಪರಿಪೂರ್ಣವಾದ ಸಂಘಟನೆಗಳಾಗುತ್ತವೆ.

ಇದಲ್ಲದೆ ಕೆಲವೊಂದು ಸ್ವತಂತ್ರ ಶಿಲ್ಪಿಗಳು ಕೈಗಾರಿಕೆ ಬಲ್ಲವರೂ ಇರುತ್ತಾರೆ. ಇವರಿಗೆ ಯೋಗ್ಯವಾದ ವೇತನವನ್ನಿತ್ತು ಇವರ ಕೆಲಸದ ಲಾಭವನ್ನು ಯಾರೂ ಪಡೆದುಕೊಳ್ಳಬಹುದು.

ಈ ಜನರಲ್ಲಿ ತಂಡದ ವಿಚಾರವಳಿದು ಸಮಾಜದ ವಿಚಾರವು ತಲೆದೋರುತ್ತದೆ. ಅನೇಕ ತಂಡಗಳು ಕೂಡಿಕೊಂಡು ಹಳ್ಳಿಯಂತಹ ಒಂದು ಜನಸಮುದಾಯವನ್ನು ಕಟ್ಟಿಕೊಳ್ಳುತ್ತವೆ. ಒಬ್ಬ ದಣಿಯು ಆ ಸಮಾಜದ ಹೊಣೆ ಹೊರುತ್ತಾನೆ. ಇಂತಹ ಅನೇಕ ಹಳ್ಳಿಗಳು ಕೂಡಿ ಒಬ್ಬ ಒಡೆಯನ ಅಧೀನದಲ್ಲಿ ತಮ್ಮ ರಾಜ್ಯವನ್ನು ಕಟ್ಟಿಕೊಳ್ಳುತ್ತವೆ.

**(ಬ) ಆಫ್ರಿಕೆಯಲ್ಲಿ ಶ್ರಮಸಂಘಟನೆ:-** ತುಸು ಹೆಚ್ಚುಕಡಿಮೆ

ಪ್ರಮಾಣದಿಂದ ಪೊಲಿನೇಸಿಯಾವ ಸ್ಥಿತಿಯೇ ಆಫ್ರಿಕೆಯಲ್ಲಿದ್ದಂತೆ ಕಂಡು ಬರುತ್ತದೆ.

ಆಫ್ರಿಕೆಯಲ್ಲಿ ಸಮಾಜವು—ಸರದಾರರು, ಸ್ವತಂತ್ರರು, ಗುಲಾಮ ರೆಂದು ಮೂರು ವಿಧವಾಗಿರುತ್ತದೆ. ತಂಡದ ಅಸ್ತಿತ್ವವು ಅಳಿಗಾಲವನ್ನು ಸಮೀಪಿಸುತ್ತಲಿದೆ. ಅನೇಕ ತಂಡಗಳು ಕೂಡಿ ಒಂದೊಂದು ಹಳ್ಳಿಯು ಸಮಾಜವನ್ನು ನಿರ್ಮಿಸುತ್ತವೆ. ಇಂತಹ ಎಷ್ಟೋ ಹಳ್ಳಿಗಳು ಒಬ್ಬ ಅರಸನ ಅಥವಾ ಮುಖ್ಯಸ್ಥನ ಅಂಕಿತದಲ್ಲಿರುತ್ತವೆ. ಈ ಮುಖ್ಯಸ್ಥನಿಗೆ ತಂಡಗಳಲ್ಲಿಯ ಹಿರಿಯರನ್ನೊಳಗೊಂಡ ಒಂದು ಆಲೋಚನಾ ಸಭೆ ಇರು ತ್ತದೆ. ಇಂತಹ ಸಭೆಯು ತಂಡದ ರಾಜಕೀಯ ವಿಷಯಗಳನ್ನು ಪರ್ಯಾ ಲೋಚಿಸುತ್ತದೆ. ತಂಡದ ಸಾಂಪತ್ತಿಕ ವಿಷಯಗಳನ್ನು ಆ ತಂಡದಲ್ಲಿರುವ ಬೇರೆ ಬೇರೆ ಕುಟುಂಬಗಳೇ ಪ್ರತ್ಯೇಕವಾಗಿ ನೋಡಿಕೊಳ್ಳುತ್ತವೆ. ಕುಟುಂಬ ಗಳಲ್ಲಿ ಹೆಚ್ಚಾದ ಕೆಲಸವು ಹೆಣ್ಣುಮಕ್ಕಳ ಮೇಲೆಯೇ ಬೀಳುತ್ತದೆ.

ಇವೆರಡೂ ಬಗೆಯ ಜನರ ಇರುವಿಕೆಯ ಮೇಲಿಂದ ವಿಶಿಷ್ಟ ಉದ್ಯೋಗ ಗಳು ಮತ್ತು ಸಾಂಪತ್ತಿಕ ಪೃಥಕ್ಕರಣವು ಕೆಳಗಿನ ಮೂರು ಕಾರಣಗಳಿಂ ದುಂಟಾದವೆಂದು ಹೇಳಬಹುದು.

೧. ಗುಲಾಮಗಿರಿಯಿಂದ

೨. ಸ್ವತಂತ್ರ ಶಿಲ್ಪಿಗಳಿಂದ

೩. ಬೇರೆ ಬೇರೆ ಜನಸಮುದಾಯಗಳ ನಡುವೆ ನಡೆಯುವ ವ್ಯಾಪಾರ ದಿಂದ.

ಆಫ್ರಿಕೆಯ ಪದ್ಧತಿಗಿಂತಲೂ ಹೆಚ್ಚಾಗಿ ಪೊಲಿನೇಸಿಯಾದ ಪದ್ಧತಿ ಯಿಂದಲೇ ನಮ್ಮ ಸಂಸ್ಕೃತಿ ಬೆಳೆದು ಬಂದಿತೆಂಬುದನ್ನು ನಾವು ಮುಂದೆ ಕಾಣುವೆವು.

**೪ನೆಯ ಅಥವಾ ಔದ್ಯೋಗಿಕ ಉನ್ನತಾವಸ್ಥೆ:**— ಸುಧಾರಿಸಿದ ಜನರಲ್ಲಿ ಅಭಿವೃದ್ಧಿಯನ್ನು ಪಡೆದ ಔದ್ಯೋಗಿಕ ಸಂಘಟನೆ. ಪಟ್ಟಣದ ಮಿತವ್ಯಯ.

ಶ್ರಮಸಂಘಟನೆಯ ಬೆಳೆವಣಿಗೆಯು ಗ್ರೀಕರಲ್ಲಿಯೂ ರೋಮನ್ ರಲ್ಲಿಯೂ ಹೇಗಾಯಿತೆಂಬುದನ್ನು ಸಾಪೇಗ ವಿವೇಚಿಸೋಣ. ಇತಿಹಾಸ ಕಾಲದ ಆರಂಭದಲ್ಲಿ ಗ್ರೀಕ ಮತ್ತು ರೋಮನ್ ಸಮಾಜವು, ಸಿರಿವಂತರು,

ನಾಗರಿಕರು, ಮತ್ತು ಗುಲಾಮರೆಂದು ಮೂರು ವಿಧವಾಗಿ ವಿಭಾಗಿಸಲ್ಪಟ್ಟಿತ್ತು. ಈ ಮೂರು ವರ್ಗಗಳಲ್ಲದೆ ಪರಕೀಯರು ಅಥವಾ ಅರ್ಧಮರ್ಧ ನಾಗರಿಕರೆಂಬ ನಾಲ್ಕನೆಯ ವರ್ಗವೂ ಪ್ರಚಾರದಲ್ಲಿತ್ತು. ತಂಡದ ಆಡಳತೆಯ ಒಡಲು ಅನೇಕ ಜನಸಮುದಾಯಗಳನ್ನೊಳಗೊಂಡ ಜನಪದಗಳ ಅಥವಾ ರಾಷ್ಟ್ರಗಳ ಆಡಳತೆ ಸುರುವಾಗಿತ್ತು. ಹಳ್ಳಿಗಳು ಎಷ್ಟೋ ಪಟ್ಟಣಗಳಾಗಿ ಪರಿಣಮಿಸಿದ್ದವು. ಒಂದು ಪಟ್ಟಣವೆಂದರೆ ಕೆಲವೊಂದು ವಿಶಿಷ್ಟ ಕೈಗಾರಿಕೆಗಳ ಬೀಡು ಆಗಿತ್ತು.

ನಾಗರಿಕತೆ ಅತ್ಯಂತ ಪ್ರಗತಿಯನ್ನು ಪಡೆದಿತ್ತು. ಆದರೂ ಕುಟುಂಬಗಳ ಅಸ್ತಿತ್ವಕ್ಕೆ ಇನ್ನೂ ಮಹತ್ವವಿತ್ತು. ಯಾಕೆಂದರೆ ದಿನಬಳಕೆಗೆ ಬೇಕಾಗುವ ಅನೇಕ ವಸ್ತುಗಳು ಕುಟುಂಬಗಳ ಪರಿಶ್ರಮದಿಂದಲೇ ನಿರ್ಮಿಸಲ್ಪಡುತ್ತಿದ್ದವು. ಜನರ ಕೊರತೆಗಳನ್ನು ಪೂರೈಸುವದಕ್ಕಾಗಿ ಹೆಂಗಳೆಯರು ಮನೆಯಲ್ಲಿಯೇ ಕೆಲಸ ಮಾಡಬೇಕಾಗುತ್ತಿತ್ತು. ಸಾಮಾನ್ಯ ನಾಗರಿಕನ ಮನೆತನವು ಗುಲಾಮರ ಸಂಖ್ಯೆಯೊಡನೆ ವಿಸ್ತೃತವಾಗಿರುತ್ತಿತ್ತು.

ಈ ಕಾಲದಲ್ಲಿಯೇ ದ್ರವ್ಯದ ಉಪಯೋಗವು ಪ್ರಾರಂಭವಾದುದರಿಂದ ಪಂಗಡ ಪಂಗಡಗಳ ನಡುವಿನ ವ್ಯಾಪಾರವು ಬೆಳೆಯಿತು. ಹಣದ ಮಹತ್ವವು ಬೆಳೆದು ಜನರು ವೈಯುಕ್ತಿಕವಾಗಿ ಧನಸಂಗ್ರಹ ಮಾಡತೊಡಗಿದರು. ಜಗತ್ತಿನಲ್ಲಿ ಔದ್ಯೋಗಿಕ ಪ್ರಸಾರವಾಗಲಿಕ್ಕೆ ಇದುವೆ ಕಾರಣವಾಯಿತು.

ಸ್ವತಂತ್ರ ಕಲಾವಂತರೂ ಈ ಕಾಲದಲ್ಲಿ ಇದ್ದರು. ಗುಲಾಮರು ಕೆಲವೊಂದು ವ್ಯಕ್ತಿಗಳಿಗಾಗಿ ದುಡಿಯುವರು. ಆದರೆ ಈ ಸ್ವತಂತ್ರ ಕೆಲಸಗಾರರು ತಮಗೆ ಕೂಲಿಯನ್ನು ಕೊಟ್ಟವರ ಸಲುವಾಗಿ ದುಡಿಯುತ್ತಿದ್ದರು. ಪೂರ್ವಕಾಲದಲ್ಲಿ ಕೂಲಿಗಾಗಿ ದುಡಿಯುವದೆಂದರೆ ಕೀಳೆಂದು ಭಾವಿಸುತ್ತಿದ್ದರು. ಬಡತನದ ಮೂಲಕ ನಿರುಪಾಯರಾಗಿ ಕೂಲಿಯನ್ನು ಅಪೇಕ್ಷಿಸುತ್ತಿದ್ದರು. ಆದುದರಿಂದ ಈ ಸ್ವತಂತ್ರ ಕೆಲಸಗಾರರಲ್ಲಿ ಕೆಳಗಿನ ವರ್ಗದವರು, ದುರ್ಬಲರು, ಪರಕೀಯರು ಮುಖ್ಯವಾಗಿರುತ್ತಿದ್ದರು.

**೫ನೆಯ ಅಥವಾ ಪೂರ್ವದ ಬಂಡವಲುಗಾರಿಕೆಯ ಅವಸ್ಥೆ:–** ರೋಮದಲ್ಲಿ ಕೆಲಸ ಮಾಡುವುದಕ್ಕೆ ಗುಲಾಮರಲ್ಲದೆ ಬೇರೊಂದು ವರ್ಗವು ಇರುತ್ತಿತ್ತು. ಕೈಗಾರಿಕೆಗಳನ್ನು ಕೈಕೊಳ್ಳುವವರಿಗೆ ನಾಗರಿಕನ ಎಲ್ಲ

ಅಧಿಕಾರವು ಇರುತ್ತಿರಲಿಲ್ಲ. ಇಂತಹ ಕೆಲಸಮಾಡುವವರು ಪರಕೀಯ ರಾಗಲಿ ಅಥವಾ ಗುಲಾಮಗಿರಿಯಿಂದ ಸ್ವಾತಂತ್ರ್ಯವನ್ನು ಪಡೆದವರಾಗಲಿ ಇರುತ್ತಿದ್ದರು. ಮೇಲಿಂದ ಮೇಲೆ ಸ್ವಾತಂತ್ರ್ಯವನ್ನು ಪಡೆಯುತ್ತಿರುವ ಗುಲಾಮರು ತಮ್ಮ ಚರಿತಾರ್ಥವನ್ನು ಸಾಗಿಸುವುದಕ್ಕೆ ತಾವು ಗುಲಾಮ ರಾಗಿದ್ದಾಗ ಕಲಿತ ಕೈಗಾರಿಕೆಗಳನ್ನೇ ಅವಲಂಬಿಸುತ್ತಿದ್ದರು. ಸಿಪಾಯಿ ವರ್ಗವೂ, ಕೆಳಗಿನ ಅಧಿಕಾರಿ ವರ್ಗವೂ ಸ್ವಾತಂತ್ರ್ಯವನ್ನು ಪಡೆದ ಗುಲಾಮ ರಿಂದಲೇ ನಿರ್ಮಿತವಾಗಿರುತ್ತಿದ್ದವು.

ಸಂಪೂರ್ಣ ನಾಗರಿಕತೆಯ ಹಕ್ಕನ್ನು ಪಡೆದ ನಾಗರಿಕರು ತಮ್ಮ ಶ್ರಮವ್ಯಯ ಮಾಡಿಕೊಳ್ಳುವುದರ ಬದಲು, ತಮ್ಮ ಹಣದ ಬಂಡವಲದಿಂದ ತಮ್ಮ ಜೀವನಕ್ರಮವನ್ನು ಸಾಗಿಸಿಕೊಳ್ಳುತ್ತಿದ್ದರು. ಈ ಪ್ರಕಾರ ಬಂಡ ವಲುಗಾರಿಕೆಯು ಅಸ್ತಿತ್ವದಲ್ಲಿ ಬಂದಿತು.

(ಅ) **ವ್ಯಾಪಾರಕ್ಕೆ ಪ್ರೋತ್ಸಾಹ:** ಈ ಹೊಸ ಬೆಳೆವಣಿಗೆಗೆ ಪರಕೀ ಯರೊಡನೆ ಉಂಟಾದ ಸಂಪರ್ಕವೇ ಕಾರಣ. 'ಹೆರೊಡೋಟಸ್'ನು ಹೇಳುವಂತೆ ಪೂರ್ವಕಾಲದ ಜನರು ಭೂಮಧ್ಯಸಮುದ್ರದ ಸುತ್ತಲು, ಕಪ್ಪೆ ಗಳು ಕೆರೆಯ ಸುತ್ತಲು ಮನೆಮಾಡಿಕೊಂಡಿರುವಂತೆ, ವಾಸಿಸುತ್ತಿದ್ದರು. ಅದರ ಭೌಗೋಲಿಕ ಸ್ಥಾನವು ವ್ಯಾಪಾರಕ್ಕೂ ಮತ್ತು ಪರಕೀಯರೊಡನೆ ಸಂಬಂಧ ಬೆಳೆಸಿಕೊಳ್ಳುವುದಕ್ಕೂ ಬಹು ಯೋಗ್ಯವಾಗಿತ್ತು. ಸರಕುಗಳನ್ನು ಸುಖಕರವಾಗಿ ತರುವುದಕ್ಕೂ ಒಯ್ಯುವುದಕ್ಕೂ ಅನೇಕ ಸೌಕರ್ಯಗಳಿ ದ್ದುದರಿಂದ ಪರದೇಶಗಳ ವಸ್ತುಗಳಿಗಾಗಿ ಬೇಡಿಕೆಯು ಹೆಚ್ಚಾಗಿತ್ತು. ಮೊದ ಮೊದಲು ವ್ಯಾಪಾರವು ಕ್ಷುಲ್ಲಕವೆಂದೂ ಕೀಳು ಎಂದೂ ಭಾವಿಸಲ್ಪಡು ತ್ತಿತ್ತು. ಬರಬರುತ್ತ ವ್ಯಾಪಾರವು ಹಣಗಳಿಸಲು ಬಹು ಸುಲಭೋಪಾಯ ವೆಂಬುದನ್ನೂ ಗ್ರೀಕರು ಅರಿತುಕೊಂಡರು. ಸಿರಿವಂತರು, ಸರದಾರರು ತಮ್ಮ ಹಣವನ್ನು ವ್ಯಾಪಾರಕ್ಕಾಗಿ ಸಾಲ ಕೊಡಲು ಪ್ರಾರಂಭಿಸಿದರು. ಅಥೆನ್ಸದ ಸುವರ್ಣ ಕಾಲದಲ್ಲಿ ಎಲ್ಲ ಸಿರಿವಂತನಾಗರಿಕರು ಸಮುದ್ರದಾಚೆಯ ವ್ಯಾಪಾರದಲ್ಲಿ ತೊಡಗಿದವರಾಗಿದ್ದರು. ಬಹಳ ಹಣವುಳ್ಳವರು ಹೆಚ್ಚು ಬಡ್ಡಿಯಿಂದ ಹಣ ಸಾಲ ಕೊಡುತ್ತಿದ್ದರು. ಸಾಮಾನ್ಯರು ಆ ಹಣದ ಸಹಾಯದಿಂದ ವ್ಯಾಪಾರವನ್ನು ಸಾಗಿಸುತ್ತಿದ್ದರು. ಪ್ಲೆಟೋ ಸಂಥವನೂ

ಕೂಡ ತನ್ನ ಪ್ರವಾಸದ ವೆಚ್ಚವನ್ನು ಎಣ್ಣೆ ಮಾರುವುದರಿಂದ ಗಳಿಸು ತ್ತಿದ್ದನು. ಈ ಪ್ರಕಾರ ಬಂಡವಲುಗಾರ ವರ್ಗವು ಉಂಟಾಯಿತು. ಅವರು ಬ್ಯಾಂಕುಗಳನ್ನೂ ವ್ಯಾಪಾರದ ಸಮುಸ್ಯೆಗಳನ್ನೂ ನಿಯಂತ್ರಿಸತೊಡ ಗಿದರು. ಈ ಬಾಡವಲುಗಾರರು ಬಹು ಹೇಯವಾದ ರೀತಿಯಿಂದ ಹಣ ಗಳಿಸುವುದರಲ್ಲಿಯೂ ಗುಲಾಮರಿಂದ ಒತ್ತಾಯಪಡಿಸಿ ಕಾರ್ಯಮಾಡಿಸಿ ಕೊಳ್ಳುವುದರಲ್ಲಿಯೂ ಹೆಸರಾದರು.

(ಬ) **ಔದ್ಯೋಗಿಕ ಪ್ರೋತ್ಸಾಹ:**- ಕೆಲ ಕಾಲದಲ್ಲಿಯೇ ಬಂಡವ ಲುಗಾರರ ಪ್ರೋತ್ಸಾಹವು ಕೇವಲ ವ್ಯಾಪಾರಕ್ಕಲ್ಲದೆ ಉದ್ಯೋಗಗಳಿಗೂ ದೊರೆಯಿತು. ಗುಲಾಮರು ಕೇವಲ ಮನೆತನಗಳ ಕೊರತೆಗಳನ್ನಷ್ಟೇ ಪೂರೈಸುವವಲ್ಲದೆ ಪೇಟೆಯಲ್ಲಿ ಮಾರಾಟಕ್ಕೂ ಸಾಮಾನುಗಳನ್ನು ಸಿದ್ಧ ಪಡಿಸಬೇಕಾಯಿತು. ಅಥೆನ್ಸದಲ್ಲಿಯ ಪ್ರತಿಯೊಬ್ಬ ಮೇಲ್ತರಗತಿಯ ಕಲಾ ವಂತನು ಇಬ್ಬರು ಗುಲಾಮರನ್ನು ಸಾಕಿರುತ್ತಿದ್ದನು. ಧನಿಕರು ಗುಲಾಮರ ಸಹಾಯದಿಂದ ಕಾರ್ಖಾನೆಗಳನ್ನೇ ನಡೆಸುತ್ತಿದ್ದರು. ಒಂದೊಂದು ಕಾರ್ಖಾನೆಯಲ್ಲಿ ಅನೇಕ ಗುಲಾಮರು ದುಡಿದು ಅನೇಕ ವಸ್ತುಗಳನ್ನು ಪೇಟೆಯಲ್ಲಿ ಮಾರಾಟಕ್ಕೆ ತಯಾರಿಸುತ್ತಿದ್ದರು. 'ಡೆಮಾಸ್ಥೆನಿಸ್'ನು ಹೇಳು ವಂತೆ ಅವನ ತಂದೆ ಎರಡು ಕಾರ್ಖಾನೆಗಳನ್ನು ನಡೆಸುತ್ತಿದ್ದನು. ಒಂದ ರಲ್ಲಿ ಚಾಕು ಕತ್ತರಿ ಮುಂತಾದ ಕೊಯ್ತದ ಸಾಮಾನುಗಳನ್ನೂ ಮತ್ತೊಂ ದರಲ್ಲಿ ಕುರ್ಚಿಗಳನ್ನೂ ಮಾಡಿಸುತ್ತಿದ್ದನು. ಇದರಿಂದ ಅಪಾರ ಧನವನ್ನು ಸಂಪಾದಿಸಿ ಸಾಯುವಾಗ ಮಗನಿಗೆ ೨೦ ಟ್ಯಾಲೆಂಟುಗಳ ಹಣವನ್ನು ಗಳಿ ಸಿಟ್ಟಿದ್ದನು. (೧ ಟ್ಯಾಲೆಂಟ=೨೩೫ ಪೌ. ೧ ಶಿ.). ಬಂಡವಲುಗಾರರು ಕೇವಲ ಸ್ಥಳವನ್ನು, ಕಚ್ಚಾ ಮಾಲನ್ನು ಮತ್ತು ಗುಲಾಮರನ್ನು ಒದಗಿಸಿ ಕೊಡಬೇಕಾಗುತ್ತಿತ್ತು. ಉಳಿದ ಎಲ್ಲ ಕೆಲಸವನ್ನೂ ಒಬ್ಬ ಮುಂದಾಳು ನೋಡಿಕೊಳ್ಳುತ್ತಿದ್ದನು. ಹೀಗೆ ಬಹು ಸುಲಭವಾಗಿ ಹಣ ಗಳಿಸಬಹುದಾ ದುದರಿಂದ ಧನಿಕರೆಲ್ಲ ತಮ್ಮ ಹಣವನ್ನು ಇಂತಹ ಕಾರ್ಖಾನೆಗಳಲ್ಲಿಯೇ ಹಾಕುತ್ತಿದ್ದರು. ಆದುದರಿಂದ ಗ್ರೀಸದಲ್ಲಿ ಚರ್ಮವನ್ನು ಹದಗೊಳಿಸು ವುದು, ಪಾತ್ರೆಗಳನ್ನು ಮಾಡುವುದು, ನೇಯುವುದು, ತಿನ್ನುವ ಪದಾರ್ಥ ಗಳನ್ನು ಮಾಡುವುದು ಮುಂತಾದ ಉದ್ಯೋಗಗಳೆಲ್ಲ ಇಂತಹ ಕಾರ್ಖಾನೆ

ಗಳಲ್ಲಿಯೇ ನಡೆಯುತ್ತಿದ್ದವು. ಈ ಕಾರ್ಖಾನೆಗಳಲ್ಲಿ ಶ್ರಮವಿಭಾಗದ ತತ್ವವು ಅತ್ಯಂತ ಪರಿಪೂರ್ಣತೆಯನ್ನು ಪಡೆದಿತ್ತು. ಒಂದು ವಸ್ತುವನ್ನು ನಿರ್ಮಿಸುವುದಾದರೆ ಅದರ ಬೇರೆ ಬೇರೆ ಅಂಗಗಳನ್ನು ಬೇರೆಬೇರೆಯವರು ನಿರ್ಮಿಸುತ್ತಿದ್ದರು. ಕೆಲವೊಂದು ಪಟ್ಟಣಗಳು ಕೇವಲ ಕೈಗಾರಿಕೆಯ (ಕಾರ್ಖಾನೆಗಳ) ಪಟ್ಟಣಗಳೇ ಆದವು. 'ಕೊರಿಂಥ' ಎಂಬಲ್ಲಿ ೪೬೦,೦೦೦ ಗುಲಾಮರೂ, 'ಈಜಿನಾ' ಎಂಬ ನಡುಗಡ್ಡೆಯಲ್ಲಿ ೪೭೦,೦೦೦ ಗುಲಾಮರೂ ದುಡಿಯುತ್ತಿದ್ದರು. ರೋಮನ್ ಸಾಮ್ರಾಜ್ಯದಲ್ಲಿ ಈ ರೀತಿಯಿಂದ ವಿಪುಲ ಧನಸಂಚಯವಾಯಿತು. ಆಗಿನ ಒಕ್ಕಲುತನದ, ವ್ಯಾಪಾರದ ಔದ್ಯೋಗಿಕ ಬಂಡವಲುಗಾರರನ್ನು ಈಗಿನ ಲಕ್ಷಾಧೀಶರಿಗೆ ಹೋಲಿಸಬಹುದು.

**೬ನೆಯ ಅವಸ್ಥೆ ಅಥವಾ ಬಂಡವಲುಗಾರಿಕೆಯ ಮಧ್ಯಕಾಲ:-** ಪೂರ್ವಕಾಲದ ಈ ಜನಾಂಗಗಳ ಶಕ್ತಿ ಕಳೆಗುಂದಿದಾಗ ಬಹು ದೀರ್ಘಕಾಲ ಸಂಸ್ಕೃತಿಯು ಹೆಚ್ಚಿನ ಪ್ರಗತಿಯನ್ನು ಪಡೆಯಲಿಲ್ಲ. ಹೊಸ ಕಾಡು ಜನರು, ವಿಶೇಷವಾಗಿ ಜರ್ಮನ್ ಮೂಲವುಳ್ಳವರು, ಜಗತ್ತಿನ ರಂಗಭೂಮಿಯ ಮೇಲೆ ಕಾಣಹತ್ತಿದರು. ಅವರು ಸುಧಾರಣೆಯ ಮಾರ್ಗದಲ್ಲಿ ರೋಮನ್‌ರು ಗ್ರೀಕರು ಏರಿದ ಘನತೆಗೆ ಏರಲು ಕ್ರಮೇಣ ಪ್ರಯತ್ನಿಸಿದರು. ಸುಮಾರು ೧೫೦೦ ವರ್ಷಗಳ ವರೆಗೆ ಸಂಸ್ಕೃತಿಯ ಬೆಳವಣಿಗೆ ಯಾವ ರೀತಿಯಿಂದಲೂ ಮುಂದುವರಿಯಲಿಲ್ಲ. ೧೮ನೆಯ ಶತಮಾನದ ವರೆಗೆ ಯಾವ ಬಗೆಯ ಸಾಂಪತ್ತಿಕ ಅಭಿವೃದ್ಧಿಯೂ ಆಗಲಿಲ್ಲ. ಆದುದರಿಂದ ವಿಕಾಸದ ಸೂತ್ರವನ್ನನುಸರಿಸುವಾಗ ರೋಮನ್ ಸಾಮ್ರಾಜ್ಯದ ಪತನಕಾಲದಿಂದ ಸುಮಾರು ೧೮ನೇ ಶತಮಾನದ ವರೆಗೆ ಮಹತ್ವದ ಸುಧಾರಣೆಗಳಾವವೂ ಆಗಲಿಲ್ಲವೆಂದು ಹೇಳಬಹುದು.

ಬಂಡವಲುಗಾರಿಕೆಯು ಶ್ರಮ ಉಳಿಸುವ ಯಂತ್ರಗಳ ನಿರ್ಮಾಣವಾಗುವ ವರೆಗೆ ಅಷ್ಟೊಂದು ಬಲಿಷ್ಠವಾಗಿರಲಿಲ್ಲ. ಇಲ್ಲಿಯ ವರೆಗೆ ಮನುಷ್ಯನು, ಪಶುಗಳು, ಗಾಳಿ ನೀರುಗಳು, ಮಾಡುತ್ತಿರುವ ಕೆಲಸವನ್ನು ಅಮಾನುಷ ಶಕ್ತಿಯುಳ್ಳ ಉಗಿಯು ಮಾಡಲಾರಂಭಿಸಿತು. ಆ ಮೇಲೆ ಬಂಡವಲುಗಾರಿಕೆ ಹೊಸ ಹುಮ್ಮಸಿನಿಂದ ಒಳ್ಳೇ ಜಯಶಾಲಿಯಾಗಿ ಬೆಳೆಯಹತ್ತಿತು.

ಆಗಿನಿಂದ ಬಂಡವಲುಗಾರಿಕೆಯ ಪ್ರೌಢಿಮೆಯಿಂದ ಹೊಸ ಸಾಂಪತ್ತಿಕ ಯುಗವು ಪ್ರಾರಂಭವಾಯಿತು.

ಈ ಹೊಸ ಶಕ್ತಿಯು ಮಾನವನ ಶಕ್ತಿಯು ವ್ಯಾಪಿಸಿದ ಕಾರ್ಯ ಕ್ಷೇತ್ರವನ್ನು ಪಾದಾಕ್ರಾಂತ ಮಾಡಿ, ಜನರನ್ನು ಅನೇಕ ಕೈಗಾರಿಕೆಗಳಿಂದ ಹೊರದೂಡಿತು. ಜನರು ನಿರುದ್ಯೋಗಿಗಳಾದುದರಿಂದ ಭೀಕರ ಪರಿಸ್ಥಿತಿ ಯುಂಟಾಯಿತು. ಒಂದೊಂದು ಉಗಿಯಂತ್ರವು ಸಾವಿರಾರು ಜನರನ್ನು ನಿರುದ್ಯೋಗಿಗಳನ್ನಾಗಿ ಮಾಡಿತು. ಅಸಂಖ್ಯಾತ ಸ್ತ್ರೀಪುರುಷರು, ಚಿಕ್ಕ ಮಕ್ಕಳು, ಹೊಟ್ಟೆಗಿಲ್ಲದೆ ಮರಣಕ್ಕೀಡಾದರು. ಶೋಕಿ ಸಾಮಾನುಗಳ ನಿರ್ಮಾಣದಲ್ಲಿ ಬಂಡವಲುಗಾರಿಕೆಯೇ ಮುಖ್ಯ ಪಾತ್ರವನ್ನು ವಹಿಸಿತು. ವ್ಯಾಪಾರ, ವಿನಿಮಯ, ನೌಕಾಪರ್ಯಟನ, ಉಗಿಬಂಡೆ, ಅಂಚೆಯ ಕೆಲಸ, ಕಣಿಗಳಿಂದ ಕಬ್ಬಿಣ, ಕಲ್ಲಿದ್ದಲಿ, ಕಲ್ಲೆಣ್ಣೆ ಮುಂತಾದವುಗಳನ್ನು ತೆಗೆಯುವ ಕೆಲಸ, ಇವೆಲ್ಲವುಗಳನ್ನು ಬಂಡವಲುಗಾರಿಕೆಯೇ ನಿಯಂತ್ರಿಸಿತು. ದೊಡ್ಡ ದೊಡ್ಡ ವ್ಯಾಪಾರದ ವಖಾರಗಳನ್ನು ತೆರೆದು ಅನೇಕ ಸ್ವತಂತ್ರ ಕೆಲಸಗಾರ ರನ್ನು ತನ್ನ ವಶಕ್ಕೆಳೆದುಕೊಂಡಿತು. ಇಂತಹ ಪ್ರಬಲ ಕ್ರಾಂತಿಯು ಸುಮಾರು ೨೦ ವರುಷಗಳಷ್ಟು ಅಲ್ಪ ಕಾಲದಲ್ಲಿಯೇ ಆಯಿತು. ೧೮೩೭ ರಲ್ಲಿ ಪ್ರಸಿಯಾ ದಲ್ಲಿ ಉಪಯೋಗಿಸಲ್ಪಟ್ಟ ಒಟ್ಟು ಉಗಿಯಂತ್ರದ ಬಲವು ಸುಮಾರು ೭೦೦೦ ಅಶ್ವಬಲದಷ್ಟು ಇತ್ತು. ೧೮೫೫ ರಲ್ಲಿ ೬೨೦೦೦, ೧೮೭೫ ರಲ್ಲಿ ೭೫೦,೦೦೦ ವಾಯಿತು. ಇತ್ತೀಚಿನ ಒಂದು ಶತಮಾನದಲ್ಲಿ, ಮನುಷ್ಯನು ಯಂತ್ರಗಳಿಂದ ವಸ್ತುಗಳನ್ನು ನಿರ್ಮಿಸುವ ಶಕ್ತಿಯು ಸುಮಾರು ಐದು ಪಟ್ಟು ಬೆಳೆದಿದೆ. ಹಿಂದುಸ್ತಾನದಂತಹ ಒಂದು ಬಡ ದೇಶದಲ್ಲಿ ಕೂಡ ಬಂಡವಲುಗಾರಿಕೆ ತಾಂಡವನೃತ್ಯವನ್ನಾಡುತ್ತಲಿದೆ. ಬಡವರ ಜೀವವು ಬಂಡವಲುಗಾರರ ಕೈಯ್ಯಲ್ಲಿ ಸಿಕ್ಕು ಬಳಲುತ್ತಲಿದೆ. ಸ್ವತಂತ್ರ ಕೈಗಾರಿಕೆ ಗಳಾದ ನೂಲುವುದು, ನೇಯುವುದು, ಕಂಬಾರಿಕೆ, ಬಡಿಗತನ ಇವೆಲ್ಲವೂ ಯಂತ್ರಗಳ ಸಹಾಯದಿಂದ ನಡೆದಿವೆ. ಕೈಗಾರಿಕೆಗಳು ಮೂಲೆಗುಂಪಾದು ದರಿಂದ ಬಡತನ ಹೆಚ್ಚಿದೆ, ಸ್ವಾವಲಂಬನದ ತತ್ವ ಮರೆತಿದೆ. ಆದುದರಿಂದಲೇ ಜನರು ಹೇಡಿಗಳಾಗಿದ್ದಾರೆ. ಇದನ್ನು ಹೋಗಲಾಡಿಸುವುದಕ್ಕೆ ಮಹಾತ್ಮಾಜಿ

ಯುವರು ಚಿಕ್ಕ ಚಿಕ್ಕ ಕೈಗಾರಿಕೆಗಳು ಪುನಃ ಪ್ರಚಾರದಲ್ಲಿ ಬರುವಂತೆ ಹೋರಾಡುತ್ತಲಿದ್ದಾರೆ.

ತಂಡಗಳು ಅಳಿದು ಕೆಲವೊಂದು ವರ್ಗಗಳ ಮತ್ತು ನಿರಂಕುಶ ರಾಜರ ಆಡಳಿತೆ ಪ್ರಾರಂಭವಾಯಿತು. ಬಂಡವಲುಗಾರಿಕೆ ರೂಢಿಯಲ್ಲಿ ಬಂದಂತೆ ನಿಯ ಮಯುಕ್ತ ಅರಸುತನವು (Constitutional Monarchy) ಅಥವಾ ನಾಗರಿಕ—ಪ್ರಜಾಸತ್ತಾತ್ಮಕವು ಪ್ರಚಾರದಲ್ಲಿ ಬಂದವು ಆದರೂ ತಂಡಗಳ ಒಂದು ವಿಶಿಷ್ಟ ಕುರುಹು ಇನ್ನೂ ಉಳಿದು ಬಂದಿದೆ. ಒಂದು ವ್ಯಕ್ತಿಯ ಆಸ್ತಿಯು ಆ ವ್ಯಕ್ತಿಯ ಆಪ್ತರುಗಳಲ್ಲಿಯೇ ಹಂಚಲ್ಪಡುತ್ತದೆ. ಇದರಿಂದ ಒಬ್ಬ ವ್ಯಕ್ತಿ ಒಂದು ಗುಂಪಿಗೆ ಸೇರಿದವನೆಂಬ ವಿಚಾರ ಇನ್ನೂ ನಡೆದು ಬಂದದ್ದು ಸ್ಪಷ್ಟವಾಗುತ್ತದೆ.

ಈಗ ಕುಟುಂಬವು ಮೊದಲಿನಂತೆ ಶ್ರಮಸಂಘಟನೆಯಲ್ಲಿ ಯಾವ ಮುಖ್ಯ ಪಾತ್ರವನ್ನೂ ವಹಿಸುವುದಿಲ್ಲ. ವೈಯಕ್ತಿಕ ವಸ್ತುನಿರ್ಮಾಣಕ್ಕೆ ಬೆಲೆಯಿಲ್ಲದೆ ಸಹಕಾರತತ್ವವನ್ನೊಳಗೊಂಡ ಯಂತ್ರಗಳ ಸಾಮೂಹಿಕ ವಸ್ತುನಿರ್ಮಾಣಕ್ಕೇ ಮಹತ್ವವಿದೆ. ಗೃಹವಸ್ತುನಿರ್ಮಾಣದಲ್ಲಿ ಮಹ ತ್ವದ ಭಾಗವನ್ನು ವಹಿಸುತ್ತಿದ್ದ ಸ್ತ್ರೀಯು ಕೆಲಸವಿಲ್ಲದೆ, ಮನೆಯ ಹೊರಗೆ ಬಂದು ಕಾರ್ಖಾನೆಗಳಲ್ಲಿ ಕೆಲಸಮಾಡುವ ಸಂದರ್ಭ ಬಂದೊದಗಿದೆ.

ಚಿಕ್ಕ ಚಿಕ್ಕ ಕೈಗಾರಿಕೆಗಳಲ್ಲಿ ನಿಷ್ಣಾತರಾಗಿದ್ದ ಕೆಲಸಗಾರರು ತಮ್ಮ ಕೆಲಸಗಳಿಗೆ ಉತ್ತೇಜನವಿಲ್ಲದಿರುವ ಮೂಲಕ ಪಟ್ಟಣಗಳನ್ನು ಸೇರಹತ್ತಿ ದ್ದಾರೆ. ಅಲ್ಲಿ ಕಾರ್ಖಾನೆಗಳಲ್ಲಿ ಕೆಲಸಮಾಡಿ ಹೊಟ್ಟೆ ತುಂಬಿಕೊಳ್ಳದೆ ಗತ್ಯಂತರವಿಲ್ಲ. ಆದುದರಿಂದ ತಾವು ನಿಷ್ಣಾತರಾಗಿದ್ದ ತಮ್ಮ ನಿಶ್ಚಿತ ಕೆಲಸ ಗಳನ್ನು ಬಿಟ್ಟುಕೊಟ್ಟು ಯಾವುದಾದರೊಂದು ಕೆಲಸವನ್ನು ಕಾರ್ಖಾನೆ ಯಲ್ಲಿ ಮಾಡತೊಡಗಿದುದರಿಂದ ಮಾನವನ ಶಕ್ತಿಯೂ ಕಲಾಭಿವೃದ್ಧಿಯೂ ಕುಗ್ಗಿಹೋಗಿವೆ.

ಬಂಡವಲುಗಾರಿಕೆ ಪ್ರತಿಯೊಂದು ಕೈಗಾರಿಕೆಗೂ ಪ್ರಬಲ ಶತ್ರು ವಾಗಿದೆ. ವಸ್ತುಗಳ ಆಯಾತ ನಿರ್ಯಾತದ ವಿಷಯವೂ ಬಂಡವಲುಗಾರರ ಕೈಯಲ್ಲಿ ಸಿಕ್ಕಿಕೊಂಡಿದೆ. ವ್ಯಾಪಾರವು ಅತ್ಯಂತವಾಗಿ ಬೆಳೆದುದರಿಂದ ಮೊದಮೊದಲು ಮಾನವನ ವಿಲಾಸಕ್ಕಾಗಿ ನಡೆಯುತ್ತಿದ್ದ ಆಯಾತ ನಿರ್ಯಾತ

ಗಳು ಈ ಹೊತ್ತು ಅವರಿಗೆ ಅವಶ್ಯವಾಗಿವೆ. ಯುರೋಪದಲ್ಲಿಯ ಎಷ್ಟೋ ರಾಷ್ಟ್ರಗಳು ತಮಗೆ ಬೇಕಾಗುವ ಆಹಾರ ಸಾಮಗ್ರಿಗಳನ್ನೂ, ಕಾಫಿ, ಚಹ, ಕೋಕೋ, ತಂಬಾಕು, ಹತ್ತಿ, ರೇಶಿಮೆ, ಉಣ್ಣೆ ಮುಂತಾದವುಗಳನ್ನೂ ಪರದೇಶಗಳಿಂದ ತರಿಸಿಕೊಳ್ಳುತ್ತವೆ. ತಂಡಗಳು ಅಥವಾ ರಾಷ್ಟ್ರಗಳು ಸ್ವಯಂಪರಿಪೂರ್ಣವಾಗಿರಬೇಕೆಂಬ ತತ್ವವನ್ನು ಮರೆತು, ಕೆಲವೊಂದು ರಾಷ್ಟ್ರಗಳು ತಮ್ಮ ಬಂಡವಲವನ್ನು ಬೆಳೆಸುವುದಕ್ಕಾಗಿ ಯಂತ್ರಗಳ ಸಹಾಯದಿಂದ ಕೆಲವೊಂದು ಉದ್ಯೋಗಗಳನ್ನೇ ಅನುಸರಿಸುವುದರಿಂದ, ಯುರೋಪದಲ್ಲಿಯ ದೊಡ್ಡ ದೊಡ್ಡ ರಾಷ್ಟ್ರಗಳು ಕೂಡ ಈ ಹೊತ್ತು ತಮ್ಮ ಆಹಾರಕ್ಕಾಗಿ ಪರರಾಷ್ಟ್ರಗಳ ಮೇಲೆ ಅವಲಂಬಿಸುವ ಶೋಚನೀಯ ಪರಿಸ್ಥಿತಿಯುಂಟಾಗಿದೆ.

**೭ನೆಯ ಅಥವಾ ಇತ್ತೀಚಿನ ಬಂಡವಲುಗಾರಿಕೆಯ ಅವಸ್ಥೆ:-** ಪ್ರಗತಿಯ ವೇಗವು ಹೆಚ್ಚಿದ್ದಾದಂತೆ ಅದರ ಅವಸ್ಥೆಗಳು ಕಿರಿದಾಗುತ್ತ ನಡೆಯುತ್ತವೆ ಎಂಬುದು ಉದ್ಯಮದ ಇತಿಹಾಸದಿಂದ ನಮ್ಮ ನಿದರ್ಶನಕ್ಕೆ ಬರುತ್ತದೆ. ಪ್ರಾಚೀನ ತಂಡಗಳು ಲಕ್ಷಾಂತರ ವರ್ಷಗಳ ವರೆಗೆ ಬಾಳಿದ್ದರೆ ಸುಸಂಸ್ಕೃತ ಸಂಘಟನೆಗಳು ಕೇವಲ ಐದು ನೂರು ವರುಷ ಮಾತ್ರ ಬಾಳಿವೆ. ಇತ್ತೀಚಿನ ಬಂಡುವಲುಗಾರಿಕೆಯ ಯುಗದಲ್ಲಿ ಪ್ರಗತಿಯು ಅತ್ಯಂತ ತೀವ್ರ ವೇಗದ ಮೂಲಕ ವರುವರುಷಕ್ಕೂ ಬೇರೊಂದು ಅವಸ್ಥೆ ಅಸ್ತಿತ್ವದಲ್ಲಿ ಬರುತ್ತದೆ.

ಇತ್ತೀಚಿನ ಬಂಡುವಲುಗಾರಿಕೆಯು ಶ್ರಮಸಂಘಟನೆಯನ್ನು ಸಂಪೂರ್ಣವಾಗಿ ಬದಲಿಸಿಬಿಟ್ಟಿದೆ. ಬಂಡವಲುಗಾರಿಕೆಯ ಪ್ರಯತ್ನವೆಲ್ಲ ಸಾಮಾಜಿಕ ವ್ಯಾಪಾರವೆಂದು ರೂಪಾಂತರ ಹೊಂದಿದೆ ಈ ಸಾಮಾಜಿಕ ವ್ಯಾಪಾರವು ಸರಕಾರೀ ವ್ಯಾಪಾರ ಮತ್ತು ಸಹಕಾರೀ ವ್ಯಾಪಾರವೆಂದು ದ್ವಿವಿಧವಾಗಿದೆ.

(ಅ) **ಸರಕಾರೀ ವ್ಯಾಪಾರ:-** ಹಳ್ಳಿ, ತಾಲೂಕು, ಜಿಲ್ಲೆಗಳಲ್ಲಿ ಸರಕಾರವು (ಈಗಿನ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳಂತಹ) ಅನೇಕ ಸಂಸ್ಥೆಗಳನ್ನು ಸ್ಥಾಪಿಸಿ ಅವುಗಳ ಮುಖಾಂತರ ವ್ಯಾಪಾರ ಅಥವಾ ಇನ್ನಿತರ ಸಮಾಜಕ್ಕೆ ಹಿತಕಾರಿಯಾದ ಕೆಲಸಗಳನ್ನು ಕೈಕೊಳ್ಳುತ್ತದೆ. ಇಲ್ಲಿ ಕೆಲಸಮಾಡುವ

ವರು ಸರಕಾರದ ನಿಯಂತ್ರಣಕ್ಕೊಳಗಾಗಿ ಅದರ ಇಚ್ಛೆಯ ಮೇರೆಗೆ ಕೆಲಸ ಮಾಡುವರು. ವೈಯಕ್ತಿಕ ಸ್ಪರ್ಧೆ, ಮನೋರಾಜ್ಯಗಳಿಗೆ ಇಲ್ಲಿ ಎಡೆ ಯಿರುವದಿಲ್ಲ. ಕೆಲಸಗಾರರಿಗೆ ನಿಯಮಿತ ಸಂಬಳವೂ ವಿರಾಮ ವೇತನವೂ ದೊರೆಯುತ್ತದೆ. ಬಂಡವಲುಗಾರರ ಕೈಕೆಳಗಿದ್ದ ಕೆಲಸಗಾರರಿಗೆ ಇಂತಹ ಸವಲತ್ತುಗಳು ದೊರೆಯುವದಿಲ್ಲ.

ಈಹೊತ್ತಿನ ಸರಕಾರವು ಅನೇಕ ಕೆಲಸಗಳನ್ನು ತನ್ನ ಕೈಯಲ್ಲಿರಿಸಿ ಕೊಂಡಿದೆ. ನಾಣ್ಯಗಳನ್ನು ಮಾಡುವುದು, ಕರ-ಸುಂಕಗಳನ್ನು ಕೂಡಿಸು ವುದು, ಹಳವುಗಳಲ್ಲಿಯ ಅನೇಕ ಕೆಲಸಗಳನ್ನು ಮಾಡಿಸುವುದು ಸರಕಾರದ ಅಧೀನದಲ್ಲಿವೆ. ಒತ್ತಾಯದ ಶಿಕ್ಷಣವನ್ನು ಪ್ರಸಾರಮಾಡುವುದು, ಬಗೆ ಬಗೆಯ ಜೀವವಿಮೆಯ ಕೆಲಸಗಳನ್ನು ನಿಯಂತ್ರಿಸುವುದು, ಸೇವಿಂಗ್-ಬ್ಯಾಂಕ್, ಬ್ಯಾಂಕುಗಳಲ್ಲಿಯ ಹಣದ ವ್ಯವಹಾರ ಮುಂತಾದವುಗಳನ್ನು ಅದು ಕೈಕೊಳ್ಳುತ್ತದೆ. ಅನಾಥಾಶ್ರಮ, ಶಿಶುಸಂಗೋಪನಾಲಯ, ಆಸ್ಪತ್ರೆ ಗಳನ್ನು ನಡೆಸುವುದು ಮುಂತಾದ ಸರ್ವಜನ ಹಿತಕಾರಿಯಾದ ಅನೇಕ ಕೆಲಸಗಳನ್ನು ಮಾಡುತ್ತದೆ. ಕೂಲಿಕಾರರಿಗೂ ಅವರ ಮಕ್ಕಳುಗಳಿಗೂ ಹೆಚ್ಚು ಕೆಲಸ ಬೀಳದಂತೆ ಕಾಯಿದೆ ಕಾನೂನುಗಳನ್ನು ಮಾಡುತ್ತದೆ. ರಸ್ತೆ, ಕಾಲುವೆ, ಸೇತುವೆ, ಹುಚ್ಚರಾಸ್ಪತ್ರೆ, ಮಕ್ಕಳುಗಳ ಮನೆ, ವಸ್ತುಸಂಗ್ರ-ಹಾಲಯ, ಸಾರ್ವಜನಿಕ ವಾಚನಾಲಯ, ರೇಲ್ವೆ ಮುಂತಾದವುಗಳನ್ನು ಕಟ್ಟಿ ಕೆಲಸ ನಡೆಸುತ್ತದೆ. ಅಂಚೆ, ತಂತಿ, ಪ್ರವಾಸ ಮುಂತಾದ ಅನೇಕ ವ್ಯವಹಾರಗಳನ್ನು ಸಾಗಿಸುತ್ತದೆ. ಲಕ್ಷಾಂತರ ಕೆಲಸಗಾರರಿಂದ ಈ ಎಲ್ಲ ಕೆಲಸಗಳನ್ನು ಅದು ನಡೆಸುತ್ತದೆ.

(ಬ) ಸರಕಾರವಲ್ಲದೆ ಸಹಕಾರೀ ಸಂಘಗಳೂ ಬೇರೆ ಒಂದು ಬಗೆ ಯಿಂದ ಸಾಮಾಜಿಕ ವ್ಯವಹಾರವನ್ನೇ ಸಾಗಿಸುವವು. ಅವೂ ಕೂಡ ಒಬ್ಬ ವ್ಯಕ್ತಿಯ ಲಾಭವನ್ನು ಭಕ್ಷಿಸುವ ಬದಲು, ಅನೇಕ ಪಾಲುಗಾರರ ಹಿತ ವನ್ನು ಬಯಸುತ್ತದೆ.

—

ಒಂಬತ್ತನೆಯ ಮೆಟ್ಟಿಲು

## ಶ್ರಮಸಂಘಟನೆಯ ರಚನೆಯ ವಿಚಾರಗಳು



ಇಲ್ಲಿಯ ವರೆಗೆ ಶ್ರಮಸಂಘಟನೆಯ ಏಳು ವಿಧಗಳನ್ನು ವಿವರಿಸಿದುದಾಗಿದೆ. ಅವುಗಳನ್ನು ಕಾಲಾನುಕ್ರಮವಾಗಿ ಕೆಳಗಿನಂತೆ ವರ್ಗೀಕರಿಸಬಹುದು.

೧. ತಂಡ- ಉದ್ಯಮ, ಆಹಾರ, ಭೂಮಿಗಳು ಸಾರ್ವಜನಿಕವಾಗಿರುವುದು.

೨. ಕುಟುಂಬ—ಗಂಡು ಹೆಣ್ಣುಗಳ ಪ್ರಕಾರ ಶ್ರಮವಿಭಾಗ.

೩. ಪ್ರಾದೇಶಿಕ ವ್ಯಾಪಾರ—ಬೇರೆ ಬೇರೆ ಸ್ಥಾನಗಳಿಗನುಗುಣವಾಗಿ ಹುಟ್ಟುವಳಿಯ ಪೃಥಕ್ಕರಣ.

೪. ಪ್ರಭುತ್ವ- ಪ್ರಭುವಿನ ಆಸ್ತಿಗೆ ಸಂಬಂಧಪಟ್ಟ ವ್ಯವಹಾರ. ಗುಲಾಮರನ್ನು ಸೇರಿಸಿಕೊಳ್ಳುವುದರಿಂದ ಕುಟುಂಬದ ವಿಸ್ತರಣ.

೫. ಎಲ್ಲ ಸ್ವತಂತ್ರ ಕೈಗಾರಿಕೆಗಳು-ಮನೆಯ ಸಾಮಾನ್ಯ ಕೈಗಾರಿಕೆಗಳಿಂದ, ನುರಿತ ಶಿಲ್ಪಕಲಾವಿದರ ವರೆಗೆ.

೬. ಬಂಡವಲುಗಾರಿಕೆ.

೭. ಸಮಾಜಕ್ಕೆ ಹಿತವಾಗುವಂತೆ ಔದ್ಯೋಗಿಕ ಸಂಘಟನೆ—ಕೇವಲ ವ್ಯಕ್ತಿಗೆ ಹಿತವಾಗುವದರ ಬದಲು ಅಖಿಲ ಸಮಾಜಕ್ಕೆ ಲಾಭವಾಗುವ ರೀತಿಗಳ ಅನುಕರಣ. ಹಳ್ಳಿಗಳ, ಪಟ್ಟಣಗಳ, ಸಹಕಾರ ಸಂಘಗಳ ನಿರ್ಮಾಣ.

ಶ್ರಮಸಂಘಟನೆಯು ಈ ಮೆಟ್ಟಲುಗಳಿಂದ ಕ್ರಮೇಣ ಪ್ರಗತಿಯನ್ನು ಹೊಂದಿದೆ. ಒಂದೊಂದು ಮೇಲ್ಮೆಟ್ಟಲು ಕೆಲವೊಂದು ಹೊಸ ಚಟುವಟಿಕೆಗಳನ್ನೊಳಗೊಂಡಿದೆ. ಮಾನವನು ಮೇಲ್ಮೆಟ್ಟಲನ್ನು ಏರಿದೊಡನೆ ಕೆಳಗಿನ ಅವಸ್ಥೆಯ ಕಾರ್ಯಕಲಾಪಗಳನ್ನು ಮರೆತುಬಿಡುತ್ತಾನೆಂದಲ್ಲ. ಹಳೆಯ, ಹೊಸ ಕಾರ್ಯಗಳ ಸಂಮಿಶ್ರಣವಾಗುತ್ತದೆ. ಆಹಾರದ ವಿಷಯದಲ್ಲಿಯೂ ಇದೇ ತತ್ವವನ್ನು ನಾವು ಕಾಣಬಹುದು. ಮೀನ ಹಿಡಿಯುವುದನ್ನೂ,

ದನ ಸಾಕುವುದನ್ನೂ, ಮೇಲ್ತರದ ಒಕ್ಕಲುತನ ಮಾಡುವುದನ್ನೂ ಅರಿತೊಡನೆ ಮಾನವನು ತನ್ನ ಮೊದಲಿನ ರೂಢಿಯಾದ ಬೇಟೆಯಾಡುವುದನ್ನೂ, ಕಾಡು ಹಣ್ಣು ಕಾಯಿಗಳನ್ನು ಕೂಡಿಸುವುದನ್ನೂ ಮರೆತುಬಿಡಲಿಲ್ಲ. ಈಗಲೂ ಕೂಡ ಒಳ್ಳೇ ಸುಧಾರಿಸಿದ ಜನರು ಅಡಿವೆಗಳಿಗೆ ಅಡ್ಡಾಡುತ್ತ ಹೋಗಿ, ಕವಳಿ, ಸೀರಲ, ಪರಗಿ ಮುಂತಾದ ಹಣ್ಣುಗಳನ್ನು ಸಂಚಯಿಸಿ ತಿನ್ನುವದುಂಟು.

ಹೊಸ ರೀತಿಗಳಿಂದ ಹಳೆಯ ರೀತಿಗಳ ಮೇಲೆ ಯೋಗ್ಯ ಇಲ್ಲವೆ ಅಯೋಗ್ಯ ಪರಿಣಾಮವಾಗಬಹುದು. ಕೆಲವೊಂದು ರೀತಿಗಳು ಕೆಲಕಾಲ ಊರ್ಜಿತಾವಸ್ಥೆಯನ್ನು ಪಡೆದು ಅನಂತರ ಹೀನಾವಸ್ಥೆಯನ್ನು ಪಡೆದುದನ್ನೂ ಅಥವಾ ನಿರ್ನಾಮವಾದುದನ್ನೂ ಇಲ್ಲವೆ ಹೆಚ್ಚೆಚ್ಚು ಬಲಪಡೆದು ಅಭಿವೃದ್ಧಿ ಹೊಂದಿದುದನ್ನೂ ನಾವು ಕಾಣಬಹುದು.

ಎಲ್ಲ ಸುಸಂಘಟಿತ ಉದ್ಯಮವು ಸಹಕಾರ ಮತ್ತು ಪೃಥಕ್ಕರಣಗಳಿಂದಲೇ ಏಳಿಗೆಯನ್ನು ಪಡೆಯುತ್ತದೆಂಬುದನ್ನು ನಾವು ಈಗಾಗಲೇ ಪರಿಶೀಲಿಸಿದ್ದೇವೆ. ಯಾವ ಗುಂಪುಗಳು ಅಥವಾ ಸಾಮಾಜಿಕ ಘಟಕಗಳು ಈ ಸಂಘಟನೆಗಳಿಗೆ ಕಾರಣಗಳಾಗಿರುತ್ತವೆಂಬುದನ್ನು ಈಗ ನಾವು ಕಂಡುಕೊಳ್ಳಬೇಕು.

ಸಾಮಾಜಿಕ ಸಂಘ ಮತ್ತು ಕುಟುಂಬ ಇವೆರಡೇ ಈ ಸಂಘಟನೆಗಳಿಗೆ ಕಾರಣವಾಗಿರುತ್ತವೆ. ಮೇಲ್ಕಂಡ ಸಂಘಟನೆಯ ಏಳು ವಿಧಗಳಲ್ಲಿ ಸುಮಾರು ಐದು 'ಸಾಮಾಜಿಕ ಸಂಘ'ಕ್ಕೆ ಸಂಬಂಧಿಸಿವೆ.

ಆಪ್ತತ್ವದಿಂದ ಅದು ತಂಡವನ್ನು ನಿರ್ಮಿಸಿತು.

ತಂಡಗಳ ಐಕ್ಯದಿಂದ ಅದು ಪರಕೀಯ ವ್ಯವಹಾರಕ್ಕೂ, ಬಾಹ್ಯಶ್ರಮಸಂಘಟನೆಗೂ ಕಾರಣವಾಯಿತು.

ತಂಡಗಳಲ್ಲಿಯೂ ಸಣ್ಣ ಪುಟ್ಟ ಗುಂಪುಗಳಲ್ಲಿಯೂ ಅದು ಸ್ವತಂತ್ರ ಕೈಗಾರಿಕೆಗೆ ಎಡೆಯುಂಟುಮಾಡಿಕೊಟ್ಟಿತು.

ಅನೇಕ ಜನಪದಗಳ ಸಮೂಹದಲ್ಲಿ ಅದು ಬಂಡವಲುಗಾರಿಕೆಯ ಪ್ರಯತ್ನಕ್ಕೆ ಇಂಬು ಮಾಡಿಕೊಟ್ಟಿತು.

ಆಧುನಿಕ ದೊಡ್ಡ ರಾಜ್ಯಗಳಲ್ಲಿ ಸಾಮಾಜಿಕ ಉದ್ಯೋಗವನ್ನು ನಿರ್ವಹಿಸಿತು.

'ಸಾಮಾಜಿಕ ಸಂಘವು' ಮಾಡಿದ ಕೆಲಸಕ್ಕೆ ಕುಟುಂಬವು ಮಾಡಿದ ಕೆಲಸವನ್ನು ಹೋಲಿಸಿ ನೋಡಿದರೆ 'ಕುಟುಂಬ'ದ ಕೆಲಸವು ಅಷ್ಟೊಂದು ವಿಶಾಲವಾದದ್ದಲ್ಲವೆಂದು ತೋರುತ್ತದೆ. ಆದರೆ ಮೇಲ್ತರಗತಿಯ ಬಂಡವಲುಗಾರಿಕೆ ರೂಪುಗೊಳ್ಳುವವರೆಗೆ, ಶ್ರಮಸಂಘಟನೆಯ ಬೆಳವಣಿಗೆಯಲ್ಲಿ 'ಕುಟುಂಬವು' ಅತ್ಯಂತ ಮಹತ್ವವುಳ್ಳದ್ದಾಗಿತ್ತು. ಆಗ ವೈಯಕ್ತಿಕ ಉದ್ಯಮಕ್ಕೆ ಮಹತ್ವವಿತ್ತು. ಕುಟುಂಬದ ಸಂಪತ್ತು, ಮತ್ತು ವೈಯಕ್ತಿಕ ಹುಟ್ಟುವಳಿ, ಇವು ಸಾಮಾಜಿಕ ಸಂಪತ್ತು ಮತ್ತು ಅನೇಕರಿಗಾಗಿ ಮಾಡುವ ಹುಟ್ಟುವಳಿಯಷ್ಟೇ ಬೆಲೆಯನ್ನು ಪಡೆದಿದ್ದವು.

ದನಗಾರರ ಕಾಲದಲ್ಲಿ ಕುಟುಂಬವು ಹೆಚ್ಚು ಮಹತ್ವವನ್ನು ಪಡೆದಿತ್ತು. ಆದರೆ ಕೆಳತರಗತಿಯ ಒಕ್ಕಲುತನದ ಕಾಲದಲ್ಲಿ ತಂಡವು ತನ್ನ ಮುನ್ನಡೆಯನ್ನು ತುಂಬ ವೇಗದಿಂದ ಸಾಗಿಸಿತು. ತತ್ಪರಿಣಾಮವಾಗಿ ಕುಟುಂಬವು ತಂಡಕ್ಕೆ ತನ್ನ ಸಾಂಪತ್ತಿಕ ಕಾರ್ಯಕ್ಷೇತ್ರವನ್ನು ಬಿಟ್ಟುಕೊಡಬೇಕಾಯಿತು. ತಂಡದಲ್ಲಿಯ ಬೇರೆ ಬೇರೆ ವ್ಯಕ್ತಿಗಳು ಒಂದಾಗಿ ತಿನ್ನುತ್ತಿದ್ದರು. ಅವರು ತಮ್ಮ ಶಕ್ತಿಯನ್ನು ಒಟ್ಟುಗೂಡಿಸಿ ಹೊಲಗಳನ್ನು ಅಗಿದು ಸಾಗುಮಾಡುತ್ತಿದ್ದರು. ಬೆಳೆಯನ್ನು ವೈಯಕ್ತಿಕ ಅವಶ್ಯಕತೆಗನುಗುಣವಾಗಿ ವಿಭಾಗಿಸಿಕೊಳ್ಳುತ್ತಿದ್ದರು. ಇಂಡಿಯನ್ನರಲ್ಲಿಯೂ ಮಲಾಯರಲ್ಲಿಯೂ ಕುಟುಂಬದ ಸಂಬಂಧವು ಬಹು ದುರ್ಬಲಗೊಂಡಿತ್ತು. ಅವರಲ್ಲಿ ಗಂಡಹೆಂಡಿರಿಬ್ಬರೂ ಕೂಡಿಕೊಂಡಿರದೆ ತಮ್ಮ ತಮ್ಮ ತಂಡಗಳಲ್ಲಿಯೇ ವಾಸವಾಗಿರುತ್ತಿದ್ದರು. ಸಾಂಪತ್ತಿಕ ದೃಷ್ಟಿಯಿಂದ ಕುಟುಂಬಕ್ಕೆ ಯಾವ ಮಹತ್ವವೂ ಇರಲಿಲ್ಲ.

ಆದರೆ ಮೂರನೆಯ ಅವಸ್ಥೆಯಲ್ಲಿ, ಲಕ್ಷಾಂತರ ವರುಷಗಳ ವರೆಗೆ ಅಸ್ತಿತ್ವದಲ್ಲಿದ್ದ ತಂಡದ ಶಕ್ತಿಯು ಕುಗ್ಗಹತ್ತಿತು. ಅಧಿಕಾರಯುಕ್ತ ನಿಯಂತ್ರಣಕ್ಕೆ ಎಡೆಯನ್ನುಂಟುಮಾಡಿಕೊಟ್ಟಿತು. ಕುಟುಂಬವು ಮತ್ತೆ ಅಗ್ರಸ್ಥಾನವನ್ನು ಪಡೆಯಿತು. ತಂಡದ ಅನೇಕ ಕಾರ್ಯಕಲಾಪಗಳನ್ನು ಅದು ಕೈಕೊಂಡಿತು. ಒಂದೊಂದು ಕುಟುಂಬದ ಅನೇಕ ವ್ಯಕ್ತಿಗಳನ್ನು

ಏಕತ್ರವಾಗಿಟ್ಟು ತನ್ನ ಬಲವನ್ನು ಬೆಳೆಸಿಕೊಂಡಿತು. ಗುಲಾಮರನ್ನೂ ಸೇವಕರನ್ನೂ ಉಪಯೋಗಿಸಕೊಳ್ಳಹತ್ತಿತು. ಇದು ಕೂಡಲೇ ಪ್ರಭುತ್ವ-ಪದ್ಧತಿಗೆ ದಾರಿಯನ್ನು ಮಾಡಿಕೊಟ್ಟಿತು.

ಪ್ರಭುತ್ವ-ಪದ್ಧತಿಯು ಪಟ್ಟಣಗಳ ನಿರ್ಮಾಣವಾಗುತ್ತಿರುವಾಗಲೂ, ಬಂಡವಲುಗಾರಿಕೆಯು ನಡುವಿನ ಅವಸ್ಥೆಯು ವರೆಗೂ ಅಸ್ತಿತ್ವದಲ್ಲಿತ್ತು. ಮನೆಯ ಪ್ರತಿಯೊಂದು ಕೈಗಾರಿಕೆ—ಅಡಿಗೆ, ಹೊಲಿಗೆ ಮುಂತಾದ ಕೆಲಸಗಳು— ಲೋಕ ಹುಟ್ಟುವಳಿಯ ಕಡೆಗೆ ಲಕ್ಷ್ಯಕೊಟ್ಟಿತು. ಆ ಮೇಲೆ ಬಂಡವಲುಗಾರಿಕೆಯ ಪೂರ್ವಾವಸ್ಥೆ ಸುರುವಾಯಿತು. ಬರಬರುತ್ತ ಅದು ಖಾಸಗಿ ಹುಟ್ಟುವಳಿಯನ್ನು ಕುಗ್ಗಿಸಹತ್ತಿತು.

ಬಂಡವಲುಗಾರಿಕೆಯ ನಡುವಿನ ಅವಸ್ಥೆಯಲ್ಲಿ ಬೇರೆ ಬೇರೆ ಸಂಘಟನೆಗಳಲ್ಲಿ ಪ್ರತಿಸ್ಪರ್ಧೆಯುಂಟಾಯಿತು. ಯಂತ್ರಗಳ ನಿರ್ಮಾಣದಿಂದ ಬಂಡವಲುಗಾರಿಕೆಯ ಪ್ರಯತ್ನಕ್ಕೆ ವಿಶಾಲ ಕ್ಷೇತ್ರವು ದೊರಕಿತು. ಮೇಲ್ಮೆಯನ್ನು ಪಡೆಯಬೇಕೆಂಬ ಹೆಣಗಾಟದಲ್ಲಿ ಮನೆಮಾರಿಗೆಯ ಸಣ್ಣ ಪುಟ್ಟ ಕೈಗಾರಿಕೆಗಳು ಮೂಲೆಗುಂಪಾದವು. ವ್ಯಾಪಾರಕ್ಕಾಗಿ ಆಗುವ ಹುಟ್ಟುವಳಿ ವೈಯಕ್ತಿಕ ಹುಟ್ಟುವಳಿಗಿಂತಲೂ ಅತಿಯಾಯಿತು. ಮೇಲ್ತರಗತಿಯ ಬಂಡವಲುಗಾರಿಕೆಯ ಕಾಲದಲ್ಲಿ ಕೂಲಿಕಾರರ ಸಂಘವು ಒಳ್ಳೇ ಮಹತ್ವವನ್ನು ಪಡೆಯಿತು.

ಇಷ್ಟಾದರೂ ಮಿತವ್ಯಯಕ್ಕೆ ಸಹಾಯಕಾರಿಯಾದ, ಅಡಿಗೆ ಮಾಡುವುದು, ಒಗೆಯುವುದು ಮುಂತಾದ ಕೆಲಸಗಳು ಕುಟುಂಬದ ಕೈಯಲ್ಲಿಯೇ ಸಿಕ್ಕಿಕೊಂಡಿವೆ. ಬಂಡವಲುಗಾರಿಕೆ ಬೆಳೆದು ಬಾಳಬೇಕಾದರೆ ಕುಟುಂಬದಲ್ಲಿ ಸಂಪತ್ತು ತಲೆಯಿಂದ ತಲೆಗೆ ಪರಂಪರಾಗತವಾಗಿ ಬರಬೇಕು. ಹಾಗಿದ್ದರೂ ಶ್ರಮಸಂಘಟನೆ ಹೆಚ್ಚೆಚ್ಚು ದೃಢವಾದಂತೆ ಅನೇಕ ಸಾಂಪತ್ತಿಕ ಚಟುವಟಿಕೆಗಳು ಕುಟುಂಬದ ಕೈಬಿಟ್ಟು ಇನ್ನುಳಿದ ಸಂಘಟನೆಗಳ ಹಸ್ತಗತವಾಗುತ್ತವೆ.

**ಶ್ರಮವಿಭಾಗ ಕ್ರಮ:- ೧ನೆಯ ಅವಸ್ಥೆ: ಗಂಡಸು ಹೆಂಗಸಿನ ಕೆಲಸದ ಪೃಥಕ್ಕರಣ:-** (ಅ) ಬೇಟೆಗಾರರಲ್ಲಿ: ಹೆಂಗಸು ಅಡವಿಗಳಲ್ಲಿ, ಹೊಲಗಳಲ್ಲಿ ಆಹಾರವನ್ನು ಸಂಚಯಿಸಿಕೊಂಡು ಬರುತ್ತಾಳೆ, ಮತ್ತು ಶಿಸು-

ಸಂಗೋಪನ ಕಾರ್ಯವನ್ನು ಮಾಡುತ್ತಾಳೆ. ಇದಲ್ಲದೆ ಎಲ್ಲ ಭಾರವಾದ, ಕಠಿಣವಾದ, ಅಸಹ್ಯವಾದ ಕೆಲಸ ಅವಳ ಮೇಲೆ ಬೀಳುತ್ತದೆ. ಆದುದರಿಂದ ಅವಳು ಒಂದು ವಿಶಿಷ್ಟ ಪ್ರಕಾರದ ಒಜ್ಜೆ ಹೊರುವ ಪಶುವೆಂದೂ ಶ್ರಮ ವಹಿಸುವ ಪ್ರಾಣಿಯೆಂದೂ ತಿಳಿಯಲ್ಪಡುತ್ತಾಳೆ.

(ಆ) ದನಗಾರರಲ್ಲಿ ಶಾಕಾಹಾರವನ್ನು ದೊರಕಿಸುವುದು ಹೆಂಗಸಿನ ಕೆಲಸವೆಂದೂ ಮಾಂಸಾಹಾರವನ್ನು ದೊರಕಿಸುವುದು ಗಂಡಸಿನ ಕೆಲಸ ವೆಂದೂ ಭಾವಿಸಲ್ಪಡುತ್ತನೆ. ದನಗಳ ಹಿಂಡುಗಳು ಗಂಡಸಿನ ನಿಯಂತ್ರಣ ದಲ್ಲಿರುವುದರಿಂದ ಅವನ ಸಾಂಪತ್ತಿಕ ಮಹತ್ವ ಬೆಳೆಯುತ್ತದೆ. ಹೆಂಗಸಿನ ಸಾಮಾಜಿಕ ಮಹತ್ವ ಕಡಿಮೆಯಾಗುತ್ತದೆ.

(ಇ) ಮತ್ತೆ ಒಕ್ಕಲುತನದ ಕೆಳಗಿನ ತರಗತಿಯಲ್ಲಿ ಗಂಡಸು ಬೇಟೆ ಗಾರಿಕೆಯ ಅವಸ್ಥೆಯ ಕೀಳು ರೀತಿಯಿಂದಲೇ ಆಹಾರ ಸಂಪಾದಿಸಲು ಪ್ರಯತ್ನಿಸುತ್ತಾನೆ. ಹೆಂಗಸು ಭೂಮಿಯನ್ನು ಸಾಗುಮಾಡುತ್ತಾಳೆ. ಆದುದರಿಂದ ಅವಳ ಸಾಂಪತ್ತಿಕ ಸ್ಥಿತಿ ಹೆಚ್ಚು ಬಲಪಡುತ್ತದೆ ಮತ್ತು ಆ ಕಾಲದ ಸಂಸ್ಕೃತಿಯ ಮುನ್ನಡೆಯಲ್ಲಿ ಅವಳು ಮಹತ್ವದ ಸ್ಥಾನ ಪಡೆಯುತ್ತಾಳೆ.

**೨ನೆಯ ಅವಸ್ಥೆ: ಗಂಡಸರ ಕೆಲಸದಲ್ಲಿ ಪೃಥಕ್ಕರಣ:** ಹೆಂಗಸು ಅಡಿವೆ ಮತ್ತು ಹೊಲಗಳಲ್ಲಿಯ ಕೆಲಸವನ್ನು ಬಿಟ್ಟುಕೊಡುತ್ತಾಳೆ. ಮನೆಯೇ ಈಗ ಅವಳ ಕಾರ್ಯಕ್ಷೇತ್ರ. ಅಲ್ಲಿ ಅವಳು ವಿವಿಧ ಕಾರ್ಯ ಕಲಾಪಗಳನ್ನು ಜರುಗಿಸಬೇಕಾಗುತ್ತದೆ. ಮುಖ್ಯವಾಗಿ ಕಚ್ಚಾ ಮಾಲನ್ನು ಸಿದ್ಧಪಡಿಸುವುದು ಅವಳ ಪಾಲಿಗೆ ಒರುತ್ತದೆ. ಅವಳ ಸಾಮಾಜಿಕ ಮಹ ತ್ವವು ಮತ್ತೆ ಕಡಿಮೆಯಾಗುತ್ತದೆ. ಗಂಡಸಿನ ಕೆಲಸದಲ್ಲಿ ಪೃಥಕ್ಕರಣವು ಸುರುವಾಗುತ್ತದೆ. ಗಂಡಸಿನ ಕೆಲಸದಲ್ಲಿ ಪೃಥಕ್ಕರಣದಿಂದಲೇ ಮಾನವ ಸಮಾಜವು ತನ್ನ ಪ್ರಾಕೃತಿಕ ರೀತಿಯನ್ನು ಬಿಟ್ಟು ಕ್ರಮೇಣ ನಾಗರಿಕ-ತೆಯ ಮೆಟ್ಟಲುಗಳನ್ನು ಏರಹತ್ತಿದೆ. ಗಂಡಸರಲ್ಲಿ ಕೂಲಿಕಾರರು, ಶಿಲ್ಪಿ ಗರು, ವ್ಯಾಪಾರಿಗಳು, ಸೈನಿಕರು, ಉಪಾಧ್ಯಾಯರು, ಆಳರಸರು ಎಂಬ ಭೇದಗಳುಂಟಾಗಿರುತ್ತವೆ. ಇದರಿಂದಲೇ ರಾಜ್ಯಗಳನ್ನು ಕಟ್ಟಿಕೊಂಡಿರು

ವುದು ಸಾಧ್ಯವಾಗಿರುತ್ತದೆ. ರಾಜ್ಯಗಳನ್ನು ಕಟ್ಟಿಕೊಂಡಿರುವುದು ನಾಗರಿಕ-ತೆಯ ಕುರುಹು.

**೩ನೆಯ ಅವಸ್ಥೆ: ಹೆಂಗಸರ ಕೆಲಸದಲ್ಲಿ ಪೃಥಕ್ಕರಣ:** ಬಂಡವಲು ಗಾರಿಕೆಯ ಸಂಘಟನೆಗಳು ಹೆಂಗಸಿನ ಮನೆಗೆಲಸದ ಅವಶ್ಯಕತೆಯನ್ನು ಕಡಿಮೆ ಮಾಡಿ, ಅವಳು ಮನೆಯ ಹೊರಗಿನ ವಿವಿಧ ಕಾರ್ಯಗಳನ್ನು ಕೈ ಕೊಳ್ಳುವಂತೆ ಒತ್ತಾಯಪಡಿಸುತ್ತವೆ. ಇಂತಹ ಪೃಥಕ್ಕರಣವು ಇತ್ತೀ ಚೆಗೆ ಹೆಚ್ಚು ಪ್ರಚಾರದಲ್ಲಿ ಬಂದಿದೆ. ನಿಜವಾಗಿಯೂ ಮಧ್ಯ ಯುಗದ ಲ್ಲಿಯೇ ಹೆಂಗಸರ ಕೆಲಸದಲ್ಲಿ ಪೃಥಕ್ಕರಣವಾಗಿದ್ದುದನ್ನು ಕಾಣಬಹುದು. ಅನೇಕ ಪುರುಷರು ಆಗ ಮೇಲಿಂದ ಮೇಲೆ ಸಂಭವಿಸುವ ಯುದ್ಧಗಳ ಮೂಲಕ ಮಡಿದು ಹೋಗುತ್ತಿದ್ದರು. ಇದಲ್ಲದೆ ಕೆಲವರು ಉಪಾಧ್ಯಾಯ ರೆಂದು ಬ್ರಹ್ಮಚರ್ಯದಿಂದ ಉಳಿಯಬೇಕಾಗುತ್ತಿತ್ತು. ಆದುದರಿಂದ ವಧು ಗಳ ಸಂಖ್ಯೆ ವರಗಳ ಸಂಖ್ಯೆಗಿಂತಲೂ ಹೆಚ್ಚುತ್ತಿತ್ತು. ಅಂತೆಯೇ ಎಷ್ಟೋ ಸ್ತ್ರೀಯರು ಅವಿವಾಹಿತರಾಗಿರಬೇಕಾಗುತ್ತಿತ್ತು. ಅಂತಹರು ವಿವಿಧ ಕೆಲಸ ಗಳನ್ನು ಕೈಕೊಂಡು ತಮ್ಮ ಜೀವನಸರಥವನ್ನು ಸಾಗಿಸಬೇಕಾಗುತ್ತಿತ್ತು. ಹೊಲಿಗೆ, ಒಗೆಯುವುದು, ನೂಲುವುದು, ನೇಯುವುದು ಮುಂತಾದ ಕೆಲಸ ಗಳಲ್ಲಿ ಅವರು ನಿಷ್ಣಾತರಾಗಹತ್ತಿದರು. ಬರಬರುತ್ತ ಯಂತ್ರಗಳ ಯುಗವು ಪ್ರಾರಂಭವಾದೊಡನೆ ಹೆಂಗಳೆಯರು ಕಾರ್ಖಾನೆಗಳಲ್ಲಿ ವಿವಿಧ ಕಾರ್ಯ ಗಳನ್ನು ಮಾಡಹತ್ತಿದರು. ವ್ಯಾಪಾರ ವ್ಯವಹಾರದಲ್ಲಿಯೂ ಅವರು ಕಾಲಿ ಡಲಾರಂಭಿಸಿದರು. ಲೆಕ್ಕಪತ್ರವಿಡುವುದು, ಲೆಕ್ಕವನ್ನು ತಪಾಸಿಸುವುದು, ಪತ್ರವ್ಯವಹಾರವನ್ನು ಮಾಡುವುದು, ಮಾರಾಟ ಮಾಡುವುದು ಮುಂತಾದ ಕೆಲಸಗಳನ್ನು ಕೈಕೊಂಡರು. ೧೮–೧೯ನೆಯ ಶತಮಾನಗಳಿಂದ ಸ್ತ್ರೀಯರು ದಾಯಿಗಳು, ವೈದ್ಯರು, ಶಿಕ್ಷಕಿಯರು, ಸುದ್ದಿಗಾರರು, ಲೇಖಿಕೆಯರು, ಚಿತ್ರ ಕಾರರು ಮುಂತಾಗಿ ಕೆಲಸ ಮಾಡಹತ್ತಿರುತ್ತಾರೆ. ಇಂತು ಕೇವಲ ಗೃಹ ಕಾರ್ಯದಲ್ಲಿ ತೊಡಗಿಕೊಂಡಿರದೆ, ಈಗ ಸ್ತ್ರೀಯರು ಪುರುಷರ ಸರಿಸಮಾನ ರಾಗಿ ಅನೇಕ ಕಾರ್ಯಕ್ಷೇತ್ರಗಳಲ್ಲಿ ಕೆಲಸ ಮಾಡಹತ್ತಿದ್ದಾರೆ. ಸ್ತ್ರೀಯರ ಕೆಲಸದಲ್ಲಿ ಪೃಥಕ್ಕರಣವೆಂದರೆ ಸ್ತ್ರೀಯರ ಸಾಂಪತ್ತಿಕ ಸ್ವಾತಂತ್ರ್ಯಕ್ಕೂ ವೈಯ್ಯಕ್ತಿಕ ಸ್ವಾತಂತ್ರ್ಯಕ್ಕೂ ಇಂಬುಗೊಟ್ಟಂತೆ. ಇದರಿಂದ ಸ್ತ್ರೀಪುರುಷರಿಗೆ

ಸರಿಸಮಾನ ಹಕ್ಕುಬಾಧ್ಯತೆಗಳು ದೊರೆತು ಗಂಡಸಿನ ಸಾರ್ವಭೌಮತ್ವವು ಕೊನೆಗೊಳ್ಳುತ್ತದೆ. ಮೈಮುರಿದು ಹೊಟ್ಟೆ ತುಂಬಿಕೊಳ್ಳುವ ಪ್ರಸಂಗ ಸ್ತ್ರೀಯಳಿಗೂ ಬಂದೊದಗಿದರೆ ಅವಳ ಸಂಕುಚಿತ ದೃಷ್ಟಿ ಮಾಯವಾಗಿ ವರ್ಗ ವರ್ಗಗಳಲ್ಲಿಯು, ಜಾತಿಜಾತಿಗಳಲ್ಲಿಯು ವೈಮನಸ್ಸು ವೈಪರೀತ್ಯಗಳು ಇಲ್ಲ ದಂತಾಗುತ್ತವೆ. ಪುರುಷನ ಅರ್ಧಾಂಗಿಯಾದ ಸ್ತ್ರೀಯೂ ದುಡಿಯಹತ್ತಿ ದರೆ, ಕುಟುಂಬದ ಆಯ ಬೆಳೆದು ಗಂಡಸಿನ ಭಾರ ಕಡಿಮೆಯಾಗಿ ಅವನಿಗೆ ಸಾಕಷ್ಟು ವಿಶ್ರಾಂತಿ ದೊರೆತು ಕುಟುಂಬಕ್ಕೆ ಸೌಖ್ಯ ದೊರೆಯುತ್ತದೆ. ಇಂತು ಅಡಿಗೆಮನೆಯ ಕಗ್ಗತ್ತಲೆಯಿಂದ ಸ್ತ್ರೀಯು ಮನೆಯ ಹೊರಗಿನ ಪ್ರಕಾಶಮಯವಾದ ಸಾಮಾಜಿಕ ಜೀವನರಂಗದಲ್ಲಿ ಕಾಲಿಟ್ಟರೆ ಸಂಸ್ಕೃ-ತಿಯು ಭರದಿಂದ ಮುಂದೆ ಸಾಗಿ ನವನಾಗರಿಕತೆ ತಲೆದೋರುತ್ತದೆ. ಹಿಂದು ಸ್ಥಾನದಶ್ರೇಷ್ಠವರ್ಗದವರೆಂದು ಜಂಭಕೊಚ್ಚಿಕೊಳ್ಳುವವರಿಗಂತೂ ಈ ಮಾತಿ ನಲ್ಲಿ ಕಲಿಯಬಹುದಾದ ಅತ್ಯುತ್ತಮ ಪಾಠವು ಅಡಕವಾಗಿದೆ. ಧರ್ಮದ ತಪ್ಪುತಿಳುವಳಿಕೆಯಿಂದ ಅನೇಕ ಅರ್ಥವಿಲ್ಲದ ಸಾಂಪ್ರದಾಯಗಳನ್ನು ಪರಿ ಪಾಲಿಸುವುದರಲ್ಲಿಯೇ ಅವರ ಸ್ತ್ರೀಯರ ಕಾಲವು ವ್ಯರ್ಥ ವ್ಯಯವಾಗುತ್ತದೆ; ದೇಹವು ಸವಿಯುತ್ತದೆ. ಸಂಕುಚಿತ ಬುದ್ಧಿ ಬೆಳೆಯುತ್ತದೆ. ಸಮಾಜವು ಪರಿ ಪೂರ್ಣತೆಯನ್ನು ಪಡೆಯಬೇಕಾದರೆ ಕೇವಲ ಪುರುಷನೊಬ್ಬನೇ ಅಲ್ಲದೆ ಅವನೊಡನೆ ಸ್ತ್ರೀಯೂ ಕೂಡ ಸಮಾನವಾಗಿ ಪ್ರಗತಿ ಹೊಂದಬೇಕು.

—

## ಹತ್ತನೆಯ ಮೆಟ್ಟಲು

## ಸಂಸ್ಕೃತಿಯ ಬೆಳೆವಣಿಗೆಗೆ ಕಾರಣಗಳು



ವಿಜ್ಞಾನ ಯುಗದ ಪೂರ್ವದಲ್ಲಿ ಮಾನವನು ಅಂತರ್ಜ್ಞಾನದ ಬೆಳಕಿನಲ್ಲಿ ಸತ್ಯವನ್ನರಿತುಕೊಳ್ಳಲು ಪ್ರಯತ್ನಿಸುತ್ತಿದ್ದನು. ಸತ್ಯಾನ್ವೇಷಣದಲ್ಲಿ ತನ್ನ ಸುತ್ತುಮುತ್ತಲಿರುವ ಜಗತ್ತಿನ ವಾಸ್ತವ ಸ್ವರೂಪವನ್ನೂ ಅದರ ವ್ಯಾಪಾರ

ಗಳನ್ನೂ ಹೀಯಾಳಿಸಿ ದೂರೀಕರಿಸುತ್ತಿದ್ದನು. ಇದರಿಂದ ಎಷ್ಟೋ ಮಹತ್ವದ ಉದಾರ ಭಾವನೆಗಳು ಬೆಳಕಿಗೆ ಬಂದದ್ದೇನೋ ನಿಜ. ಆದರೆ ಇಂತಹ ವಿಚಾರಗಳಿಗೂ ನಿಜವಾದ ವಸ್ತುಸ್ಥಿತಿಗೂ ತಾಳಮೇಳಗಳಿಲ್ಲದಿರುವುದೇ ಇಂತಹ ಭಾವನೆಗಳಲ್ಲಿಯ ದೊಡ್ಡ ಕೊರತೆಯಾಗಿರುತ್ತಿತ್ತು. ಆದುದರಿಂದ ಅವು ಸುಂದರವಾಗಿದ್ದರೂ ಕೇವಲ ಕಾಲ್ಪನಿಕ ಚಿತ್ರಗಳಾಗಿಯೇ ಉಳಿದಿದ್ದವ—ಹಾಗೆಯೇ ಇನ್ನೂ ಉಳಿದಿವೆ ಆಗ ಸಮಾಜಶಾಸ್ತ್ರವು ಇನ್ನೂ ಶಾಸ್ತ್ರವಾಗಿರದೆ 'ಇತಿಹಾಸದ ತತ್ವಜ್ಞಾನ' (Philosophy of history) ವೆಂಬ ಹೆಸರಿನಿಂದ ಬಾಲ್ಯಾವಸ್ಥೆಯಲ್ಲಿಯೇ ಇದ್ದಿತು.

ಆ ಮೇಲೆ ಪದಾರ್ಥವಿಜ್ಞಾನದಂತಹ ಶಾಸ್ತ್ರಗಳು ಬೆಳಕಿಗೆ ಬರಹತ್ತಿದವು. ಪ್ರಮಾಣಿಸಿ ವಿಚಾರಿಸಿದ ಹೊರತು ಯಾವುದೊಂದು ವಿಷಯವಾಗಿ ಅಭಿಪ್ರಾಯವನ್ನು ತಾಳುವುದು ಯೋಗ್ಯವಲ್ಲೆಂಬ ತಿಳಿವಳಿಕೆ ಜನರಲ್ಲಿ ಉಂಟಾಯಿತು. ಶಾಸ್ತ್ರೀಯ ಸಂಶೋಧನೆಯ ಮಾರ್ಗದಿಂದಲೇ ಸತ್ಯದ ಶಿಖರವನ್ನೇರಬಲ್ಲೆವೆಂಬ ಅರಿವು ಉಂಟಾಯಿತು. ವಿಜ್ಞಾನವು ನಮ್ಮನ್ನು ಮನೋರಾಜ್ಯ ವಿಜೃಂಭಣೆಯಿಂದ ಸತ್ಯದ ದೃಢವಾದ ತಳಹದಿಯ ಮೇಲೆ ತಂದಿರಿಸುತ್ತದೆ.

ನಮ್ಮ ಸ್ವಪ್ನಸೃಷ್ಟಿಯನ್ನು ನಾಶಗೊಳಿಸಿ ನಮ್ಮ ನಿಜವಾದ ಆದರ್ಶವನ್ನು ನಮ್ಮ ಕಣ್ಣಮುಂದಿರಿಸುತ್ತದೆ. ನಮ್ಮ ಹೆಗ್ಗುರಿಯನ್ನು ಮುಟ್ಟುವುದೇ ನಮ್ಮ ಕರ್ತವ್ಯವೆಂಬುದನ್ನು ತಿಳಿಸಿಕೊಡುತ್ತದೆ.

ವಿಜ್ಞಾನದ ಅರಿವು ನಮಗಿದ್ದರೆ ಮಾನವ ಸಂಸ್ಕೃತಿಯು ಅಭಿವೃದ್ಧಿಯನ್ನು ಹೊಂದಿದ ರೀತಿಯನ್ನೂ ಅದರ ಕಾರಣಗಳನ್ನೂ ನಾವು ಗುರುತಿಸಬಹುದು. ಸಂಸ್ಕೃತಿಯ ಬೆಳವಣಿಗೆಗೆ, ನೈತಿಕ ಹಿತೋಪದೇಶ, ಪ್ರವಚನ, ಗ್ರಂಥಸ್ಥ ವಿಚಾರ, ತತ್ವಜ್ಞಾನದ ಪದ್ಧತಿ ಇವುಗಳ ಪ್ರಭಾವವೇ ಕೇವಲ ಕಾರಣವಾಗಿರದೆ, ಸೃಷ್ಟಿಯೊಳಗಿನ ಅಪಾರ ಸಂಪತ್ತನ್ನು ಉಪಯೋಗಿಸಿಕೊಳ್ಳುವ ಜ್ಞಾನವೂ, ವಸ್ತುನಿರ್ಮಾಣ ಪದ್ಧತಿಗಳಲ್ಲಿಯ ಸುಧಾರಣೆಯೂ ಒಹುಮಟ್ಟಿಗೆ ಕಾರಣಗಳಾಗಿರುತ್ತವೆ. ಸಂಸ್ಕೃತಿಯು ಬೆಳೆಯಲಿಕ್ಕೆ ಅನೇಕ ಸಾಮಾಜಿಕ ಸಮಸ್ಯೆಗಳು ಕಾರಣಗಳಾಗಿವೆ. ಅವುಗಳಲ್ಲಿ ಮಾನ

ವನ ಸಾಂಪತ್ತಿಕ ಅಭಿವೃದ್ಧಿಯೇ ಮುಖ್ಯ ಕಾರಣವಾಗಿದೆ ಎಂದು ಹೇಳ ಬಹುದು.

**ಸಾಂಪತ್ತಿಕ ಬೆಳೆವಣಿಗೆಯ ಕಾರಣಗಳು: ೧. ಬೇರೆ ಬೇರೆ ಕುಟುಂಬಗಳ ಮತ್ತು ಸ್ತ್ರೀಪುರುಷರಲ್ಲಿ ಶ್ರಮವಿಭಾಗದ ಮೂಲ:** ನಮಗೆ ತಿಳಿದು ಬಂದ ಸಂಸ್ಕೃತಿಯ ತೀರ ಕೆಳಗಿನ ಮೆಟ್ಟಲಿನಲ್ಲಿ ಮಾನ ವನು ತಂಡಗಳಲ್ಲಿರುತ್ತಿದ್ದನೆಂದೂ, ಗುಂಪು ಮತ್ತು ಕುಟುಂಬ ಎಂಬ ಎರಡು ವಿಧವಾದ ಸಂಘಟನೆಗಳನ್ನು ಮಾಡಿಕೊಂಡಿದ್ದನೆಂದೂ ಕಂಡು ಬರುತ್ತದೆ. ಇದಕ್ಕಿಂತಲೂ ಕೆಳಗಿನ ಮೆಟ್ಟಲೊಂದು ಇದ್ದಿರಬೇಕು. ಅದು ಸಂಸ್ಕೃತಿಯ ಇತಿಹಾಸ ಪೂರ್ವಕಾಲದಲ್ಲಿದ್ದಿರಬೇಕು. ಆ ಕಾಲಕ್ಕೆ ಮಾನ ವನು ಪ್ರಾಕೃತಿಕ ರೀತಿಯಲ್ಲಿ ಕುಟುಂಬಗಳನ್ನು ಮಾಡಿಕೊಳ್ಳದೆ ಕೇವಲ ತಂಡಗಳನ್ನು ಕಟ್ಟಿಕೊಂಡಿದ್ದಿರಬಹುದು. ಪ್ರಾಕೃತಿಕ ಸ್ಥಿತಿಯಲ್ಲಿ ಮಾನವ ನಿಗೆ ಕೆಲಸವೇ ಇರುತ್ತಿರಲಿಲ್ಲ. ಆದುದರಿಂದ ಶ್ರಮವಿಭಾಗಕ್ಕೂ ಆಸ್ಪದ ವಿರಲಿಲ್ಲ.

ಇಂತಹ ಇತಿಹಾಸಪೂರ್ವಕಾಲದ ತಂಡಗಳಲ್ಲಿ ಸ್ತ್ರೀಪುರುಷರಲ್ಲಿ ಶ್ರಮವಿಭಾಗವೂ, ಸ್ತ್ರೀಯರ ದಾಸ್ಯತ್ವವೂ, ವಿಭಕ್ತ ಕುಟುಂಬಗಳೂ ಹೇಗೆ ತಲೆದೋರಿದವು? ಸಮಾಜಶಾಸ್ತ್ರಜ್ಞರು ಹೇಳುವುದೇನೆಂದರೆ—ನೆರೆಹೊರೆಯ ತಂಡಗಳು ಪರಸ್ಪರ ವಿರುದ್ಧವಾಗಿರುತ್ತಿದ್ದವು. ಬಡಿದಾಟ, ಹಿಂಸೆ, ಲೂಟಿ ಮುಂತಾದವು ನಡೆದಿರುತ್ತಿದ್ದವು. ಒಂದು ತಂಡವು ಮತ್ತೊಂದರಿಂದ ಕದ್ದುಕೊಂಡುಹೋಗಬಹುದಾದ ವಿಶೇಷ ವಸ್ತುವು ಯಾವುದೂ ಇದ್ದಿಲ್ಲ. ಆದರೆ ಸ್ತ್ರೀಯಳೇ ಒಳ್ಳೇ ಬೆಲೆಯುಳ್ಳ ಅಪಹರಣ ವಸ್ತುವಾಗಿದ್ದಳು. ಸ್ತ್ರೀ ಯರನ್ನು ಕದ್ದೊಯ್ಯುವದೂ ಮತ್ತು ಇನ್ನಿತರ ಹಿಂಸಾತ್ಮಕ ಕಾರ್ಯ ಗಳೂ ಈ ತರಗತಿಗೆ ಸಂಬಂಧಪಟ್ಟವುಗಳು. ಪರಕೀಯ ಸ್ತ್ರೀಯರನ್ನು ಸೆಳೆದೊಯ್ಯುವದು ಮಾನವರಲ್ಲಿ ಬಹುಕಾಲದಿಂದ ನಡೆದುಬಂದ ಹುಟ್ಟುಗುಣ ವಿದ್ದಂತೆ ತೋರುತ್ತದೆ. ಮೊನ್ನೆಮೊನ್ನಿನ ವರೆಗೆ ಇತಿಹಾಸಕಾಲದಲ್ಲಿಯೂ, ಅರಸರು ಪರದೇಶ ಪರಪ್ರಾಂತಗಳ ಸ್ತ್ರೀಯರನ್ನು ಅಪಹರಿಸುವದಕ್ಕಾಗಿ ದೊಡ್ಡ ದೊಡ್ಡ ಯುದ್ಧಗಳನ್ನೇ ಹೂಡಿದುದನ್ನು ನಾವು ಕಾಣಬಹುದು. ಕದ್ದೊಯ್ಯಲ್ಪಟ್ಟ ಸ್ತ್ರೀಯಳ ಸ್ಥಾನವು ಹೊಸ ತಂಡದಲ್ಲಿ ಅದರಲ್ಲಿಯೇ

ಹುಟ್ಟಿ ಬೆಳೆದ ಸ್ತ್ರೀಯರ ಸ್ಥಾನಮಾನಗಳಿಂದ ಭಿನ್ನವಾಗಿರುತ್ತದೆ. ಅವಳು ತನ್ನನ್ನು ಸೆಳೆದೊಯ್ದವನ ಸೊತ್ತು ಆಗುತ್ತಾಳೆ. ಅವನ ಹಿತಕ್ಕಾಗಿ ಅನೇಕ ಕಠಿಣ ಕೆಲಸಗಳನ್ನು ಮಾಡುತ್ತ ಆವನಿಗೆ ವಿಧೇಯಳಾಗಿರಬೇಕಾಗುತ್ತದೆ. ಮೊಟ್ಟಮೊದಲಿನ ಗುಲಾಮರೆಂದರೆ ಈ ಕದ್ದೊಯ್ದ ಸ್ತ್ರೀಯರೇ. ಈ ಪ್ರಾಚೀನ ಬೇಟೆಗಾರರು ಪುರುಷರನ್ನು ಸೆಳೆದೊಯ್ಯುತ್ತಿದ್ದಿಲ್ಲ. ಯಾಕೆಂದರೆ ಅವರು ಸುಲಭವಾಗಿ ತಪ್ಪಿಸಿಕೊಂಡು ಓಡಿಹೋಗಿ ಮತ್ತೆ ತಮ್ಮ ತಂಡ ಗಳನ್ನು ಕೂಡಿಕೊಳ್ಳುತ್ತಿದ್ದರು. ಸ್ತ್ರೀಯಳ ವಿಷಯ ಹಾಗಲ್ಲ. ಅವಳು ತನ್ನ ಹೊಸ ಗಂಡನಲ್ಲಿ ಅನುರಕ್ತಳಾಗಿರುತ್ತಿದ್ದಳು. ಮತ್ತು ಅವನಿಂದ ಮಕ್ಕ ಳನ್ನು ಹೆತ್ತೊಡನೆ ಓಡಿಹೋಗುವದು ಅಶಕ್ಯವಾಗುತ್ತಿತ್ತು. ಇಂತಹ ಸ್ತ್ರೀಯೊಡನೆ ಪುರುಷರು ಬೇರೆಬೇರೆ ಕುಟುಂಬಗಳನ್ನು ಕಟ್ಟಿಕೊಂಡಿರ ಹತ್ತಿದರು. ಇದುವೆ ಕುಟುಂಬದ ಮೂಲ. ಒಂದು ತಂಡದವರು ಮತ್ತೊಂದು ತಂಡದಿಂದ ಸ್ತ್ರೀಯರನ್ನು ಕದ್ದೊಯ್ದು ಕುಟುಂಬಗಳನ್ನು ಮಾಡಿಕೊಳ್ಳುತ್ತಿದ್ದುದರಿಂದ ಗುಂಪುಗಳ ಸಂಕಲನವಾಗಹತ್ತಿತು. ಅದುವೆ ಪ್ರಗತಿಯ ಮುನ್ನಡೆಗೆ ಕಾರಣವಾಯಿತು.

೨. **ಬುನಾದಿಕಾಲದ ವ್ಯಾಪಾರದ ಮೂಲ:** ಮೊದಮೊದಲು ತಂಡ ಗಳ ಸಂಪರ್ಕ ಯುದ್ಧದ ಮುಖಾಂತರ ಆಗುತ್ತಿತ್ತು. ಕಳವಿನಿಂದಲೇ ಅವರಲ್ಲಿ ವಸ್ತುವಿನಿಮಯವಾಗುತ್ತಿತ್ತು. ಬಲಿಷ್ಠ ತಂಡದವರು ದುರ್ಬಲ ರಿಂದ ಭೂಮಿ, ಸ್ತ್ರೀ, ಆಯುಧ ಮುಂತಾದವುಗಳನ್ನು ಸೆಳೆದೊಯ್ಯುತ್ತಿ ದ್ದರು. ಸ್ವಂತ ದುಡಿಮೆಯಿಲ್ಲದೆ ಪರರಿಂದ ಸುಲಭವಾಗಿ ವಸ್ತುಗಳನ್ನು ಹೊಡೆದು ಬಡಿದು ದೊರಕಿಸುವ ಮಾನವನ ಪ್ರವೃತ್ತಿ ಬಹುಕಾಲದಿಂದ ಇವತ್ತಿನ ವರೆಗೂ ನಡೆದುಬಂದಿದೆ. ಬರಬರುತ್ತ ಕಳವು ಕ್ರಮೇಣ ವಸ್ತು ವಿನಿಮಯಕ್ಕೆ ದಾರಿ ಮಾಡಿಕೊಟ್ಟಿತು. ಯುದ್ಧದ ಮೂಲಕ ತಂಡಗಳಲ್ಲಿ ಸಂಪರ್ಕವುಂಟಾದಾಗ ತಮ್ಮಲ್ಲಿಲ್ಲದ ಕೆಲವೊಂದು ವಸ್ತುಗಳು ಬೇರೆ ತಂಡ ಗಳಲ್ಲಿವೆ ಎಂಬುದು ಗೊತ್ತಾಗುತ್ತಿತ್ತು. ಒಮ್ಮೊಮ್ಮೆ ಸಮಬಲವುಳ್ಳ ತಂಡಗಳು ಬಡಿದಾಡಿ ಒಂದನ್ನೊಂದು ಸೋಲಿಸುವ ಗೋಜಿಗೆ ಹೋಗದೆ ಶಾಂತವಾಗಿ ತಮ್ಮೊಳಗಿನ ವಸ್ತುಗಳನ್ನು ಪ್ರದರ್ಶಿಸಿ, ಅವುಗಳ ವಿನಿಮಯ ಮಾಡುತ್ತಿದ್ದುವು. ಸೋತುಹೋದ ತಂಡಗಳು ಮತ್ತೆ ಸೇಡು ತೀರಿಸಿಕೊಳ್ಳ

ಬಾರದೆಂಬ ಇಚ್ಛೆಯಿಂದ, ಗೆದ್ದ ತಂಡಗಳು ಸೋತವರ ಅನೇಕ ವಸ್ತುಗಳನ್ನು ಅಪಹರಿಸಿ, ಅವಕ್ಕೆ ಬದಲಾಗಿ ತಮ್ಮಲ್ಲಿಯ ಕೆಲವೊಂದು ವಸ್ತುಗಳನ್ನು ಕಾಣಿಕೆಯಾಗಿ ಹಿಂದೆ ಬಿಟ್ಟು ಹೋಗುತ್ತಿದ್ದರು.

ಸ್ತ್ರೀಯರನ್ನು ಕದ್ದೊಯ್ದರೆ ಸೇಡು ತೀರಿಸಿಕೊಳ್ಳುವ ಕೆಲಸ ಒಳ್ಳೇ ರಭಸದಿಂದ ನಡೆಯುತ್ತಿತ್ತು. ಇದನ್ನು ತಪ್ಪಿಸುವದಕ್ಕಾಗಿ, ಮತ್ತು ಪರ ಸ್ತ್ರೀ ಹಂಬಲವನ್ನು ಸಾಧಿಸಿಕೊಳ್ಳುವದಕ್ಕಾಗಿ ಸ್ತ್ರೀ ವಿನಿಮಯವು ರೂಢಿ ಯಲ್ಲಿ ಬಂದಿತು. ಇದರಿಂದ ಅನ್ಯ ಸ್ತ್ರೀ ವಿವಾಹಗಳು ಬೆಳೆಯಹತ್ತಿದವು. ತಂಡಗಳ ಐಕ್ಯಕ್ಕೆ ಇದೊಂದು ಮಹತ್ವದ ಸಾಧನವಾಯಿತು. ಅನ್ಯಸ್ತ್ರೀ ವಿವಾಹಗಳಾದಲ್ಲಿ ವಸ್ತು ವಿನಿಮಯಕ್ಕೆ ಹೆಚ್ಚು ಆಸ್ಪದ ದೊರೆಯುತ್ತಿತ್ತು. ವಿನಿಮಯದಿಂದ ಬಂದ-ಹೋದ ಸ್ತ್ರೀಯರು ಮೊದಲು ಪರಸ್ಪರ ವಿರುದ್ಧ ವಾಗಿದ್ದ ತಂಡಗಳಲ್ಲಿ ಹೆಚ್ಚು ಪ್ರೀತಿ ವಿಶ್ವಾಸಗಳನ್ನು ಹುಟ್ಟಿಸಲು ಕಾರಣ ರಾಗುತ್ತಿದ್ದರು.

ಯುದ್ಧಗಳ ಮೂಲಕ ಒಂದು ತಂಡದಲ್ಲಿ ಹೆಚ್ಚು ಪುರುಷರು ಮರಣ ಹೊಂದಿದರೆ ಆ ತಂಡದವರು ಪ್ರತಿಪಕ್ಷವಾದ ಬೇರೊಂದು ತಂಡದಿಂದ ಕೆಲ ವೊಂದು ಪುರುಷರನ್ನು ಅಣ್ಣತಮ್ಮಂದಿರಂತೆ ಬರಮಾಡಿಕೊಂಡು ಮೃತರ ಹೆಂಡಂದಿರೊಡನೆ ಅವರ ಮದುವೆ ಮಾಡುತ್ತಿದ್ದರು. ಇಂತಹ ಮದುವೆ ಗಳ ಮೂಲಕ ತಂಡತಂಡಗಳಲ್ಲಿ ಸಖ್ಯ ಬೆಳೆದು ವ್ಯಾಪಾರ ವಿನಿಮಯಕ್ಕೆ ಮಾರ್ಗವುಂಟಾಗುತ್ತಿತ್ತು.

ಒಂದು ತಂಡದ ಜನಸಂಖ್ಯೆ ಬೆಳೆದರೆ ಮತ್ತೊಂದು ತಂಡಕ್ಕೆ ಕೆಲ ವರು ಹೋಗಿ ಕೂಡಿಕೊಳ್ಳುವ ರೂಢಿಯು ಬರಬರುತ್ತ ಉಂಟಾಯಿತು. ಇದರಿಂದ ಅನ್ಯಸ್ತ್ರೀ ವಿವಾಹಗಳು, ಸಖ್ಯವು ಬೆಳೆದವು. ಇಂತಹ ತಂಡ ಗಳಲ್ಲಿಯೇ ಹಿಂದೆ ವಿವರಿಸಿದ 'ಅತಿಥಿ ಕಾಣಿಕೆ'ಯ ವಿನಿಮಯವು ಸುರು ವಾಗಿರಬೇಕು. ಇದಲ್ಲದೆ ವ್ಯಾಪಾರದ ದೃಷ್ಟಿಯಿಂದ ಆಗುವ ವಿನಿಮಯಕ್ಕೆ 'ಮೌನ ವಿನಿಮಯ'ವೇ ಮೂಲವೆಂದು ಹೇಳಬಹುದು.

ವಸ್ತುವಿನಿಮಯದ ಬಹು ಹಳೆಯ ರೀತಿಯು ಬಹು ವಿಧವಾಗಿ ರೂಢಿ

ಯಲ್ಲಿ ಬಂದಿತು. ಆದರೆ ಒಂದು ತಂಡದ ಬೇರೆಬೇರೆ ವ್ಯಕ್ತಿಗಳಲ್ಲಿ ವಸ್ತು-ವಿನಿಮಯ ನಡೆಯುವುದಕ್ಕಿಂತ ಮುಂಚೆ ಬೇರೆಬೇರೆ ಪರಕೀಯ ತಂಡಗಳಲ್ಲಿ ಇಂತಹ ವಿನಿಮಯವು ಸಾಗುತ್ತಿತ್ತು. ಒಂದು ತಂಡದವರೆಲ್ಲ ಒಂದೇ ಬಗೆಯ ಪ್ರಾಕೃತಿಕ ಒಡವೆಗಳನ್ನು ಹೊಂದಿರುತ್ತಿದ್ದರು. ಆದುದರಿಂದ ಮೊದಮೊದಲು ಒಂದೇ ಒಂದು ತಂಡದ ಬೇರೆಬೇರೆ ವ್ಯಕ್ತಿಗಳಲ್ಲಿ ವಸ್ತು ವಿನಿಮಯದ ಪ್ರಶ್ನೆಯೇ ಉಂಟಾಗುತ್ತಿರಲಿಲ್ಲ. ತಂಡಗಳ ಸ್ತ್ರೀಪುರುಷರ ಕೆಲಸಗಳಲ್ಲಿ ಪ್ರತ್ಯೇಕವಾಗಿ ಪೃಥಕ್ಕರಣ ಸುರುವಾದಾಗಲೇ ತಂಡಗಳಲ್ಲಿ ವೈಯ್ಯಕ್ತಿಕವಾಗಿ ವಸ್ತುವಿನಿಮಯವಾಗತೊಡಗಿತು.

**೩. ವಿಶಿಷ್ಟ ಉದ್ಯೋಗಗಳ ಮೂಲ:** ಒಕ್ಕಲುತನವು ವಿಶಿಷ್ಟ ಉದ್ಯೋಗಗಳ ಮೂಲಕಾರಣ. ವ್ಯಕ್ತಿಗಳಿಗೆ ತಮ್ಮ ಹೊಟ್ಟೆಗೆ ಬೇಕಾಗುವುದಕ್ಕಿಂತಲೂ ಹೆಚ್ಚು ಬೆಳೆಯುವುದು ಸಾಧ್ಯವಾದಾಗಲೇ ಅನೇಕರು ತಮ್ಮ ಶಕ್ತಿಯನ್ನು ಕೇವಲ ಬೆಳೆಗಳನ್ನು ಬೆಳೆಸುವುದರಲ್ಲಿಯೇ ವೆಚ್ಚ ಮಾಡದೆ ಜೀವನಸಕ್ಕೆ ಬೇಕಾದ ಇನ್ನಿತರ ಸೌಕರ್ಯಗಳನ್ನು ನಿರ್ಮಿಸುವುದಕ್ಕೆ ಉಪಯೋಗಿಸುತ್ತಾರೆ. ಒಕ್ಕಲುತನದಲ್ಲಿ ತೊಡಗಿಕೊಂಡಿರದ ಜನರು ತಮ್ಮ ವೇಳೆಯನ್ನು ವ್ಯರ್ಥ ಕಳೆದರೆ, ಉದ್ಯೋಗಗಳ ಬೆಳವಣಿಗೆಯಾಗುವುದು ಸಾಧ್ಯವಿಲ್ಲ. ಬಿಡುವಿದ್ದ ಜನರನ್ನು ಕೆಲಸಕ್ಕೆ ಹಚ್ಚಬೇಕಾದರೆ ಒಂದು ಅಧಿಕಾರಯುಕ್ತ ಸಂಘಟನೆ ಬೇಕು. ಆದುದರಿಂದಲೇ ಪ್ರಭು, ಸೇವಕ, (ದುಡಿಸಿಕೊಳ್ಳುವವ, ದುಡಿಯುವವ) ಎಂಬ ಭೇದವುಂಟಾಯಿತು. ಇದರಿಂದ ಶ್ರಮವಿಭಾಗ ಸಾಧ್ಯವಾಗಿ ವಿಶಿಷ್ಟ ಉದ್ಯೋಗಗಳು ಬೆಳೆಯಹತ್ತಿದವು. ಇಂತು ಮೊದಮೊದಲು ಒಕ್ಕಲುತನದ ಬೆಳೆಯ ಸಮೃದ್ಧಿಯಿಂದಲೇ ಬೇರೆ ಬೇರೆ ಉದ್ಯೋಗಗಳು ಪ್ರಸಾರದಲ್ಲಿ ಬಂದವು. ಮುಂದೆ ಅವಶ್ಯಕತೆ, ಒತ್ತಾಯಗಳ ಮೂಲಕ ಕಲಾಕೋವಿದರು ಅನೇಕ ಉದ್ಯೋಗಗಳಲ್ಲಿ ತೊಡಗಿ ಅವುಗಳನ್ನು ಬೆಳೆಸಿದರು.

—

ಹನ್ನೊಂದನೆಯ ಮೆಟ್ಟಲು

## ಪ್ರಗತಿಯ ಸಾಮಾನ್ಯ ಕಾರಣಗಳು



ಮಾನವನ ಸಾಂಪತ್ತಿಕ ಅಭಿವೃದ್ಧಿಯ ಕಾರಣಗಳನ್ನು ನಾವು ಪರಿಶೀಲಿಸಿದ್ದಾಯಿತು. ಸಾಮಾಜಿಕ ಸಂಪತ್ತು, ಸ್ವಯಂಪರಿಪೂರ್ಣವಾದ ತಂಡಗಳಿಂದ ಅನೇಕ ಔದ್ಯೋಗಿಕ ಮೆಟ್ಟಲುಗಳನ್ನೇರಿ ಬಂತವಲುಗಾರಿಕೆಯ ಸಂಘಟನೆಯ ವರೆಗೂ ಬೆಳೆದು ಬಂದಿದೆ. ಅನೇಕ ಸಹಕರಿಸುವ ಶಕ್ತಿಗಳು ಈಹೊತ್ತಿನ ಇಷ್ಟೊಂದು ತೊಡಕಿನ ಸಮಾಜವನ್ನು ನಿರ್ಮಿಸಿರುತ್ತವೆ. ಅಂತಹ ಸಮಾಜದ ವಿಚಿತ್ರ ಪ್ರಗತಿಗೆ ಸಾಮಾನ್ಯ ಕಾರಣಗಳಾವುವೆಂಬುದನ್ನು ನಾವು ಈಗ ವಿಚಾರಿಸಬಹುದಾಗಿದೆ.

ಮಾನವನೇ ಪ್ರಗತಿಯ ಮೂಲಭೂತ ಕಾರಣನೂ, ಸಂಸ್ಕೃತಿಯ ಸಂಚಾಲಕ ಶಕ್ತಿಯೂ, ಸಾಮಾಜಿಕ ಸಂಘಟನೆಗಳ ಕರ್ತೃವೂ ಆಗಿರುತ್ತಾನೆಂಬುದು ಸ್ಪಷ್ಟವಾಗಿ ಹೊಳೆಯುತ್ತದೆ.ಮಾನವನ ಸಾಮಾಜಿಕ ಸ್ವಭಾವವು, ಪರರೊಡನೆ ಸಹಕರಿಸಲು ಅವನನ್ನು ಒತ್ತಾಯಪಡಿಸುತ್ತದೆ. ಅಂತೆಯೇ ಅವನು ಅನೇಕ ಸಾಮಾಜಿಕ ಸಂಘಟನೆಗಳಿಗೆ ಕಾರಣೀಭೂತನಾಗಿದ್ದಾನೆ. ತನ್ನ ಮಾತಿನ ಬಲದಿಂದ ಅವನು ಬಹುಕಾಲದಿಂದ ಆನುವಂಶಿಕವಾಗಿ, ಅಕಸ್ಮಾತ್ತಾಗಿಯಾಗಲಿ ವಿಚಾರಶಕ್ತಿಯಿಂದಾಗಲಿ ದೊರೆತ ಅನೇಕ ಸೌಕರ್ಯಗಳನ್ನು ಶೇಖರಿಸಿಕೊಂಡಿರುತ್ತಾನೆ. ತನ್ನ ಬುದ್ಧಿಮತ್ತೆಯಿಂದ ಸಂಸ್ಕೃತಿಯ ಅತ್ಯುಚ್ಚ ಶಿಖರವನ್ನು ಮುಟ್ಟಿದ್ದಾನೆ. ಪ್ರಯತ್ನಪೂರಿತವಾದ ತನ್ನ ದುಡಿಮೆಯಿಂದ ಸೌಖ್ಯ ಪಡೆದು ಬಹು ವಿಧವಾಗಿ ಪ್ರಗತಿಯನ್ನು ಸಾಧಿಸಿಕೊಂಡಿದ್ದಾನೆ—ಸಾಧಿಸಿಕೊಳ್ಳುತ್ತಲಿದ್ದಾನೆ.

ವಂಶಪರಂಪರೆಯ ಮೂಲಕವೂ ಪ್ರಗತಿಯು ರಕ್ಷಿಸಲ್ಪಡುತ್ತದೆ. ಬಹುಕಾಲದಿಂದ ಬಳಕೆಯಲ್ಲಿರುವುದರಿಂದ ರೀತಿನೀತಿಗಳು ಗಡುಚಾಗುವ ಸಂಭವವಿರುತ್ತದೆ. ಹೊಸ ವಂಶಗಳೊಂದಿಗೆ ಹೊಸ ರೀತಿಗಳೂ ಸಮಾಜದಲ್ಲಿ ಕಾಲಿಡುತ್ತವೆ

ಶ್ರಮದ ಇತಿಹಾಸವನ್ನು ಪರಿಶೀಲಿಸುವಾಗ ಕೊರತೆ ಮತ್ತು ಒತ್ತಾಯ ಇವೆರಡೂ ಪ್ರಗತಿಗೆ ಮುಖ್ಯ ಕಾರಣಗಳೆಂಬುದನ್ನು ಅರಿತುಕೊಂಡಿದ್ದೇವೆ. ಮೇಲ್ತರಗತಿಯ ಸಂಸ್ಕೃತಿಗೆ ಆವಶ್ಯಕವಾಗಿರುವ ಒತ್ತಾಯದ ದುಡಿಮೆಯು ಪ್ರಾಕೃತಿಕ ಮನುಷ್ಯನಿಗೆ ಅಸಹ್ಯವೂ ಅಸ್ವಾಭಾವಿಕವೂ ಆಗಿರುತ್ತದೆ. ಆದುದರಿಂದ ಒತ್ತಾಯದಿಂದಲೇ ಅವನು ತನ್ನ ಸ್ವಾಭಾವಿಕ ಸೋಮಾರಿತನವನ್ನು ಬಿಟ್ಟುಕೊಟ್ಟು ದೀರ್ಘ ಶ್ರಮವನ್ನು ಕೈಕೊಳ್ಳಬಹುದು.

ಕೊರತೆ ಒತ್ತಾಯಗಳು ಉದ್ಯೋಗದ ಬೆಳೆವಣಿಗೆಗೆ ಕಾರಣಗಳಾಗಿದ್ದಂತೆ ಬಿಡುವು (ವಿನೋದ) ವೈಪುಲ್ಯಗಳು ಹೊಸ ಶೋಧನೆಗೆ ಕಾರಣಗಳಾಗಿರುತ್ತವೆ ಬಿಡುವು ವೈಪುಲ್ಯಗಳ ಮೂಲಕವಾಗಿಯೇ ಮಾನವನ ಸಂಶೋಧನಬುದ್ಧಿಯು ಜಾಗೃತವಾಗುತ್ತದೆ. ಬಿಡುವಿನಲ್ಲಿಯೇ ಮಾನವನ ಕೈಯು ಒಂದು ಕಲ್ಲನ್ನೆತ್ತಿ ಒಗೆಯಿತು. ಆಗ ಅದರ ಸಪ್ಪಳವನ್ನಷ್ಟೇ ಅಲ್ಲದೆ ಅದರ ವಿಚಿತ್ರ ಬಲವನ್ನೂ ವೇಗವನ್ನೂ ಕಂಡುಹಿಡಿದು ಕೂಡಲೆ ಅದನ್ನು ಕಲ್ಲಿನ ಸುತ್ತಿಗೆಯಂತೆ ಉಪಯೋಗಿಸಿಕೊಂಡಿತು. ಇದೇ ಮೇರೆಗೆ ಬಿಡುವಿನಲ್ಲಿ ಮನೋರಂಜನೆಗಾಗಿ ಆಟವಾಡುತ್ತಿದ್ದಾಗಲೇ, ಬೆಂಕಿ, ವಾದ್ಯ ಬಿಲ್ಲು, ಬಾಣ ಮುಂತಾದವುಗಳ ವಿಚಾರಗಳು ಮಾನವನ ಮನಸ್ಸಿನಲ್ಲಿ ಹೊಳೆದವು. ಬಿಡುವಿನಲ್ಲಿಯ ವಿನೋದಬುದ್ಧಿಯ ಮೂಲಕವೇ ಮಾತುಗಳೂ ಉಂಟಾದಂತೆ ತೋರುತ್ತದೆ. ಹರಟೆ ಹೊಡೆಯುವ ಪ್ರವೃತ್ತಿಯ ಮೂಲಕವೂ, ತಮ್ಮ ವಿಚಾರಗಳನ್ನು ಪರರಿಗೆ ವ್ಯಕ್ತಗೊಳಿಸಬೇಕೆಂಬ ತುರುಸಿನ ಮೂಲಕವೂ ಸಂಸ್ಕೃತಿಯ ಕೆಳಮೆಟ್ಟಲುಗಳಲ್ಲಿಯೂ ಮಾನವ ವಂಶಗಳು ಅನಾವಶ್ಯಕವಾಗಿ ಬಹು ವಿಶಾಲವಾದ ಶಬ್ದಭಾಂಡಾರವನ್ನು ಬಳಕೆಯಲ್ಲಿ ತಂದುಕೊಂಡುದನ್ನು ನಾವು ಕಾಣಬಹುದು. ಕೊರತೆಯ ಮೂಲಕವೇ ಇಷ್ಟೊಂದು ವಿಸ್ತೃತವಾದ ಶಬ್ದಸಂಗ್ರಹವು ಉಂಟಾಯಿತೆಂದು ಹೇಳಲಿಕ್ಕಾಗುವುದಿಲ್ಲ. ಸೆರೆಹಿಡಿದ ಕೆಲವೊಂದು ಪ್ರಾಣಿಗಳ ಆಲ್ಹಾದಕರವಾದ ಚಲನವಲನಗಳಿಂದ ಆನಂದಪಡುತ್ತಿದ್ದ ಮನುಷ್ಯನು ಕ್ರಮೇಣ ಹಲವಾರು ಪ್ರಾಣಿಗಳನ್ನು ಸಾಕುವ ರೂಢಿಯನ್ನು ಬಳಕೆಯಲ್ಲಿ ತಂದನು. ಈಗಲೂ ಚಿಕ್ಕಮಕ್ಕಳು, ಇಣಚಿ, ಗುಬ್ಬಿ, ಓತೀಕಾಟ ಮುಂತಾದವುಗಳನ್ನು ವಿನೋದಕ್ಕಾಗಿ ಹಿಡಿದುಕೊಂಡು ಬರುವಂತೆ, ಇನ್ನೂ ಕೆಲವೊಂದು ಹಿಂದು

ಳಿದ ಜನಾಂಗಗಳು, ಮಂಗ, ನರಿ, ಗಿಳಿ, ಚಿಗರೆ, ಕರಡಿ, ತೋಳ ಮುಂತಾದ ಮೃಗಳನ್ನು ಹಿಡಿದುತಂದು ಮನೆಯಲ್ಲಿ ವಿನೋದಕ್ಕಾಗಿ ಪಂಜರಗಳಲ್ಲಿಡುವುದನ್ನೂ ಕಾಣಬಹುದು. ಇಂತಹ ರೂಢಿಯಿಂದಲೇ ದನಗಳನ್ನು ಸಾಕುವುದು ಬಳಕೆಯಲ್ಲಿ ಬಂದಿರಬೇಕು. ಇದರಂತೆಯೇ ಭೂಮಿಯನ್ನು ಉತ್ತು ಹಲವಾರು ಬೆಳೆಗಳನ್ನು ಬೆಳೆಯುವುದಕ್ಕೆ, ಕೇವಲ ಆವಶ್ಯಕತೆ ಕಾರಣವಾಗಿರದೆ ವಸ್ತುವೈಪುಲ್ಯಕ್ಕಾಗಿರುವ ಮಾನವನ ಇಚ್ಛೆಯೇ ಕಾರಣವಾಗಿರುತ್ತದೆ. ವಿಲಾಸ ಒಡವೆಗಳಿಗೆ ಮಾನವನ ಮನಸ್ಸು ಹಾತೊರೆಯುತ್ತಿದುದರಿಂದಲೇ ಬುನಾದಿಕಾಲದಲ್ಲಿ ವ್ಯಾಪಾರವು ಅಸ್ತಿತ್ವದಲ್ಲಿ ಬಂದಿತು. ಪೂರ್ವಕಾಲದಿಂದ ದೇಶವಿದೇಶಗಳೊಡನೆ ನಡೆದು ಬಂದ ವ್ಯಾಪಾರವು ಕೇವಲ ಮಾನವನ ಆಹಾರ ಕೊರತೆಯನ್ನು ಪೂರೈಸುವುದಕ್ಕಾಗಿರದೆ, ಮಾನವನ ಜೀವನವು ಸುಂದರವಾಗಿಯೂ ಸುಖಮಯವಾಗಿಯೂ ಇರಬೇಕೆಂಬ ಅಭಿಲಾಷೆಯಿಂದ ನಡೆದಿತ್ತು. ಬಂಗಾರ, ವಜ್ರವೈಡೂರ್ಯ, ಗಂಧದ ಕಟ್ಟಿಗೆ, ಉಣ್ಣೆ ಮುಂತಾದ ವಿಲಾಸಪರ ವಸ್ತುಗಳಿಗಾಗಿ ಕ್ರಿಸ್ತಶಕದ ಪೂರ್ವದಲ್ಲಿ ಸುಮಾರು ೩೦೦೦ ವರುಷಗಳ ಹಿಂದಿನಿಂದಲೇ ಪರದೇಶಗಳೊಡನೆ ಜನರು ವ್ಯಾಪಾರವನ್ನು ಮಾಡುತ್ತಿದ್ದ ದೃಷ್ಟಾಂತಗಳಿವೆ. ಬಿಡುವು ( ವಿನೋದ ಬುದ್ಧಿ ) ವೈಪುಲ್ಯಗಳ ಮೂಲಕವೇ ವಿಜ್ಞಾನ, ಕಲೆಗಳ ಪ್ರಚಾರವಾಗಿದೆ. ಒಕ್ಕಲುತನ ವ್ಯಾಪಾರಗಳ ಬೆಳವಣಿಗೆಯಿಂದ ಹೊಟ್ಟೆಗೆ ಬೇಕಾದ ಹಿಟ್ಟಿನ ಚಿಂತೆ ಕಡಿಮೆಯಾಗಿ, ಮಾನವನ ಸಂಪತ್ತು ಅಪಾರವಾಗಿ ಬೆಳೆದಾಗಲೇ ವಿಜ್ಞಾನ ಕಲೆಗಳ ಅಭಿವೃದ್ಧಿಯಾಗತೊಡಗಿತು. ಆದುದರಿಂದಲೇ ಸಂಸ್ಕೃತಿ ಬೆಳೆದಂತೆ ಮಾನವನ ಸಂಶೋಧನ ಬುದ್ಧಿಯು ಬೆಳೆಯಿತು.

ಹೊಸ ಶೋಧನಗಳ ಇತಿಹಾಸದಲ್ಲ ಎಲ್ಲಿ ನೋಡಿದರೂ, ಶೋಧನಗಳು ಆವಶ್ಯಕತೆಯ ಪರಿಣಾಮವಾಗಿರದೆ ಬಿಡುವು ವೈಪುಲ್ಯಗಳ ಪರಿಣಾಮವಾಗಿರುತ್ತವೆಂಬುದು ಸ್ಪಷ್ಟವಾಗುತ್ತದೆ. ಕೊರತೆಯು ಮಾನವನನ್ನು ಕೆಲಸಕ್ಕೆ ಪ್ರೇರಿಸಬಹುದು. ಆದರೆ ಅಬಾಧಿತವಾದ ವಿಚಾರಸರಣಿಯು ಕಲ್ಪನಾ-ಶಕ್ತಿಯೂ ಹೊಸ ಶೋಧನಗಳಿಗೆ ಅವಶ್ಯವಾಗಿರುತ್ತವೆ. ಯಾವ ಕೊರ-ತೆಯೂ ಇಲ್ಲದಂತೆ ವಸ್ತುವೈಪುಲ್ಯವು ವಿಶೇಷವಾಗಿದ್ದಾಗ ಮಾನವನ ವಿನೋದಪರ ಬುದ್ಧಿಯು ತನ್ನ ವಿನೋದಕ್ಕಾಗಿ ಅನೇಕ ಹೊಸ ವಿಷಯ

ಗಳನ್ನು ಕಂಡುಹಿಡಿಯಬಹುದು—ನಿರ್ಮಿಸಬಹುದು. ಜಡತನವು ಬುದ್ಧಿ ಮಾಂದ್ಯಕ್ಕೆ ಕಾರಣವಾಗುತ್ತದೆ. ಆದುದರಿಂದಲೇ ಪ್ರಾಕೃತಿಕ ಜನರು ತಮ್ಮ ಜಡತನದ ಮೂಲಕ, ತಮಗೆ ಅನೇಕ ಕೊರತೆಗಳಿದ್ದರೂ, ಮುಂಬರುವ ಸಿರಿವಂತರಾಷ್ಟ್ರಗಳಷ್ಟು ಹೊಸ ಶೋಧನಗಳಲ್ಲಿ ಮುಂದುವರಿಯಲಿಲ್ಲ.

ಮೇಲ್ಕಂಡ ಪ್ರಗತಿಯ ಕಾರಣಗಳು ಕೆಲವುಮಟ್ಟಿಗೆ ಮಾನವನ ವಿಶಿಷ್ಟ ಗುಣಧರ್ಮಗಳಿಗೂ, ಕೆಲವುಮಟ್ಟಿಗೆ ಅವನ ಪರಿಸ್ಥಿತಿಗೂ ಸಂಬಂಧಿಸಿರುವಂತೆ ತೋರುತ್ತದೆ. ಪ್ರಗತಿಯು ಮಾನವನ ಅಂತಸ್ಥ ಗುಣವಾಗಿದೆ. ಅವನ ಸರ್ವ ಶಕ್ತಿಯಿಂದಲೇ ಅದು ಉಂಟಾಗುವುದು. ಆದುದರಿಂದ ಮಾನವ ಸಮಾಜವಿದ್ದೆಡೆಯಲ್ಲೆಲ್ಲ ಅದು ಅನಂತ ಕಾಲದವರೆಗೆ ತಲೆದೋರಲೇಬೇಕು.

ಆದರೆ ಇಂತಹ ಊಹೆಗೂ ವಸ್ತುಸ್ಥಿತಿಗೂ ತಾಳಮೇಳಗಳಿದ್ದಂತೆ ತೋರುವುದಿಲ್ಲ. ಪ್ರಾಕೃತಿಕ ಜನರನ್ನು ಬದಲಾಗದ ಪರಿಸ್ಥಿತಿಯಲ್ಲಿ ನೂರಾರು ವರುಷಗಳವರೆಗೆ ಬಿಟ್ಟರೆ ಅವರಲ್ಲಿ ಯಾವ ಹೆಚ್ಚುಕಡಿಮೆಯೂ ಆಗದೆಂಬುದನ್ನು ನಾವು ಕಾಣಬಹುದು. ಪ್ರಾಚೀನ ಕಾಲದಿಂದ ನಡೆದು ಬಂದ ಕೆಲವೊಂದು ಕಾಡು ಜನರು ಹೊಸತೆಂದೊಡನೆ ಮುಖ ತಿರುಗಿಸುವರು. ಸ್ಥಿತ್ಯಂತರವೂ ಪ್ರಗತಿಯೂ ಅವರಿಗೆ ಸೇರದ ವಿಷಯಗಳು. ಪೂರ್ವದಿಂದ ನಡೆದುಬಂದ ಸಾಂಪ್ರದಾಯಗಳಲ್ಲಿಯೇ ತಮ್ಮ ಬುದ್ಧಿಮತ್ತೆಯಿದೆಯೆಂದೂ, ತಮ್ಮ ಪೂರ್ವಜರಂತೆಯೇ ತಾವೂ ನಡೆಯಬೇಕೆಂದೂ ಅವರು ದೃಢವಾಗಿ ನಂಬುತ್ತಾರೆ. ಕಾಲಕಾಲಕ್ಕಾಗುವ ಹೊಸ ಬದಲಾವಣೆಗಳ ಸಂಪರ್ಕವಿಲ್ಲದ ಅನೇಕ ಜನರು ಈಹೊತ್ತಿಗೂ ಇಂತಹ ಮನೋವೃತ್ತಿಯುಳ್ಳವರಾಗಿರುತ್ತಾರೆ. ಆದುದರಿಂದಲೇ ಜಗತ್ತಿನ ಕೆಲವೊಂದು ಭಾಗಗಳಲ್ಲಿ ಜನರು ಇನ್ನೂ ಹಿಂದುಳಿದವರಾಗಿದ್ದಾರೆ.

ಇಂತಹ ಮಾತುಗಳನ್ನು ಅರಿತು ಆಸ್ತಿಕನಾದ 'ಲಿವ್ಹಿಂಗ್ಸ್ಟನ್ನ'ನೂ ಕೂಡ ವಿಚಿತ್ರ ನಿರ್ಧಾರಕ್ಕೆ ಬಂದಿದ್ದಾನೆ. 'ಮಾನವನು, ಸಂಸ್ಕೃತಿಯ ಕೆಳಮೆಟ್ಟಲಿನಲ್ಲ ತನ್ನಷ್ಟಕ್ಕೆ ತಾನೇ ಪ್ರಗತಿಯನ್ನು ಹೊಂದುವ ಸ್ಥಿತಿಯಲ್ಲಿರುವುದಿಲ್ಲ. ಪ್ರಗತಿಗೆ ಮಾನವನು ಕಾರಣನಾಗಿರದೆ ಯಾವುದೋ ಒಂದು ಅದ್ಭುತಶಕ್ತಿಯು—ದೈವೀಸ್ಫೂರ್ತಿಯು— ಕಾರಣವಾಗಿರುತ್ತದೆ' ಎಂದು ಸಾರಿದ್ದಾನೆ.

ಈ ವಿಚಾರದ ಮೇರೆಗೆ ಪ್ರಗತಿಯು ಮಾನವನಲ್ಲಿ ಅಂತರ್ಗತವಾಗಿರುತ್ತದೆಂದು ಹೇಳಲಿಕ್ಕಾಗದು. ನಿಜವಾಗಿಯೂ ಮಾನವನಲ್ಲಿ ಅಂತರ್ಗತವಾಗಿರುವ ಗುಣವಾವುದೆಂದರೆ ಅವನ ಅಪರಿಮಿತ ಮಾನಸಿಕ ಆಲಸ್ಯ. ಇದರ ಮೂಲಕ ಅವನು ಹೊಸತೆಂಬುದೆಲ್ಲವನ್ನೂ ವಿರೋಧಿಸುತ್ತಾನೆ. ಒತ್ತಾಯದಿಂದಾಗಲಿ ಸ್ವಸಂತೋಷದಿಂದಾಗಲಿ ಹೊಸ ವಾತಾವರಣವನ್ನು ಎದುರಿಸುವ ಪರಿಸ್ಥಿತಿಯನ್ನು ಅವನು ನಿರ್ಮಿಸಿಕೊಂಡಾಗಲೇ ಅವನ ಈ ಆಂತರಿಕ ಆಲಸ್ಯವು ಇಲ್ಲದಾಗಿ ಅವನು ಪ್ರಗತಿಯನ್ನು ಹೊಂದುವನು.

ಬಲವಂತನು ದುರ್ಬಲನನ್ನು ಹೊಡೆದೋಡಿಸುವುದರಿಂದಾಗಲಿ, ಜನಸಂಖ್ಯೆ ಅಪರಿಮಿತವಾಗಿ ಬೆಳೆಯುವುದರಿಂದಾಗಲಿ, ಮಾನವನಿಗೆ ದೇಶಾಂತರ ಹೋಗುವ ಪ್ರಸಂಗ ಆಗಾಗ ಬರುತ್ತಿತ್ತೆಂಬುದನ್ನು ಮಾನವವಂಶಶಾಸ್ತ್ರದಿಂದ ಅರಿತುಕೊಳ್ಳಬಹುದಾಗಿದೆ. ಹೀಗೆ ದೇಶಾಂತರ ಹೋದಾಗೆಲ್ಲ ಹೊಸ ವಾತಾವರಣವನ್ನು ಎದುರಿಸುವ ಪ್ರಸಂಗ ಮನುಷ್ಯನಿಗೆ ಬರುತ್ತಿತ್ತು. ಅಂತಹ ವಾತಾವರಣಕ್ಕನುಗುಣವಾದ ಎಷ್ಟೋ ಮಾರ್ಪಾಟುಗಳನ್ನು ಮಾನವನು ಮಾಡಿಕೊಳ್ಳಬೇಕಾಗುತ್ತಿತ್ತು.

ಈ ಮಾರ್ಪಾಟುಗಳ ಮೂಲಕವೇ ಮನುಷ್ಯನು, ಗಿಡದಿಂದ ನೆಲಕ್ಕಿಳಿದು ಬಂದನು. ಪಶುವರ್ಗದಿಂದ ಮನುಷ್ಯವರ್ಗಕ್ಕೆ ರೂಪಾಂತರ ಹೊಂದಿದನು. ಹೊಸ ವಾತಾವರಣಕ್ಕೆ ಮಾನವನು ಎಂತು ಹೊಂದಿಕೊಳ್ಳುವನೆಂಬುದನ್ನು ಕೆಳಗಿನ ಸಾಮಾನ್ಯ ದೃಷ್ಟಾಂತದಿಂದ ಸ್ಪಷ್ಟೀಕರಿಸಬಹುದು. ಒಂದು ಬೆಕ್ಕನ್ನು, ಅದಕ್ಕೆ ಅಪರಿಚಿತವಾದ ಒಂದು ಕೋಣೆಯಲ್ಲಿಡಲು ಪ್ರಯತ್ನಿಸಿದರೆ ಅದು ಮೊದಲು ಹಿಂಜರಿಯುತ್ತದೆ. ಆ ಮೇಲೆ ಸುರಕ್ಷಿತವಾದ ಒಂದು ಮೂಲೆಯಿಂದ ತನ್ನ ಹೊಸ ವಾತಾವರಣವನ್ನು ನಿರೀಕ್ಷಿಸುತ್ತದೆ. ಆ ಮೇಲೆ ಮುಂದೆ ಹೆಜ್ಜೆಗಳನ್ನಿಡುತ್ತ, ಸಂಶೋಧಕನ ಜ್ಞಾನ-ತೃಷೆಗಳಿಂದ ಎಲ್ಲವನ್ನು ಸವಿಸ್ತಾರವಾಗಿ ಪರೀಕ್ಷಿಸಹತ್ತುತ್ತದೆ• ವಸ್ತುಗಳನ್ನು ಮೂಸಿನಿ, ಕಾಲುಗಳಿಂದ ಮುಟ್ಟಿನೋಡುತ್ತದೆ. ಭಯಗೊಳಿಸುವದೇನೂ ಇಲ್ಲವೆಂಬ ಮನಗಾಣಿಕೆಯಾದ ಮೇಲೆ ಅತ್ತಿತ್ತ ನಿರ್ಭಯದಿಂದ ಓಡಾಡುತ್ತದೆ. ಕಡೆಗೆ ಒಂದು ಮೂಲೆಯಲ್ಲಿ ಶಾಂತವಾಗಿ ಕುಳಿತುಕೊಳ್ಳುತ್ತದೆ. ಇಲ್ಲಿಗೆ ಅದರ ಸಂಶೋಧನ ಕಾರ್ಯವು ಮುಗಿದಂತಾ

ಯಿತು. ಹೊಸ ವಾತಾವರಣವುಳ್ಳ ಹೊಸ ಸ್ಥಳಕ್ಕೆ ಮಾನವರ ಗುಂಪು ಬಂದೊಡನೆ ಅದು ಇದೇ ರೀತಿ ವರ್ತಿಸಬಹುದು. ಮೊದಮೊದಲು ಹೊಸ ವಸ್ತುಗಳು, ಅಪರಿಚಿತ ಗಿಡಗಂಟಿಗಳು, ಹೊಳೆವ ಕಲ್ಲುಗಳು, ವಿಚಿತ್ರ ಪ್ರಾಣಿಗಳು ಸೋಜಿಗವನ್ನುಂಟುಮಾಡುವವು. ಅವನ ದಿನಚರಿಯು ಜೀವನ ಕ್ರಮದಲ್ಲಿ ಎಷ್ಟೋ ಮಾರ್ಪಾಟುಗಳನ್ನು ಮಾಡುವವು. ಹೊಸತೆಂಬು ದೆಲ್ಲವೂ ಅಂಜಿಕೆ ಆಶೆಗಳನ್ನುಂಟುಮಾಡುವವು. ಹೊಸ ವಿಷಯಗಳನ್ನು ಯಾವ ರೀತಿಯಿಂದ ಉಪಯೋಗಿಸಿಕೊಳ್ಳಬೇಕೆಂಬ ವಿವೇಚನೆ ಉಂಟಾಗು ವುದು. ಹೊಸ ಸಮಸ್ಯೆಗಳು ತಲೆದೋರುವವು. ಎಲ್ಲವೂ ಕೂಲಂಕಷವಾಗಿ ಪರೀಕ್ಷಿಸಲ್ಪಡುವುದು. ಇದರಿಂದ ಬೇಟೆಯಾಡುವ ಹೊಸ ರೀತಿ ಹೊಸ ಆಯುಧಗಳ ಯೋಜನೆ ನಡೆಯುತ್ತದೆ. ಹೊಸ ಸಂಶೋಧನಗಳ ಮೂಲಕ ಪ್ರಗತಿಯಾಗುತ್ತದೆ. ವಿಚಾರತರಂಗಗಳುಂಟಾಗಿ ವಿರಾಮಬುದ್ಧಿಯು ವಿಕಾಸ ಗೊಳ್ಳುತ್ತದೆ. ಕೆಲವೊಂದು ಪೀಳಿಗೆಗಳ ನಂತರ ಆ ಗುಂಪಿಗೆ ಅಲ್ಲಿಯ ವಾತಾ ವರಣವು ಸಹಜವಾಗಿ ಕಂಡು ಪ್ರಗತಿಪರ ಜೀವನಕ್ಕೆ ತಡೆಯುಂಟಾಗುತ್ತದೆ. ಆ ಮೇಲೆ ಮಾನವನು ತನ್ನ ಪೂರ್ವದ ಉದಾಸೀನಭಾವವನ್ನು ತಾಳು ತ್ತಾನೆ ಸಾಂಪ್ರದಾಯಕ್ಕೆ ಮಹತ್ವ ಒಂದು ಮಾನಸಿಕ ಆಲಸ್ಯವು ಬೆಳೆಯು ತ್ತದೆ. ರೂಢಿಯು ಸುಧಾರಣೆಗೆ ಶತ್ರುವಾಗುತ್ತದೆ. ಹೊಸ ವಾತಾವರಣಕ್ಕೆ ಮಾನವನು ಹೊಂದಿಕೊಂಡೊಡನೆ, ಮುನ್ನಡೆ ಕುಂಠಿತವಾಗಿ ಜಡತೆ ಯುಂಟಾಗುತ್ತದೆ.

ನಾಗರಿಕತೆಯು ಬೆಳೆಯಬೇಕಾದರೆ ಎರಡು ಮಾರ್ಗಗಳು ತೆರೆದಿಡಲ್ಪ ಡಬೇಕು: ೧. ಅವ್ಯಾಹತವಾದ ಸ್ಥಾನಾಂತರ (Migration) ಮತ್ತು ವಾತಾವರಣದ ಒಡಲಾವಣೆ. ಈ ಮಾರ್ಗದಿಂದ ಹೊಸ ಅನುಭವಗಳನ್ನು ಮಾನವ ತಂಡಗಳು ಪಡೆಯಬಹುದಾದುದರಿಂದ ಅವು ಬೆಳೆವಣಿಗೆಯ ಮೇಲ್ಮೆಟ್ಟಲುಗಳನ್ನು ಕ್ರಮೇಣ ಹತ್ತಬಹುದು. ಇದಕ್ಕಿಂತಲೂ ಕಿರಿದಾದ ಮತ್ತು ಉತ್ತಮವಾದ ಮಾರ್ಗವೆಂದರೆ (೨) ಗುಂಪುಗಳ ಸಂಮಿಶ್ರಣದಿಂ ದುಂಟಾಗುವ ವಾತಾವರಣದ ಮಾರ್ಪಾಟು ಮತ್ತು ಪರಸ್ಪರ ಗುಂಪುಗಳ ಪ್ರಭಾವ. ಇದುವೆ ಪ್ರಗತಿ ತತ್ವದ ಬೀಜ. ಸಂಮಿಶ್ರಣದಿಂದಲೇ ಗುಂಪು ಗಳು ತಂಡವಾಗಿಯೂ, ಭಿನ್ನ ತಂಡಗಳು ರಾಷ್ಟ್ರವಾಗಿಯೂ, ಅನೇಕ

ರಾಷ್ಟ್ರಗಳು ಸಂಯುಕ್ತ ಸಂಸ್ಥೆಗಳಾಗಿಯೂ ಪರಿಣಮಿಸಬಹುದು. ಇಂತಹ ಸಂಮಿಶ್ರಣದಿಂದ ಅನೇಕ ಗುಂಪುಗಳು ತಮ್ಮತಮ್ಮ ಪರಿಸ್ಥಿತಿಗನು ಗುಣವಾಗಿ ವೈಯಕ್ತಿಕವಾಗಿ ದೊರಕಿಸಿದ ಅನುಭವಗಳನ್ನು ಕೇಂದ್ರೀಕರಿಸಿ ಒಕ್ಕಟ್ಟಿನಿಂದ ನಾಗರಿಕತೆಯು ಹೆಚ್ಚಿನ ಮಟ್ಟನ್ನು ಮುಟ್ಟಬಹುದು. ಯುದ್ಧದಲ್ಲಿ ವಿಜಯಿಗಳಾಗಿ ಹೊಸ ಭೂಭಾಗವನ್ನು ಕೈವಶಪಡಿಸಿಕೊಂಡಾಗ, ವ್ಯಾಪಾರ ವಿಹಾರಗಳಿಗಾಗಿ ಬೇರೆ ಬೇರೆ ತಂಡಗಳೊಡನೆ ಸಂಪರ್ಕ ಉಂಟಾದಾಗ ಇಂತಹ ಸಂಮಿಶ್ರಣವು ಸುಲಭಸಾಧ್ಯವಾಗುತ್ತಿತ್ತು.

ಪ್ರತಿಯೊಂದು ಗುಂಪೂ, ಹೊರಗಿನ ಬೇರೊಂದು ಗುಂಪಿನೊಡನೆ ಸಂಬಂಧ ಬೆಳೆಸಿದಾಗಲೇ, ತನ್ನ ಇರುವಿಕೆಯನ್ನು ಬದಲಿಸಿಕೊಳ್ಳುತ್ತಿತ್ತು. ಇಲ್ಲವಾದರೆ ತನ್ನ ನಿರ್ದಿಷ್ಟ ಸ್ಥಿತಿಯಲ್ಲಿಯೇ ಇರುತ್ತಿತ್ತು. ಪ್ರತಿಯೊಂದು ರೂಪಾಂತರಕ್ಕೂ ಪರರೊಡನೆ ಉಂಟಾದ ಸಂಬಂಧವೇ ಕಾರಣವಾಗಿರುತ್ತಿತ್ತೆಂಬುದು ಅನುಭವದಿಂದ ಕಂಡುಬಂದ ಮಾತಾಗಿದೆ. ನಾವು ಪ್ರಗತಿಯ ಇತಿಹಾಸವನ್ನು ಹೆಚ್ಚೆಚ್ಚು ಪರಿಶೀಲಿಸಿದಂತೆ, ಸಂಸ್ಕೃತಿಯ ಮುನ್ನಡೆಗೆ ಇದೇ ತತ್ವವು ತಳಹದಿಯಾಗಿರುತ್ತದೆಂದು ಹೊಳೆಯುವುದು.

**ಗುಂಪಿನ ಅವಸ್ಥೆಗಳು:** ತೀರ ಮೊದಲು ಗುಂಪುಗಳ ಸಂಬಂಧವು ಯುದ್ಧಗಳ ಮುಖಾಂತರವಾಗಿಯೇ ಆಗುತ್ತಿತ್ತು. ಬುನಾದಿಕಾಲದ ಬೇರೆ ಬೇರೆ ತಂಡಗಳು ಹಗೆತನದಿಂದಿರುತ್ತಿದ್ದವು. ಪಶುಗಳಂತೆ ಇವರಲ್ಲಿಯೂ ಜೀವನಕ್ಕೆ ಅವಶ್ಯವಾದ ಭೂಮಿಯ ಆಕ್ರಮಣವೇ ಯುದ್ಧಕ್ಕೆ ಕಾರಣವಾಗಿರುತ್ತಿತ್ತು. ಇಂತಹ ಹೋರಾಟಗಳ ಪರಿಣಾಮವೇನಾಗುತ್ತಿತ್ತೆಂದರೆ ಬಲಿಷ್ಠರು ಎಂದರೆ ಸುಸಂಘಟಿತರು ದುರ್ಬಲರನ್ನು ಪೀಡಿಸಿ ನಾಶಗೊಳಿಸುತ್ತಿದ್ದರು. ಆದುದರಿಂದ ಒಳಿತಾಗಿ ಸಂಘಟಿತವಾದ ತಂಡಗಳೇ ಜಯಶಾಲಿಗಳಾಗುತ್ತಿದ್ದವು.

ಸಂಘಟನೆಯು ಇನ್ನೂ ಮುಂದೆ ಬೆಳೆದಂತೆ ತಂಡಗಳಲ್ಲಿ ಎರಡನೆಯ ವಿಧವಾದ ಸಂಬಂಧವುಂಟಾಗಹತ್ತಿತು. ಅದಕ್ಕೆ ತಂಡಗಳ ಸಂಮಿಶ್ರಣ ಅಥವಾ ಸಂಕರಣವೆಂದು ಹೇಳಬಹುದು. ಒಂದು ತಂಡದವರು ಮತ್ತೊಂದು ತಂಡದ ಸ್ತ್ರೀಯರೊಡನೆ ಬಲಾತ್ಕಾರದಿಂದ ಹಟಸಂಭೋಗವನ್ನು ಮಾಡುವುದರಿಂದ ಇಂತಹ ಸಂಕರಣವುಂಟಾಗುತ್ತಿತ್ತು. ಯುದ್ಧದಲ್ಲಿ ಸೆರೆಯಾಳಾದ

ಸ್ತ್ರೀಯರು ತಮ್ಮ ತಂಡಕ್ಕೂ ಜಯಶಾಲಿಯಾದ ಬೇರೊಂದು ತಂಡಕ್ಕೂ ಸಂಬಂಧವನ್ನುಂಟುಮಾಡಿಕೊಡುತ್ತಿದ್ದರು. ತಮ್ಮ ತಂಡವು ಕೆಲವೊಂದು ವಿಷಯಗಳಲ್ಲಿ ಪಡೆದ ಪ್ರಾವೀಣ್ಯದ ಲಾಭವನ್ನು ಹೊಸ ತಂಡಕ್ಕೆ ಮಾಡಿಕೊಡುತ್ತಿದ್ದರು. ಹಟಸಂಭೋಗದಿಂದ ಪ್ರಾಚೀನದ ಮದುವೆಗೆ ಮೊದಲಾಗಿ, ಕುಟುಂಬ, ಶ್ರಮವಿಭಾಗ ಮುಂತಾದವು ಬಳಕೆಯಲ್ಲಿ ಬಂದವು. ಇಂತಹ ಸಂಬಂಧದ ಮೂಲಕವೇ ಮಾನವನು ತನ್ನ ಕೀಳು ಸ್ಥಿತಿಯನ್ನು ತೊರೆದು, ಸ್ವಯಂಪರಿಪೂರ್ಣವಾದ, ಸುಸಂಘಟಿತ ದುಡಿಮೆಯುಳ್ಳ, ಸ್ತ್ರೀ ಪುರುಷರ ಶ್ರಮವಿಭಾಗದಿಂದ ಸಂಧಾರಿಸಿದ ಸಾಂಪತ್ತಿಕ ಸ್ಥಿತಿಯುಳ್ಳ, ಗುಂಪುಗಳನ್ನು ಕಟ್ಟಿಕೊಂಡಿರಹತ್ತಿದನು.

ಆ ಬಳಿಕ ಕೇವಲ ಯುದ್ಧದ ಮುಖಾಂತರವಾಗಿ ತಂಡತಂಡಗಳಲ್ಲಿ ಉಂಟಾಗುವ ಸಂಪರ್ಕವು ವ್ಯಾಪಾರದ ಮೂಲಕ ಆಗತೊಡಗಿತು. ಸ್ತ್ರೀಯರನ್ನೂ ಒಡವೆಗಳನ್ನೂ ಸೆಳೆದೊಯ್ಯುವ ಬದಲು ಅವುಗಳ ವಿನಿಮಯಕ್ಕೆ ಪ್ರಾರಂಭವಾಯಿತು. ಇದರಿಂದ ಅನೇಕ ನೆರೆಹೊರೆಯ ತಂಡಗಳು ಏಕೀಕೃತವಾಗಿ ವಿಶಾಲವಾದ ಸಮಾಜ ಸಂಘಗಳು ರೂಪುಗೊಂಡವು. ಗುಂಪುಗಳ ಸಂಬಂಧದಲ್ಲಿ ಇದು ಎರಡನೆಯ ಮೆಟ್ಟಲು.

ಮೊದಮೊದಲು ಗುಂಪುಗಳ ಬೆರಕೆ ಸ್ಥಿರವಾಗಿರುತ್ತಿರಲಿಲ್ಲ. ಆದರೆ ಒಕ್ಕಲುತನಕ್ಕೆ ಸುರುವಾದಾಗಿನಿಂದ ಗುಂಪುಗಳ ಆಂತರಿಕ ಸಂಬಂಧ ಬೆಳೆದು ಒಂದು ತಂಡವು ಮತ್ತೊಂದು ತಂಡವನ್ನು ಸ್ಥಿರವಾಗಿ ತನ್ನ ಅಂಕಿತದಲ್ಲಿರಿಸಿಕೊಳ್ಳಲು ಪ್ರಯತ್ನಿಸಹತ್ತಿತು. ಉದ್ಯೋಗಗಳನ್ನು ಬೆಳೆಸಬೇಕೆಂಬ ಹಂಬಲದಿಂದ ದುಡಿತದಲ್ಲಿ ಸ್ತ್ರೀಯರಿಗಿಂತ ಮೇಲಾದ ಪುರುಷರನ್ನು ಗುಲಾಮರನ್ನಾಗಿ ಮಾಡಿಕೊಂಡು ಕೆಲಸ ಸಾಗಿಸುವ ರೂಢಿಯುಂಟಾಯಿತು. ಇಂತು ಔದ್ಯೋಗಿಕ ಬೆಳವಣಿಗೆಯ ಮೂಲಕ ಗುಂಪುಗಳ ಸಂಬಂಧ ಬೆಳೆಯುವದರಲ್ಲಿ ಇದು ಮೂರನೆಯ ಮೆಟ್ಟಲು. ಇದುವೆ ನಾಗರಿಕತೆಯ ಮೂಲ. ಮುಂದೆ ಅನೇಕ ಗುಂಪುಗಳು ಕೂಡಿಕೊಂಡು ಬಹು ದೊಡ್ಡ ಸಂಘಟನೆಯನ್ನು ಮಾಡಿಕೊಂಡು ಒಬ್ಬ ಮುಂದಾಳುವಿನ ನೇತೃತ್ವದಲ್ಲಿ ಕೆಲಸ ಮಾಡಹತ್ತಿದವು. ಇದರಿಂದಲೇ ಔದ್ಯೋಗಿಕ ಬೆಳವಣಿಗೆಯಾಗಿ ಜನಪದಗಳು, ರಾಜ್ಯಗಳು, ರಾಷ್ಟ್ರಗಳು ಉಂಟಾದವು. ರಾಷ್ಟ್ರರಾಷ್ಟ್ರಗಳೊಡನೆ ಸಂಬಂಧ

ಬೆಳೆದು ವ್ಯಾಪಾರೋದ್ಯೋಗಗಳು ಭರದಿಂದ ಸಾಗಿದಾಗ ಬಂಡವಲು ಗಾರಿಕೆ ಅಸ್ತಿತ್ವದಲ್ಲಿ ಬಂದಿತು. ಪದಾರ್ಥವಿಜ್ಞಾನದ ಬೆಳವಣಿಗೆಯಾಗಿ ಕಡಿಮೆ ಪರಿಶ್ರಮದಿಂದ ಹುಟ್ಟುವಳಿಯನ್ನು ಹೆಚ್ಚಿಸುವ ಯಂತ್ರಗಳ ಸಂಶೋಧನ ಸುರುವಾಯಿತು. ಇದರಿಂದ ಬಂಡವಲುಗಾರಿಕೆ ಇನ್ನೂ ಬೆಳೆದು ಸುಸಂಘಟಿತವಾಯಿತು. ಭೌಗೋಲಿಕ ಜ್ಞಾನ ಬೆಳೆದು, ವಿಸ್ತೃತವಾದ ಜಗತ್ತು ಮಾನವನ ಕಾರ್ಯಕ್ಷೇತ್ರವಾಯಿತು. ಜಗತ್ತಿನ ವಿವಿಧಭಾಗಗಳಲ್ಲಿಯ ಜನರಲ್ಲಿ ಪರಸ್ಪರರೊಡನೆ ಸಂಬಂಧ ಬೆಳೆಯಲಾರಂಭಿಸಿತು. ದೇಶದೇಶಗಳು ಪರಸ್ಪರವಾಗಿ ಸಹಾಯಕಾರಿಯಾಗಿ, ನಾಗರಿಕತೆ ಹಿಂದೆ ಎಂದೂ ಇಲ್ಲದ ಘನತೆಗೇರಿತು. ಈಹೊತ್ತು ಒಳ್ಳೇ ಸುಧಾರಿಸಿದ ಬಲಿಷ್ಠ ರಾಷ್ಟ್ರಗಳೆಂದು ಜಂಭಕೊಚ್ಚಿಕೊಳ್ಳುತ್ತಿರುವ ಯುರೋಪದ ರಾಷ್ಟ್ರಗಳು ಕೂಡ, ಕೇವಲ ತಮ್ಮ ಶಕ್ತಿಯಿಂದಲೇ ತಾವು ಬೆಳೆದು ನಿಂತಿವೆ ಎಂದು ಭಾವಿಸದೆ, ತಮ್ಮ ನಾಗರಿಕತೆ, ತಮ್ಮ ವ್ಯಾಪಾರೋದ್ಯೋಗಗಳ ಪ್ರಗತಿ, ತಮ್ಮ ಸಂಪತ್ತು, ಇವೆಲ್ಲವೂ ಅನೇಕ ಮಾನವ ಗುಂಪುಗಳ ಸಂಪರ್ಕ ಸಂಕಲನದಿಂದ ಉಂಟಾಗಿವೆ ಎಂಬುದನ್ನು ಚನ್ನಾಗಿ ಲಕ್ಷ್ಯದಲ್ಲಿಟ್ಟುಕೊಳ್ಳಬೇಕು.

ಸಾಂಪತ್ತಿಕ ಸುಧಾರಣೆಯಲ್ಲಿ ಮಾನವನು ಮುಂದಿಟ್ಟ ಪ್ರತಿಯೊಂದು ಹೆಜ್ಜೆಗೂ, ಹೊರಗಣ ಯಾವುದಾದರೊಂದು ಹೊಸ ಪ್ರಭಾವವೇ ಕಾರಣವಾದಂತೆ ಕಂಡುಬರುತ್ತದೆ. ಇಂತಹ ಹೊಸ ಪ್ರಭಾವವು, ಬೇರೆಬೇರೆ ಗುಂಪುಗಳ ನಡುವಿನ ಯುದ್ಧದಮೂಲಕವೋ, ಹಟಸಂಭೋಗದ ತೃಷೆಯಿಂದಲೋ, ವ್ಯಾಪಾರ ವಿನಿಮಯದ ನಿಮಿತ್ತವಾಗಿಯೋ, ಒಂದು ಗುಂಪಿನವರು ಬೇರೊಂದು ಗುಂಪಿನವರನ್ನು ಗುಲಾಮರನ್ನಾಗಿ ಮಾಡಿಕೊಳ್ಳುವ ರೂಢಿಯಿಂದಲೋ—ಇಂತಹ ಯಾವುದೋ ಒಂದು ಕಾರಣದಿಂದ ಉಂಟಾಗುತ್ತಿತ್ತೆಂಬುದರ ಬಗ್ಗೆ ಸಂದೇಹವಿಲ್ಲ. ಆದುದರಿಂದ ನಾವು ಹಿಂದೆ ಹೇಳಿದ ಮಾತನ್ನೇ ಪುನರುಚ್ಚರಿಸಬೇಕಾಗಿದೆ. ಮಾನವನ ಈಹೊತ್ತಿನ ಅಪಾರವಾದ ಪ್ರಗತಿ ಕೇವಲ ಮಾನವನ ವೈಯಕ್ತಿಕ ಶಕ್ತಿ ಪ್ರಯತ್ನಗಳ ಪ್ರತಿಫಲವಾಗಿಲ್ಲ. ಗುಂಪು ಕಟ್ಟಿಕೊಂಡಿರುವ ಅವನ ಹುಟ್ಟುಗುಣವೇ ಅದಕ್ಕೆ ಕಾರಣವಾಗಿದೆ. ಕೇವಲ ಪಶುಗಳಂತೆ ಗುಂಪುಗಳನ್ನು ಕಟ್ಟಿಕೊಳ್ಳದೇ, ಹೆಚ್ಚು ಸುಸಂಘಟಿತವಾಗಿ ಪರಸ್ಪರರು ಪರಸ್ಪರರಿಗೆ ಹೆಚ್ಚು ಉಪಯುಕ್ತ

ರಾಗುವಂತೆ ಮೇಲ್ತರಗತಿಯ ಗುಂಪುಗಳನ್ನು—ಸಮಾಜಗಳನ್ನು ಕಟ್ಟಿ ಕೊಳ್ಳುವ ವಿಚಿತ್ರ ಶಕ್ತಿ ಅವನಲ್ಲಿದ್ದುದೇ ಅವನು ಈಹೊತ್ತು ಪ್ರಗತಿಯ ಅತ್ಯುನ್ನತ ಶಿಖರವನ್ನೇರಲು ಕಾರಣವಾಗಿದೆ. ಪ್ರಗತಿಯ ವಿಷಯದಲ್ಲಿ ಮಾನವನ ನಿರ್ಮಾಣಶಕ್ತಿಯೂ ಬಹು ಮಹತ್ವವುಳ್ಳದ್ದು. ಸಂಘಶಕ್ತಿಯಿಂದಲೇ ತನ್ನ ನಿರ್ಮಾಣಶಕ್ತಿಯನ್ನು ಬೆಳೆಸಿಕೊಂಡು ಮೇಲ್ತರಗತಿಯ ಸುಸಂಘಟಿತ ಮಾನವ ಸಂಘಗಳನ್ನು ನಿರ್ಮಿಸಿಕೊಂಡು ಮಾನವನು ಈ-ಹೊತ್ತು ಸುಧಾರಣೆಯ ಅತ್ಯುಚ್ಚ ಮಟ್ಟಕ್ಕೇರಿ ವಿಶ್ವವ್ಯಾಪಾರವನ್ನು ನಿಯಂತ್ರಿಸುತ್ತ ಪ್ರಾಣಿಕೋಟಿಗಳಲ್ಲಿ ಅತ್ಯುನ್ನತವಾದ ಅತಿ ದೃಢವಾದ ಸ್ಥಾನವನ್ನು ಪಡೆದು ವಿರಾಜಿಸುತ್ತಿದ್ದಾನೆ.

ಆದುದರಿಂದ ಪ್ರಗತಿಯ ತಳಹದಿಯ ತತ್ವವನ್ನು ಈ ರೀತಿಯಿಂದ ಊಹಿಸಬಹುದು. ಪ್ರಗತಿಯ ಮೂಲಭೂತ ಕಾರಣಗಳು ಮಾನವನ ಶಾರೀರಕ ಮಾನಸಿಕ ಗುಣಗಳನ್ನವಲಂಬಿಸಿರುತ್ತವೆ. ಅವನ ಸಾಮಾಜಿಕಪ್ರವೃತ್ತಿ, ಮಾತು, ಬುದ್ಧಿಮತ್ತೆ, ವಿಹಾರ-ವಿನೋದಪ್ರವೃತ್ತಿ ಇವೆಲ್ಲವೂ ಅದಕ್ಕೆ ಕಾರಣಗಳು. ಆದರೆ ಪ್ರಗತಿಯ ಮುನ್ನಡೆಯ ಶಕ್ತಿ ಕೇವಲ ವ್ಯಕ್ತಿಗಳಿಗೆ ಅಥವಾ ಬೇರೆ ಬೇರೆಯಾಗಿದ್ದ ಗುಂಪುಗಳಿಗೆ ಸಂಬಂಧಿಸಿರದೆ, ಗುಂಪುಗಳ ಸಂಪರ್ಕ ಸಂಕಲನಗಳಿಗೆ ನಿಜವಾಗಿಯೂ ಸಂಬಂಧಿಸಿರುತ್ತದೆ. ಗುಂಪುಗಳ ವಿರಾಟ ಹೋರಾಟಗಳ ನಿಮಿತ್ತ ಯೋಗ್ಯಮಾರ್ಗವನ್ನು ನಿರ್ಧರಿಸಿಕೊಳ್ಳುವ ತತ್ವವನ್ನೊಳಗೊಂಡುದರಿಂದಲೇ ಪ್ರಗತಿಯು ವಿಶ್ವವ್ಯಾಪಿಯಾಗಿರುತ್ತದೆ.

—

**ಹನ್ನೆರಡನೆಯ ಮೆಟ್ಟಲು**

## ಸಂಸ್ಕೃತಿಯ ಮೆಟ್ಟಲುಗಳು



ಇರುವೆಗಳ ಹುತ್ತಿನ ಬಳಿ ಹೋಗಿ ನೋಡಿದರೆ—ಬಳಿಯಲ್ಲಿ ಬಂದು ನಿಂತ ಮನುಷ್ಯಪ್ರಾಣಿಯಂತಹ ದೊಡ್ಡ ಪ್ರಾಣಿಯನ್ನು ಕೂಡ ಲೆಕ್ಕಿಸದೆ

ತಮ್ಮ ಕೆಲಸದಲ್ಲಿಯೇ ನಿರತವಾಗಿ ಎಡೆಬಿಡದೆ ದುಡಿಯುತ್ತಿರುವ ಇರುವೆ ಗಳನ್ನು ಕಂಡು ಮಾನವನು ಬೆರಗಾಗುತ್ತಾನೆ. ಅದೇ ಬಗೆಯಿಂದ ಯಾವು ದನ್ನೂ ಲೆಕ್ಕಿಸದೆ ಮಾನವನು ತನ್ನ ಪ್ರಗತಿಯ ಮಾರ್ಗಕ್ರಮಣವನ್ನು ಸಾಗಿಸಿ ದ್ದಾನೆ. ಒಬ್ಬರೊಬ್ಬರಿಗೆ ಸಂಬಂಧವಿಲ್ಲದ ಪ್ರತ್ಯೇಕವಾದ ಗುಂಪುಗಳ ರೀತಿ ಯಲ್ಲಿಯೇ ಮಾನವನು ತನ್ನ ಜೀವನಕ್ರಮವನ್ನು ಸಾಗಿಸಿಕೊಂಡು ಬಂದಿದ್ದರೆ, ಪೃಥ್ವಿಯು ಸೂರ್ಯನ ಸುತ್ತಲೂ ಬಹು ವೇಗದಿಂದ ತಿರುಗುತ್ತದೆಂಬ ತತ್ವದ ಸಂಶೋಧನೆ ಎಂದೂ ಆಗುತ್ತಿರಲಿಲ್ಲ. ಹಾಗೆಯೇ ವಿಜ್ಞಾನಶಾಸ್ತ್ರ ಗಳ ಬೆಳಕಿನಲ್ಲಿ ಅವನು ಕಂಡುಹಿಡಿದ ಅನೇಕ ವಿಷಯಗಳ ಅರಿವು ಅವನಿಗಾ ಗುತ್ತಿರಲಿಲ್ಲ. 'ವಾದೇ ವಾದೇ ಜಾಯತೆ ತತ್ವಬೋಧಃ' ಎಂಬಂತೆ ಅನೇಕ ಮಾನವರು ಒಂದೆಡೆ ಸೇರಿ ಪರಸ್ಪರರ ಸಹವಾಸದಿಂದಲೂ, ಪರಸ್ಪ ರರ ವಿಚಾರಗಳ ತಾಕಲಾಟದಿಂದಲೂ, ಸತ್ಯಾನ್ವೇಷಣ ಬುದ್ಧಿಯಿಂದಲೂ ಸತ್ಯದ ರೂಪರೇಷೆಗಳನ್ನು ಗುರುತಿಸಿದರು. ಬುದ್ಧಿ ಬೆಳೆಯದ ಯಾವುದಾದ ದರೊಂದು ಮಾನವರ ಗುಂಪು, ಅನಂತ ಶಕ್ತಿಯುಳ್ಳ ಸತ್ಯದ ತತ್ವವನ್ನರಿತು- ಕೊಳ್ಳುವುದು ದುಸ್ತರ. ಅನೇಕರು ಕೂಡಿ ತಮ್ಮ ಅನುಭವಗಳನ್ನು ಪರಿ ಶೀಲಿಸಿ ಜ್ಞಾನಭಂಡಾರವನ್ನು ಬೆಳೆಸಿಕೊಂಡಾಗಲೇ ಅವರ ಮುನ್ನಡೆ.

ಇವತ್ತಿಗೂ ಮಾನವನ ಅಜ್ಞಾನವು ಅಪಾರವಾಗಿದೆ. ಇರುವೆಗಳಿಗೆ ತಮ್ಮದೊಂದನ್ನುಳಿದು ಬೇರೆ ಯಾವ ಸಂಘಟನೆಯ ಜ್ಞಾನವೂ, ಅದರ ಕಾರ್ಯಕ್ಷೇತ್ರದ ಅರಿವೂ ಇರದಿರುವಂತೆ, ಮಾನವನಿಗೂ ಈ ಜಗತ್ತಿನಲ್ಲಿ ನಡೆದ ಅನೇಕ ಮಹತ್ವದ ವಿಷಯಗಳ ಜ್ಞಾನವಿರುವದಿಲ್ಲ. ತಾನು ಭಾಗಿ ಯಾಗಿದ್ದ ತನ್ನ ಬೆಳವಣಿಗೆಯ ವಿಷಯವೇ ಅವನಿಗೆ ಸಂಪೂರ್ಣವಾಗಿ ಗೊತ್ತಿರುವುದಿಲ್ಲ. ಸಂಸ್ಕೃತಿಯ ಪ್ರವಾಹವು ಅವ್ಯಾಹತವಾಗಿ ಹರಿ ಯುತ್ತ ಬಂದಿದೆ, ತನ್ನನ್ನು ಇಷ್ಟೊಂದು ಮುಂದಕ್ಕೆ ದೂಡಿಕೊಂಡು ಬಂದಿದೆ ಎಂಬ ಮಾತನ್ನರಿತುಕೊಳ್ಳಲು ಮಾನವನಿಗೆ ಸಾವಿರಾರು ವರುಷ ಗಳು ಬೇಕಾದವು. ಸಂಸ್ಕೃತಿಯು ಇನ್ನೂ ಮುಂದಕ್ಕೆ ಹರಿದುಹೋಗಿ, ಮಾನವನಿಗೆ ಇನ್ನೂ ಹೊಸ ವಿಷಯಗಳ, ತತ್ವಗಳ, ದರ್ಶನವನ್ನಿತ್ತು ಅವನ ಘನತೆಯನ್ನು ಬೆಳೆಸುವ ಶಕ್ತಿಯನ್ನೊಳಗೊಂಡಿದೆ. ಸಂಸ್ಕೃತಿಯ ವಿಷಯ

ವನ್ನು ನಾವು ಸರಿಯಾಗಿ ಅರಿತುಕೊಳ್ಳಬೇಕೆಂಬ ಹೊಳವು ಇನ್ನೂ ಅನೇಕ ಸುಶಿಕ್ಷಿತರಿಗೂ ಹೊಳೆದಿಲ್ಲ.

ಜಗತ್ತಿನ ಎಲ್ಲ ವ್ಯಾಪಾರಗಳನ್ನು ಯಾವುದೋ ಅಜ್ಞಾತ ಶಕ್ತಿ ನಿಯಂತ್ರಿಸುತ್ತದೆಂದೂ, ಮಾನವನು ಕೇವಲ ಅದರ ಕೈಗೊಂಬೆ ಎಂದೂ, ಆ ಶಕ್ತಿಯ ಇಚ್ಛಾನುಸಾರ ದೊಡ್ಡ ದೊಡ್ಡ ಸಾಮ್ರಾಜ್ಯಗಳು ಉದಯವಾಗಿ—ನಿಯಮಿತವಾದ ಕಾಲದವರೆಗೆ ಬೆಳೆದು ಬಾಳಿ ಲಯವಾಗಲೇಬೇಕೆಂದೂ ಹಲವರು ತಿಳಿಯುತ್ತಾರೆ. 'ಚಕ್ರವತ್ ಪರಿವರ್ತಂತೆ ದುಃಖಾನಿಚ ಸುಖಾನಿಚ' ಎಂಬಂತೆ ಮಾನವನ ಪರಿಳಿತಗಳು. ಅವು ಆ ಶಕ್ತಿಯಿಂದ ನಿಯಂತ್ರಿಸಲ್ಪಟ್ಟಿವೆ ಎಂದು ಅವರ ಅಭಿಪ್ರಾಯ. ಹುಟ್ಟುವುದು, ಬೆಳೆಯುವದು, ಸಾಯುವದು ಇದುವೆ ಜೀವಿಗಳ ಸಾಮಾನ್ಯ ರೀತಿ ಎಂದು ಅವರು ಭಾವಿಸುವರು.

ವಿಚಾರಗಳ ಗೊಂದಲದಿಂದಲೇ ಇಂತಹ ವಿಚಾರ ಸರಣಿಯುಂಟಾಗುತ್ತದೆ. ಸಂಸ್ಕೃತಿಯ ಬೆಳೆವಣಿಗೆ, ರಾಷ್ಟ್ರಗಳ ಬೆಳೆವಣಿಗೆ, ಇವುಗಳಲ್ಲಿ ವ್ಯತ್ಯಾಸವಿರುತ್ತದೆ. ರಾಷ್ಟ್ರಗಳು ಬೆಳೆಯಬಹುದು; ಅಳಿಯಬಹುದು. ಆದರೆ ಸಂಸ್ಕೃತಿ ಒಂದೇಸವನೆ ಬೆಳೆಯುವಂತಹದು. ವಿವೇಕದಿಂದ ವಿಚಾರಿಸಿದರೆ ಎಷ್ಟೋ ಸಂದರ್ಭಗಳಲ್ಲಿ ರಾಷ್ಟ್ರಗಳ ಅಳಿವು ಸಂಸ್ಕೃತಿಯ ಬೆಳಿಗೆಗೆ ಕಾರಣವಾಗಿದೆ ಎಂದು ಕಂಡುಬರುತ್ತದೆ. ಸಂಸ್ಕೃತಿ ಬೆಳೆಯಬೇಕಾದರೆ ತನ್ನ ಮುನ್ನಡೆಯನ್ನು ಕುಂಠಿಸುವ ಎಲ್ಲ ರಾಷ್ಟ್ರಗಳನ್ನು ಸದೆಬಡಿದು ಅದು ಮುಂದಕ್ಕೆ ಸಾಗಬೇಕಾಗುತ್ತದೆ. ಈಗ ಅಳಿದುಹೋದ ಪ್ರಾಚೀನ ರಾಷ್ಟ್ರಗಳ ನಾಗರಿಕತೆ ಅಚ್ಚಳಿಯದೆ ಉಳಿದಿರುತ್ತದೆ. ಬಿದ್ದು ಹೋದ ರಾಷ್ಟ್ರಗಳ ಜನರು ಅತ್ಯಾಚಾರದಿಂದ ನಾಶಗೊಳಿಸಲ್ಪಡುತ್ತಿದ್ದರು. ಇಲ್ಲವೆ ಗೆದ್ದ ರಾಷ್ಟ್ರಗಳ ಸಂಸ್ಕೃತಿಯ ಅತ್ಯುನ್ನತಿಯ ಲಾಭಪಡೆದು ಜೀವಿಸುತ್ತಿದ್ದರು. ಮಾನವನ ಪ್ರಗತಿಯ ಮುನ್ನಡೆಗೆ ಎಂದೂ ತಡೆಯುಂಟಾಗಿಲ್ಲ. ಗೆದ್ದ ರಾಷ್ಟ್ರಗಳು ಬಿದ್ದ ರಾಷ್ಟ್ರಗಳ ಸಂಸ್ಕೃತಿಯ ಲಾಭಪಡೆದು ತಮ್ಮ ಹೆಚ್ಚಿನ ಶಕ್ತಿಯಿಂದ ಸಂಸ್ಕೃತಿಯ ಮೇಲ್ಮೆಟ್ಟಲುಗಳನ್ನೇರಲು ಪ್ರಯತ್ನಿಸುತ್ತಿರುವವು. ಮಾನವನ ಜೀವನಕ್ರಮವು ಕ್ರಮೇಣ ಪ್ರಗತಿಯನ್ನು ಹೊಂದುತ್ತ

ಬಂದಿದೆಂಬುದು ಸರ್ವಸಮ್ಮತವು. ಈ ತತ್ವದ ಸಂಶೋಧನವೇ ಸಮಾಜ ಶಾಸ್ತ್ರದ ಮಹತ್ವದ ಗುರಿಯಾಗಿದೆ.

ಜಗತ್ತಿನ ವಿವಿಧ ಭಾಗಗಳಲ್ಲಿ ಒಂದೊಂದು ಕಾಲದಲ್ಲಿ ಆದ ಸಂಸ್ಕೃತಿಯ ಬೆಳವಣಿಗೆಯನ್ನು ನಾವು ಪರಿಶೀಲಿಸಿದರೆ, ಆ ಬೆಳವಣಿಗೆಯು ಎಲ್ಲ ಕಡೆಯಲ್ಲಿಯೂ ಒಂದೇ ಬಗೆಯದಾಗಿರುತ್ತದೆ. ಸ್ಥಾನಿಕ ಸ್ಥಿತಿಗತಿಗಳಿಗನು ಗುಣವಾಗಿ ಕೆಲವೊಂದು ವ್ಯತ್ಯಾಸಗಳು ಕಂಡುಬಂದರೂ ಈ ಬೆಳವಣಿಗೆಯಲ್ಲಿ ಎಲ್ಲ ರಾಷ್ಟ್ರಗಳಿಗೂ ಸಾಮಾನ್ಯವಾದ ಕೆಲವೊಂದು ಗುಣಧರ್ಮಗಳನ್ನು ಕಾಣಬಹುದು. ಜಗತ್ತಿನ ಎಲ್ಲ ಭಾಗಗಳಲ್ಲಿಯೂ ಸಂಸ್ಕೃತಿ ಅಲ್ಪ ಪ್ರಮಾಣದಿಂದ ಬೆಳೆದು ದೊಡ್ಡ ಪ್ರಮಾಣವನ್ನು ತಾಳಿದೆ; ಸ್ವಾಭಾವಿಕ ಸ್ವರೂಪದಿಂದ ಕೃತ್ರಿಮ ರೂಪವನ್ನು ಧರಿಸಿದೆ; ಮೊದಲು ಸರಳ ರೀತಿಯಲ್ಲಿದ್ದು ಈಗ ತೊಡಕಿನದಾಗಿದೆ; ಏಕಜಾತೀಯತೆಯನ್ನು ಬಿಟ್ಟು ವೈವಿಧ್ಯವನ್ನು ತಾಳಿದೆ; ಕೀಳು ಸ್ಥಿತಿಯಿಂದ ಉಚ್ಚ ಸ್ಥಿತಿಗೇರಿದೆ.

ಪ್ರಗತಿಯು ಹೆಜ್ಜೆಯ ಮೇಲೆ ಹೆಜ್ಜೆಯನ್ನಿಕ್ಕುತ್ತ ಸಾವಕಾಶವಾಗಿ ಮುಂದೆ ಸಾಗುತ್ತದೆ. ಸಂಸ್ಕೃತಿಯ ಬೆಳವಣಿಗೆ ಮಾನವನ ಸಾಂಪತ್ತಿಕ ಲಾಭಗಳನ್ನೇ ಹೆಚ್ಚಾಗಿ ಅವಲಂಬಿಸಿರುತ್ತದೆ.

ಸಂಸ್ಕೃತಿಯ ಬೆಳವಣಿಗೆಯ ರೂಪರೇಷೆಗಳನ್ನರಿತುಕೊಳ್ಳಬೇಕಾದರೆ ಯಾವ ಪ್ರಮಾಣದಿಂದ ಬೆಳವಣಿಗೆಯನ್ನಳೆಯಬೇಕೆಂಬುದನ್ನು ಮೊದಲು ನಿರ್ಧರಿಸಿಕೊಳ್ಳಬೇಕು. ಸಂಸ್ಕೃತಿಯ ಎಲ್ಲ ಚಮತ್ಕಾರಿಕ ಸಂಗತಿಗಳು ಎಲ್ಲೆಡೆಗಳಲ್ಲಿ ಒಂದೇ ವಿಧವಾಗಿ ಸಾಗಿಬಂದಿದ್ದರೆ ಸಂಸ್ಕೃತಿಯ ಬೆಳವಣಿಗೆಯನ್ನು ಅಳೆಯಲು ಒಂದು ಅಳತೆಗೋಲನ್ನು ನಿರ್ಮಿಸಬಹುದಾಗಿತ್ತು. ಆದರೆ ವಸ್ತುಸ್ಥಿತಿ ಹಾಗಿಲ್ಲ. ಮಾನವನ ಪ್ರಗತಿ ಅವನ ಎಲ್ಲ ಕಾರ್ಯಕ್ಷೇತ್ರಗಳಲ್ಲಿ ಏಕಕಾಲಕ್ಕೆ ಸಮನಾಗಿರುವುದಿಲ್ಲ. ಅವನು ಒಂದು ವಿಷಯದಲ್ಲಿ ಪ್ರಗತಿಯನ್ನು ಹೊಂದಿದ್ದರೆ, ಮತ್ತೊಂದರಲ್ಲಿ ಹಿಂದುಳಿದಿರುತ್ತಾನೆ. ಉದಾಹರಣೆಗಾಗಿ ಕಲೆಯು ಬಂಡವಲುಗಾರಿಕೆಯ ಇತ್ತೀಚಿನ ದಿನಗಳಿಗಿಂತಲೂ ಪ್ರಾಚೀನಕಾಲದಲ್ಲಿ ಹೆಚ್ಚು ಉನ್ನತಾವಸ್ಥೆಯನ್ನು ಪಡೆದಿತ್ತು. ಸಾವಿರಾರು ವರುಷಗಳ ಹಿಂದಿನ ನಮ್ಮ ಅನೇಕ ಗುಡಿಗುಂಡಾರಗಳಲ್ಲಿಯ ಕಲ್ಲಿನಲ್ಲಿಯ ಕೆತ್ತನೆಯ ಕೆಲಸವೇ ಇದಕ್ಕೆ ದೃಷ್ಟಾಂತ. ಕೆಲವೊಂದು ತಂಡ

ಗಳಲ್ಲಿ ನೈತಿಕಜೀವನವು ಅತ್ಯುನ್ನತಾವಸ್ಥೆಯನ್ನು ಪಡೆದಿತ್ತು. ಆದರೆ ಒಳ್ಳೆ ಸುಧಾರಿಸಿದ ರೋಮನ್ ಸಾಮ್ರಾಜ್ಯದಲ್ಲಿ ಅದು ಹೀನ ಸ್ಥಿತಿಯಲ್ಲಿದ್ದಿತು.

ಪ್ರಗತಿಯನ್ನಳೆಯುವ ಪ್ರಮಾಣವು ಮೇಲ್ಮರಗತಿಯದಾಗಿರಬೇಕು. ಮತ್ತು ಆಯಾ ರಾಷ್ಟ್ರಗಳ ಪ್ರಗತಿಯು ಗುಣಧರ್ಮಗಳನ್ನೊಳಗೊಂಡುದಾಗಿರಬೇಕು. ಕಲೆ ವಿಜ್ಞಾನ ರೀತಿ-ನೀತಿಗಳು, ಸಾಮಾಜಿಕ ವಿತ-ವ್ಯಯ, ರಾಜ್ಯಪದ್ಧತಿ, ಬೌದ್ಧಿಕ ಜೀವನಗಳನ್ನು ಅವಲಂಬಿಸಿರುವುದರಿಂದ ಒಂದು ರಾಷ್ಟ್ರದ ಸಂಸ್ಕೃತಿಯ ಬೆಳೆವಣಿಗೆಯನ್ನರಿತುಕೊಳ್ಳುವಾಗ ನಾವು ಇವುಗಳನ್ನೇ ಹೆಚ್ಚಾಗಿ ನಮ್ಮ ಕಣ್ಣುಮುಂದಿಟ್ಟುಕೊಳ್ಳಬೇಕು. ಇವುಗಳಲ್ಲಿ ಯಾವುದೊಂದೂ ಪರಿಪೂರ್ಣವಾಗಿದೆ ಎಂದು ಹೇಳಲಿಕ್ಕಾಗುವುದಿಲ್ಲ. ಆದರೂ ಸಾಮಾಜಿಕ ವಿತವ್ಯಯವೇ ಪ್ರಗತಿಯ ಮಟ್ಟವನ್ನು ಅಳೆಯಲು ಬಹು ಯೋಗ್ಯವಾದ ಅಳತೆಗೋಲೆಂದು ಹೇಳಬಹುದು. ಪ್ರಗತಿಯು ಹೆಜ್ಜೆಯ ಮೇಲೆ ಹೆಜ್ಜೆಯನ್ನಿಕ್ಕುತ್ತ ಸಾವಕಾಶವಾಗಿ ಮುಂದೆ ಸಾಗುತ್ತದೆ. ಸಂಸ್ಕೃತಿಯ ಬೆಳೆವಣಿಗೆ ಮಾನವನ ಸಾಂಪತ್ತಿಕ ಲಾಭಗಳನ್ನೇ ಹೆಚ್ಚಾಗಿ ಅವಲಂಬಿಸಿರುತ್ತದೆ. ಒಂದು ರಾಷ್ಟ್ರವು ತನ್ನ ಭೌತಿಕ ಸಂಪತ್ತಿಗನುಸಾರವಾಗಿ ಕೆಲವೊಂದು ಕಲೆ, ವಿಜ್ಞಾನ, ಸಾಮಾಜಿಕ ಸಂಘಟನೆಗಳಲ್ಲಿ ಪ್ರಗತಿಯನ್ನು ಪಡೆಯಬಹುದು. ಸಂಸ್ಕೃತಿಗೆ ಸಾಮಾಜಿಕ ವಿತವ್ಯಯವು ಎಷ್ಟೊಂದು ಮಹತ್ವದ್ದಾಗಿದೆ ಎಂಬುದನ್ನು ಕೇವಲ ಅನುಭವದಿಂದ ಅರಿತುಕೊಳ್ಳಬೇಕು. ಒಂದೊಂದು ಮನ್ವಂತರವು ಅಸ್ತಿತ್ವದಲ್ಲಿ ಬರಬೇಕಾದರೆ, ಸ್ವಾಭಾವಿಕ ಸೌಕರ್ಯಗಳ ಸಮೃದ್ಧಿಯೂ, ಔದ್ಯೋಗಿಕ ಸಂಶೋಧನಗಳೂ, ಪರಿಶ್ರಮದ ಸಂಘಟನೆಯೂ ಮುಖ್ಯ ಕಾರಣಗಳಾಗಿವೆ. ಸಾಂಪತ್ತಿಕ ಅಭಿವೃದ್ಧಿಯನ್ನು ಸಂಸ್ಕೃತಿಯ ಅಳತೆಗೋಲನ್ನು ಮಾಡಿಕೊಳ್ಳುವುದರಲ್ಲಿ ಮತ್ತೊಂದು ಲಾಭವಿದೆ. ಸಾಂಪತ್ತಿಕ ಸ್ಥಿತಿಯನ್ನು ಎಲ್ಲ ಕಡೆ ಕಷ್ಟವಿಲ್ಲದೆ ಸರಿಯಾಗಿ ತಿಳಿದುಕೊಳ್ಳಬಹುದು. ಅದರಿಂದ ರಾಷ್ಟ್ರಗಳನ್ನು ಅವುಗಳ ಸಂಸ್ಕೃತಿಯ ಅವಸ್ಥೆಗಳ ಪ್ರಕಾರ ವಿಭಾಗಿಸಲು, ವರ್ಗೀಕರಿಸಲು ಸುಲಭವಾಗುತ್ತದೆ.

ಸಮಾಜಶಾಸ್ತ್ರವು ಪ್ರಚಾರದಲ್ಲಿ ಬರುವುದಕ್ಕಿಂತ ಎಷ್ಟೋ ಮುಂಚಿ

ತವಾಗಿಯೇ ಸಂಸ್ಕೃತಿ ಶಾಸ್ತ್ರವು ವರ್ಗೀಕರಣಕ್ಕಾಗಿ ಸಾಮಾಜಿಕ ಸಂಪತ್ತಿನ ಮಹತ್ವವನ್ನರಿತುಕೊಂಡಿತ್ತು. ಪೂರ್ವದ ಜ್ಞಾನಿಗಳು ಆಹಾರೋತ್ಪಾದನವನ್ನೇ ಮುಖ್ಯವಾಗಿಟ್ಟುಕೊಂಡು ಜಗತ್ತಿನ ಜನಾಂಗಗಳನ್ನು, ಬೇಟೆಗಾರರು, ಮೀನುಗಾರರು, ಕುರುಬರು, ಒಕ್ಕಲುತನ ಮಾಡುವವರು ಎಂದು ವಿಭಾಗಿಸಿದ್ದರು. ಪ್ರಾಕ್ತನ ವಿಮರ್ಶಕರ ವಿಭಾಗಗಳು ಉಪಕರಣಗಳನ್ನೂ ಅವುಗಳನ್ನು ಪಯೋಗಿಸುವ ರೀತಿಗಳನ್ನೂ ಅವಲಂಬಿಸಿದ್ದವು. ಅಂತೆಯೇ ಅವರು ಕಲ್ಲಿನ ಯುಗ, ಕಂಚಿನ ಯುಗ, ಕಬ್ಬಿಣ ಯುಗ ಎಂದು ವಿಭಾಗಗಳನ್ನು ಮಾಡಿದ್ದಾರೆ. ಕೊನೆಗೆ ಅರ್ಥಶಾಸ್ತ್ರಜ್ಞರು ಶ್ರಮಸಂಘಟನೆಗಳನ್ನೇ ವಿಭಾಗಗಳ ಮೂಲತತ್ವವನ್ನಾಗಿ ಮಾಡಿಕೊಂಡು, ಬೆಳೆವಣಿಗೆಯನ್ನು ಶ್ರಮಸಂಘಟನೆಗಳ ಉನ್ನತಿಯ ಮೇರೆಗೆ ಅಳೆಯಬಹುದೆಂದು ತೋರಿಸಿಕೊಟ್ಟಿದ್ದಾರೆ. ಈ ಮೇರೆಗೆ ಮಾನವಸಮಾಜದ ಬೆಳೆವಣಿಗೆಯನ್ನಳೆಯಬೇಕಾದರೆ, ಆಹಾರೋತ್ಪಾದನ, ಉಪಕರಣಗಳ ನಿರ್ಮಾಣ, ಶ್ರಮಸಂಘಟನೆಗಳ ಪರಿಮಾಣಗಳ ಪ್ರಗತಿಯನ್ನು ತೋರಿಸುವ ಒಂದು ಪಟ್ಟಿಯನ್ನು ಸಿದ್ಧಪಡಿಸಿ ಕೊನೆಗೆ ಕೊಡಲಾಗಿದೆ. ಇಂತಹ ಈ ಪಟ್ಟಿಯಿಂದ ಈ ಮೂರು (ಆಹಾರೋತ್ಪಾದನ, ಉಪಕರಣಗಳ ನಿರ್ಮಾಣ, ಶ್ರಮಸಂಘಟನೆಗಳ ಪರಿಮಾಣ) ವಿಷಯಗಳೂ ಸಮಾಂತರವಾಗಿ ಹೇಗೆ ಬೆಳೆಯುತ್ತ ಬಂದಿವೆ ಎಂಬುದನ್ನು ಕಾಣಬಹುದು. ಸಂಸ್ಕೃತಿಯ ಕೆಳಗಿನ ತರಗತಿಯಲ್ಲಿ ಉಪಜೀವನಕ್ಕೆ ಬೇಕಾದ ಆಹಾರ ಸಂಪಾದನೆಯಲ್ಲಿಯೇ ಬಹು ಕಾಲವು ವೆಚ್ಚವಾಗುವುದರಿಂದ ಆಹಾರ ಸಂಪಾದನೆಯೇ ಒಳ್ಳೇ ಮಹತ್ವದ ವಿಷಯವಾಗಿರುತ್ತದೆ. ಸಂಸ್ಕೃತಿಯ ಮೇಲಿನ ತರಗತಿಯಲ್ಲಿ, ಹೆಚ್ಚಿನ ಸೌಕರ್ಯಗಳು ಮಾನವನಿಗೆ ಅವಶ್ಯವಾಗುವುದರಿಂದ ಶ್ರಮಸಂಘಟನೆಗಳು ಬೆಳಕಿಗೆ ಬರಬೇಕಾಗುತ್ತದೆ.

ಕೆಲವೊಂದು ಸಂಶೋಧಕರು ಮಾನವ ಸಂಸ್ಕೃತಿಯ ಬೆಳೆವಣಿಗೆಯಲ್ಲಿ ಕೆಳಗಿನ ಅವಸ್ಥೆಗಳನ್ನು ಕಂಡುಹಿಡಿದಿದ್ದಾರೆ:

೧ ಬೇಟೆಗಾರರು } ಕ್ರೂರ ಸ್ಥಿತಿ
೨ ಮೀನುಗಾರರು

೩ ಕುರುಬರು-ಸಂಚರಿಸುವವರು
೪ ಸ್ಥಾಯೀ ಜನರು-ಕೇವಲ ಒಕ್ಕಲುತನ ಮಾಡುವವರು } ಕಾಡು ಸ್ಥಿತಿ

೫ ಕೈಗಾರಿಕೆಗಳನ್ನು ಕೈಕೊಂಡವರು—ಅಥವಾ ವ್ಯಾಪಾರ ಮಾಡುವವರು
೬ ಯಂತ್ರಗಳ ಸಹಾಯದಿಂದ ವಸ್ತುಗಳನ್ನು ನಿರ್ಮಿಸುವವರು } ನಾಗರಿಕತೆ

ಆಹಾರೋತ್ಪಾದನ, ಉಪಕರಣಗಳ ನಿರ್ಮಾಣ, ಶ್ರಮಸಂಘಟನೆಗಳ ಪರಿಮಾಣ ಈ ಮೂರು ಮಾತುಗಳನ್ನು ಲಕ್ಷ್ಯದಲ್ಲಿಟ್ಟುಕೊಂಡರೆ ಸಂಸ್ಕೃತಿಯ ಅವಸ್ಥೆಗಳನ್ನು ನಾವು ಕೆಳಗಿನಂತೆ ವರ್ಗೀಕರಿಸಬಹುದು:

೧ **ಕ್ರೂರಸ್ಥಿತಿ:** ಈ ಅವಸ್ಥೆಯು ಸಂಸ್ಕೃತಿಯ ಆರಂಭದಿಂದ ಒಕ್ಕಲುತನ, ದನಗಾರಿಕೆಯ ಕಾಲದವರೆಗೂ ಇರುವ ಬಹುಕಾಲವನ್ನು ಒಳಗೊಂಡಿದೆ. ಈ ಅವಸ್ಥೆಯಲ್ಲಿ ಮಾನವನು ತನ್ನ ಜೀವನಕ್ರಮವನ್ನು, ಕಾಡು ಸಸ್ಯಗಳನ್ನು ಸಂಚಯಿಸುವುದರಿಂದಲೂ, ಬೇಟೆಯಾಡುವದರಿಂದಲೂ, ಮೀನು ಹಿಡಿಯುವುದರಿಂದಲೂ, ಸಾಗಿಸುತ್ತಿದ್ದನು. ಅವನ ಉಪಕರಣಗಳು ಮತ್ತು ಆಯುಧಗಳು ಸೃಷ್ಟಿಯಲ್ಲಿ ದೊರೆಯುವ ಸಾಮಾನ್ಯ ಕಟ್ಟಿಗೆ ಕಲ್ಲುಗಳಿಂದ ಮಾಡಲ್ಪಡುತ್ತಿದ್ದವು. ಆ ಕಾಲದ ಮುಖ್ಯ ಶ್ರಮಸಂಘಟನೆಯೆಂದರೆ ತಂಡಗಳನ್ನು ಕಟ್ಟಿಕೊಂಡಿರುವುದು. ಶ್ರಮವಿಭಾಗವೆಂದರ ಸ್ತ್ರೀ ಪುರುಷರು ಬೇರೆ ಬೇರೆ ಕೆಲಸಗಳನ್ನು ಮಾಡಬೇಕಾದುದು.

(ಅ) ಈ ಕ್ರೂರ ಸ್ಥಿತಿಯ ಬಹು ಕೆಳಗಿನ ಅವಸ್ಥೆಯೆಂದರೆ ಮಾನವ ವಂಶದ ಬಾಲ್ಯಾವಸ್ಥೆಯೆಂದೇ ಹೇಳಬಹುದು. ಮಾನವ ವಂಶದ ಪೂರ್ವಜರು ಗಿಡದಿಂದ ನೆಲಕ್ಕಿಳಿದು, ಮಾತುಗಳನ್ನುಂಟುಮಾಡಿಕೊಂಡು, ಕಲ್ಲು ಕಟ್ಟಿಗೆಗಳಿಂದ ಉಪಕರಣಗಳನ್ನು ಸಿದ್ಧಪಡಿಸುತ್ತಿದ್ದಾಗಲೇ ಈ ಕಾಲವು ಸುರುವು ಆಯಿತೆಂದು ತೋರುತ್ತದೆ. ಶ್ರಮವನ್ನಾಗಲಿ ಶ್ರಮವಿಭಾಗವನ್ನಾಗಲಿ ಇವರು ಅರಿತಿರಲಿಲ್ಲ. ಗುಂಪುಕಟ್ಟಿಕೊಂಡಿರುವುದರ ಅವಶ್ಯಕತೆಯನ್ನು ಮಾತ್ರ ಅರಿತಿದ್ದರು. ಬೆಂಕಿಯನ್ನು ಕಂಡುಹಿಡಿದ ಕಾಲದಿಂದ ಈ ಅವಸ್ಥೆ ಸಮಾಪ್ತಿಗೊಂಡಿತು. ಸಂಸ್ಕೃತಿಯ ಬುನಾದಿಕಾಲದ ಈ ಅವಸ್ಥೆ ಉಳಿದ ಎಲ್ಲ ಅವಸ್ಥೆಗಳ ಒಟ್ಟು ಕಾಲಕ್ಕಿಂತಲೂ ಹೆಚ್ಚು ಕಾಲ ತಾಳಿದ್ದಿತು. ಪರ್ಯವಸಾನ

ಸ್ಥಲ್ಲಿಯೂ ಬಹು ಮಹತ್ವವುಳ್ಳದ್ದಾಗಿತ್ತು. ಮುಂಬರುವ ಸಂಸ್ಕೃತಿಯ ಅವಸ್ಥೆಗಳಿಗೆ ಇದುವೆ ಪೂರ್ವಪೀಠಿಕೆ ಎಂದೆನ್ನಬಹುದು.

(ಆ) ಈ ಕ್ರೂರ ಸ್ಥಿತಿಯ ನಡುವಿನ ಅವಸ್ಥೆಯಲ್ಲಿ ಸಮಾಜಶಾಸ್ತ್ರದ ದೃಷ್ಟಿಯಿಂದ ಬಹು ಮಹತ್ವವುಳ್ಳ ಮಾನವರ ಗುಂಪುಗಳನ್ನು ಕಾಣ ಬಹುದು. ಇವುಗಳಲ್ಲಿ ಕೆಳತರಗತಿಯ ಬೇಟೆಗಾರರು—ಆಸ್ಟ್ರೇಲಿಯನ್‌ರು, ಫ್ಯೂಜಿಯನ್ನರು, ಎಸ್ಕಿಮೋ ಜನರು, ಕಂಟಿಗಳಲ್ಲಿರುವವರು ಮುಂತಾದ ವರು ಸಮಾವೇಶವಾಗುತ್ತಾರೆ. ಇವರು ಜಗತ್ತಿನ ತೀರ ದೂರದ ಮೂಲೆ ಗಳಿಗೆ ದೂಡಲ್ಪಟ್ಟಿದ್ದಾರೆ. ಮತ್ತು ಈಗ ತೀವ್ರವಾಗಿ ನಾಶಹೊಂದುತ್ತ ಲಿದ್ದಾರೆ. ಈ ಬೇಟೆಗಾರರು ಗುಂಪು ಕಟ್ಟಿಕೊಂಡು ತಿರುಗುತ್ತಾರೆ. ಯಾವ ಪ್ರಾಣಿಗಳನ್ನೂ ಯಾವ ವನಸ್ಪತಿಗಳನ್ನೂ ತಿಂದು ಇವರು ಜೀವಿಸ ಬಹುದು. ಇವರ ಆಯುಧೋಪಕರಣಗಳು 'ಕಲ್ಲಿನ ಹಳೆಯ ಯುಗ'ದ ಜನರ ಆಯುಧೋಪಕರಣಗಳಂತಿರುತ್ತವೆ. ಸ್ತ್ರೀಪುರುಷರು ಬೇರೆಬೇರೆ ಕೆಲಸ ಮಾಡಬೇಕಾದುದೇ ಇವರಲ್ಲಿ ಕಂಡುಬರುವ ಶ್ರಮವಿಭಾಗ.

(ಇ) ಈ ಅವಸ್ಥೆಯ ಮೇಲ್ತರಗತಿಯ ಬೇಟೆಗಾರರಲ್ಲಿ ಮುಖ್ಯವಾಗಿ ಅಮೇರಿಕೆಯ ಇಂಡಿಯನ್‌ರು ಬರುತ್ತಾರೆ ನಡುವಿನ ಅವಸ್ಥೆಯ ಬೇಟೆ ಗಾರರಿಂದ ಇವರು ತೀರ ಭಿನ್ನರಾಗಿರುವದಿಲ್ಲ. ಇವರ ಸಂಸ್ಕೃತಿ ಮಾತ್ರ ಒಂದು ಹೆಜ್ಜೆ ಮುಂದೆ ಸಾಗಿದೆ ಎಂದು ಹೇಳಬಹುದು. ಹೆಚ್ಚು ಸೌಕರ್ಯ ಗಳುಳ್ಳ ಇವರ ವಾಸಸ್ಥಾನವೇ ಈ ಮುನ್ನಡೆಗೆ ಕಾರಣ. ಬಿಲ್ಲು ಬಾಣಗಳ ಸಂಶೋಧನವು ಕೆಳತರಗತಿಯ ಮತ್ತು ಮೇಲ್ತರಗತಿಯ ಬೇಟೆಗಾರರನ್ನು ವಿಂಗಡಿಸುತ್ತದೆ. ಕೆಲವೊಂದು ಕೆಳತರಗತಿಯ ಬೇಟೆಗಾರರೂ ಬಿಲ್ಲುಬಾಣ ಗಳನ್ನು ಪಯೋಗಿಸುತ್ತಿದ್ದರೂ, ಬರ್ಚಿಯೇ ಅವರಿಗೆ ವಿಶೇಷವಾಗಿ ಗೊತ್ತಿದ್ದ ಆಯುಧವಾಗಿತ್ತು.

**೨. ಕಾಡು ಸ್ಥಿತಿ:** ಈ ಅವಸ್ಥೆ ಸ್ವಾಭಾವಿಕ ಸೌಕರ್ಯಗಳನ್ನು ಕಂಡು ಹಿಡಿದಾಗಿನಿಂದ ಪ್ರಾರಂಭವಾಗುತ್ತದೆ. ಒಕ್ಕಲುತನ ಮತ್ತು ದನಸಾಕುವ ದನ್ನು ಜನರು ಈ ಕಾಲದಲ್ಲಿ ಅರಿತಿದ್ದರು. 'ಕಲ್ಲಿನ ಹೊಸ ಯುಗ'ಕ್ಕೆ ಇದು ಸಂಬಂಧಿಸಿದುದು. ಆಯುಧೋಪಕರಣಗಳು ಹೆಚ್ಚು ಕುಶಲತೆಯಿಂದ ಮಾಡಲ್ಪಡುತ್ತಿದ್ದವು. ಕಲ್ಲನ್ನು ನುಣುಪಾಗಿ ಮಾಡುವುದನ್ನೂ ಅದರಲ್ಲಿ

ತೂತುಗಳನ್ನು ಕೊರೆಯುವದನ್ನೂ ಅರಿತಿದ್ದರು. ನೇಯುವುದನ್ನೂ ಮಣ್ಣಿನ ಪಾತ್ರೆಗಳನ್ನು ಮಾಡುವುದನ್ನೂ ಕಂಡುಹಿಡಿದಿದ್ದರು.

ಶ್ರಮಸಂಘಟನೆಯ ದೃಷ್ಟಿಯಿಂದ ಈ ಕಾಡು ಸ್ಥಿತಿಯನ್ನು ಇಬ್ಬಗೆಯಾಗಿ ವಿಭಾಗಿಸಬಹುದು.

(ಅ) ಕೆಳತರಗತಿ: ಇದರಲ್ಲಿ ಕುರುಬರೂ ಕೆಳತರಗತಿಯ ಒಕ್ಕಲುತನ ಮಾಡುವವರೂ ಸಮಾವೇಶವಾಗುತ್ತಾರೆ. ಶ್ರಮವಿಭಾಗವೆಂದರೆ ಸ್ತ್ರೀ ಪುರುಷರು ಬೇರೆಬೇರೆ ಕೆಲಸ ಮಾಡಬೇಕಾಗುವುದು.

(ಆ) ಮೇಲ್ತರಗತಿ: ಹಳ್ಳಿಗಳು, ಪ್ರಭುವಿನ ಆಸ್ತಿ ಎಂಬ ವಿಚಾರಗಳು ಜನರಲ್ಲಿ ಬಡಮೂಡಹತ್ತಿದ್ದವು. ಇದುವೆ ಮುಂದೆ ಸಂಸ್ಕೃತಿಗೆ ಮಾರ್ಗದರ್ಶಿ. ಮೇಲ್ತರಗತಿಯ ಒಕ್ಕಲುತನ ಮಾಡುವವರೂ, ಅರ್ಧ ಸುಧಾರಿಸಿದ ವಂಶಗಳೂ ಇದರಲ್ಲಿ ಬರುತ್ತವೆ.

೩. **ನಾಗರಿಕತೆ:** ಈ ಅವಸ್ಥೆಯಲ್ಲಿ ಸಾಂಪತ್ತಿಕ ದೃಷ್ಟಿಯಿಂದ ಜನರನ್ನು ವಿಭಾಗಿಸಲು ಸುಲಭಸಾಧ್ಯವಾಗುತ್ತದೆ. ಒಕ್ಕಲುತನವು ಔದ್ಯೋಗಿಕ ಶ್ರಮವಿಭಾಗಕ್ಕೆ ಎಡೆಯನ್ನುಂಟು ಮಾಡಿಕೊಟ್ಟಿತು. ಅನೇಕ ಜೀವನ ಸೌಕರ್ಯಗಳ ಉತ್ಪಾದನವಾಯಿತು. ಇಂತಹ ಸೌಕರ್ಯಗಳನ್ನು ಪಡೆದುದರಿಂದ ಮಾನವರು 'ಪ್ರಾಕೃತಿಕ ಜನ' ರೆಂಬ ಹೆಸರನ್ನು ಕಳೆದುಕೊಂಡು 'ಸುಸಂಸ್ಕೃತ ಜನ' ರೆಂಬ ಹೆಸರನ್ನು ಪಡೆದರು. ಪುರುಷರಲ್ಲಿ ಶ್ರಮವಿಭಾಗವಾದೊಡನೆ, ರಾಜ್ಯ, ಪಟ್ಟಣ, ಲೇಖನ ಕಲೆ, ವಿಜ್ಞಾನ ಕಲೆಗಳ ಅಭಿವೃದ್ಧಿ ಮುಂತಾದ ವಿಚಾರಗಳು ತಲೆದೋರಹತ್ತಿದವು. ನಾಗರಿಕತೆಯು ಮುಖ್ಯವಾಗಿ 'ಲೋಹ ಯುಗ'ಕ್ಕೆ ಸಂಬಂಧಿಸಿದುದಾಗಿರುತ್ತದೆ. ಈ ಯುಗದಲ್ಲಿ ಆಹಾರದ ಬಗ್ಗೆ ಯಾವ ವಿಶೇಷ ಸಂಶೋಧನವಾಗದಿದ್ದರೂ, ತೋಟವಾಳಿಕೆ, ಒಕ್ಕಲುತನಗಳಲ್ಲಿ ಎಷ್ಟೋ ಸುಧಾರಣೆಗಳಾದವು. ಶ್ರಮಸಂಘಟನೆಯ ದೃಷ್ಟಿಯಿಂದ ನಾಗರಿಕ ರಾಷ್ಟ್ರಗಳನ್ನು ಈ ಬಗೆಯಾಗಿ ವಿಭಾಗಿಸಬಹುದು:

(ಅ) ಕೆಳತರಗತಿಯ ನಾಗರಿಕತೆ: ಶ್ರಮವಿಭಾಗವನ್ನಷ್ಟೇ ಅರಿತವರು ಈ ತರಗತಿಗೆ ಸಂಬಂಧಿಸಿರುತ್ತಾರೆ. ಈ ಹೊತ್ತಿನ ಚೀನದಲ್ಲಿಯ ಅನೇಕರು ಈ ಬಗೆಯಾಗಿರುತ್ತಾರೆ.

(ಆ) ನಡುನಾಗರಿಕತೆ: ಈ ತರಗತಿಯಲ್ಲಿ ಜನರು ಒಂಡವಲುಗಾರಿಕೆಯ ಸಂಘಟನೆಗಳನ್ನು ಕಟ್ಟಿಕೊಂಡಿರುತ್ತಾರೆ.

(ಇ) ಮೇಲ್ತರಗತಿಯ ನಾಗರಿಕತೆ: ಒಂಡವಲುಗಾರಿಕೆ ಒಳ್ಳೆ ಉನ್ನತಾವಸ್ಥೆಯನ್ನು ಪಡೆದ ಕಾಲವಿದು. ಇದರ ಹೆಚ್ಚು ವಿಸ್ತೃತ ರೂಪವೆಂದರೆ ಯಂತ್ರಯುಗ. ಸ್ತ್ರೀಯರ ಕೆಲಸದಲ್ಲಿಯೂ ಶ್ರಮವಿಭಾಗವನ್ನು ಕಾಣಬಹುದು.

೪. **ಹೊಸಯುಗ:** ಇದರಲ್ಲಿ ಸಹಕಾರಬುದ್ಧಿ ಬೆಳೆದು, ಸಮಾಜವು ಹೆಚ್ಚು ಒಲಿಷ್ಠವಾಗಬಹುದು. ಬೇರೆಬೇರೆ ಜನಾಂಗಗಳಲ್ಲಿ ಸಾಮಾಜಿಕ ಸಂಬಂಧ ಹೆಚ್ಚೆಚ್ಚು ಬೆಳೆದು ಜಗತ್ತು ಪ್ರಗತಿಯ ಮಾರ್ಗವನ್ನನುಸರಿಸಿ ಸಂಸ್ಕೃತಿಯ ಅತ್ಯುನ್ನತ ಶಿಖರವನ್ನೇರಬಹುದು. ಸ್ತ್ರೀಯರ ಕೆಲಸದಲ್ಲಿ ಯೋಗ್ಯವಾದ ಶ್ರಮವಿಭಾಗವುಂಟಾಗಿ ಸ್ತ್ರೀಯರಿಗೆ ಸಮಾಜದಲ್ಲಿ ಯೋಗ್ಯ ಸ್ಥಾನ ದೊರೆತಾಗ ಇದು ಸಾಧ್ಯವಾಗುವದು.

---

## ಹದಿಮೂರನೆಯ ಮೆಟ್ಟಲು

## ಸಂಸ್ಕೃತಿಯ ಬೇರೆಬೇರೆ ಕಾಲಗಳ ಪರಿಮಾಣ



ಮಾನವನ ಬುದ್ಧಿಯು ಬೆಳೆವಣಿಗೆ ವಿಶಾಲವಾಗಿರದಿದ್ದರೆ ಆವನ ಮುನ್ನಡೆಯೂ ಕುಗ್ಗುತ್ತದೆ. ಜಗತ್ತಿನ ಪರಿಮಾಣ, ತಾನು ವ್ಯಾಪಿಸಿಕೊಂಡಿರುವ ಸ್ಥಳ, ತನ್ನ ಜೀವನ ಕಾಲ ಇವುಗಳ ಒಗ್ಗೆ ಅವನ ವಿಚಾರಗಳೂ ಸಂಕುಚಿತವಾಗುತ್ತವೆ. ಈ ಜಗತ್ತು ವಿಶ್ವದಲ್ಲಿ ಮಧ್ಯವರ್ತಿಯಾಗಿದೆಯೆಂದೂ, ಆಕಾಶದಲ್ಲಿ ಹೊಳೆವ ಸೂರ್ಯ ಚಂದ್ರ ನಕ್ಷತ್ರಗಳೂ—ಅದು ಏಕೆ, ಇಡೀ ವಿಶ್ವವೂ, ಈ ಜಗತ್ತಿನ ಸುತ್ತಲೂ ತಿರುಗುತ್ತವೆಂದೂ ಮೊನ್ನೆ ಮೊನ್ನಿನವರೆಗೆ ಜನರು ಭಾವಿಸುತ್ತಿದ್ದರು. ಸಂಸ್ಕೃತಿಯ ಕೆಳಮೆಟ್ಟಲುಗಳ ಮೇಲಿದ್ದ ಪ್ರಾಕೃತಿಕ ಜನರು, ತಾರಾಮಂಡಲವು ಆಕಾಶದಲ್ಲಿ ಬಹುದೂರದಲ್ಲಿ ಸಮತೋಲಿಸಿಂದಿರಿಸಲ್ಪಟ್ಟಿದೆ ಎಂಬುದನ್ನು ಈಗಲೂ ಅರಿಯರು. ಗ್ರಹಗಳು

ನಕ್ಷತ್ರಗಳು ತೀರ ಸಮೀಪದಲ್ಲಿವೆ ಎಂದೂ, ಅವುಗಳನ್ನು ಕೆಲವೊಂದು ರೀತಿಗಳಿಂದ ಸುಲಭವಾಗಿ ಮುಟ್ಟಬಹುದೆಂದೂ ಅವರ ಭಾವನೆ. ತಾಹಿತಿಯನ್‌ರು ಐರೋಪ್ಯರು ಸುದೀರ್ಘ ಜಲಪರ್ಯಟನವನ್ನು ಮಾಡುತ್ತಾರೆ ಎಂಬುದನ್ನರಿತು 'ಬ್ಲಾಯ್' ಎಂಬ ಆಂಗ್ಲನಿಗೆ 'ನಿನ್ನ ಪ್ರವಾಸದಲ್ಲಿ ಸೂರ್ಯ ಚಂದ್ರರನ್ನು ನೀನು ಕಂಡಿರುವಿಯಲ್ಲವೇ?' ಎಂದು ಒಮ್ಮೆ ಬಹಳ ಗಂಭೀರವಾಗಿ ಕೇಳಿದರಂತೆ. ಬುದ್ಧಿ ಬೆಳೆಯದ ಪ್ರಾಕೃತಿಕ ಜನರ ಇಂತಹ ವಿಚಿತ್ರ ಅನುಭವಗಳ ದೃಷ್ಟಾಂತಗಳನ್ನು ಇವತ್ತಿಗೂ ನಾವು ಅಲ್ಲಲ್ಲಿ ಕಾಣಬಹುದು.

ನಮಗೆ ಗೋಚರವಾಗುವ ವಿಶ್ವದ ತೀರ ಸಣ್ಣಭಾಗವು ಕೂಡ ಅಪಾರವಾಗಿ ಹಬ್ಬಿದೆ ಎಂದೂ, ಅದರ ವಿಸ್ತೃತೆ ನಮ್ಮ ಕಲ್ಪನಾಶಕ್ತಿಗೂ ನಿಲುಕದೆಂದೂ ಮಾನವನು ಇತ್ತೀಚೆಗೆ ತನ್ನ ಹೆಚ್ಚಿನ ಜ್ಞಾನದ ಮೂಲಕ ಅರಿತುಕೊಂಡಿದ್ದಾನೆ. ಒಂದು ಸೆಕಂದಿಗೆ ೧೮೬,೦೦೦ ಮೈಲುಗಳನ್ನು ಸಂಚರಿಸುವ ಬೆಳಕು ಆಕಾಶ ವೀಥಿಯಿಂದ ನಮ್ಮನ್ನು ಮುಟ್ಟುವುದಕ್ಕೆ ೬೦೦೦ ವರುಷಗಳು ಹಿಡಿಯುತ್ತವೆ. ಈ ಬೆಳಕಿನ ಮೂಲವು ಒಮ್ಮಿಂದೊಮ್ಮೆ ನಾಶವಾದರೂ ಅದರ ಬೆಳಕನ್ನು ಈ ಜಗತ್ತಿನ ಜನರು ಮುಂದೆ ೬೦೦೦ ವರುಷಗಳ ವರೆಗೆ ಕಾಣಬಹುದು. ಸ್ಥಳದ ವಿಸ್ತೃತೆ ಇಷ್ಟೊಂದು ಅಪಾರವಾಗಿದೆ ಎಂಬುದನ್ನರಿತುಕೊಂಡುದರಿಂದಲೇ ಈ ಜಗತ್ತು ನಮಗೆ ಅಣುಮಾತ್ರವಾಗಿ ಕಾಣುತ್ತದೆ. ಶಾಸ್ತ್ರೀಯ ವಿವೇಚನೆಯಿಂದ ನಾವು ಅರಿತುಕೊಂಡ ಈ ಅಪಾರವಾದ ಸ್ಥಳವೂ, ಅದರಲ್ಲಿಯ ಲಕ್ಷಾಂತರ ಥಳಥಳಿಸುವ ಸೂರ್ಯ ಚಂದ್ರ ನಕ್ಷತ್ರಗಳೂ, ಇವುಗಳನ್ನು ವಿಶ್ವದ ಅನಂತ ವಿಸ್ತೃತೆಗೆ ಹೋಲಿಸಿ ನೋಡಿದಾಗ, ಅಣುಮಾತ್ರವಾಗಿ ಪರಿಣಮಿಸುತ್ತವೆಂಬುದು ಈಗ ಕಂಡುಬಂದಿದೆ

**ಪೃಥ್ವಿಯ ಆಯುಷ್ಯ:** ವಿಶ್ವದ ವಿಸ್ತೃತೆಯನ್ನು ಸಾಧಾರಣವಾಗಿ ನಾವು ಅರಿತುಕೊಂಡಿದ್ದರೂ ವೇಳೆಯ ಪರಿಮಾಣವನ್ನರಿಯಲು ಇನ್ನೂ ಸಾಧ್ಯವಾಗಿಲ್ಲ. ಈ ಪೃಥ್ವಿಯು ಎಷ್ಟು ಕಾಲದಿಂದ ಅಸ್ತಿತ್ವದಲ್ಲಿದೆ, ಮಾನವ ವಂಶ, ಮಾನವ ಸಂಸ್ಕೃತಿ ಇವುಗಳ ಆಯುಷ್ಯ ಈಗ ಎಷ್ಟಾಗಿದೆ ಎಂಬ ಪ್ರಶ್ನೆಗಳಿಗೆ ಇನ್ನೂ ಸಮರ್ಪಕ ಉತ್ತರವನ್ನೀಯಲು ಸಾಧ್ಯವಾಗಿಲ್ಲ. ಕಾಲನಿರ್ಣಯವನ್ನು ನಾವು ಕೇವಲ ಊಹಾಪೋಹಗಳಿಂದ ಮಾಡಬೇಕಾಗಿದೆ.

ಪೃಥ್ವಿಯ ಕಾಲನಿರ್ಣಯದಲ್ಲಿ ಶಾಸ್ತ್ರಜ್ಞರಲ್ಲಿಯೂ ಭಿನ್ನಾಭಿಪ್ರಾಯಗಳಿವೆ. ಜ್ಯೋತಿಶ್ಶಾಸ್ತ್ರಜ್ಞರೂ, ಪದಾರ್ಥವಿಜ್ಞಾನಿಗಳೂ, ಭೂಗರ್ಭಶಾಸ್ತ್ರಜ್ಞರೂ ಪೃಥ್ವಿಯ ಆಯುಷ್ಯವನ್ನು ಸಾವಿರಾರು ವರುಷಗಳಿಂದ ಅಳೆಯುವುದಕ್ಕಿಂತ ಲಕ್ಷಾಂತರ ವರುಷಗಳಿಂದ ಅಳೆಯುವುದು ಲೇಸೆಂದು ಒಪ್ಪಿಕೊಂಡಿದ್ದಾರೆ. 'ಥೊಮ್ಸನ್' ಎಂಬ ಪದಾರ್ಥವಿಜ್ಞಾನಿಯು ಇಲ್ಲಿಯವರೆಗೆ ಪೃಥ್ವಿಯ ಆಯುಷ್ಯ ಸುಮಾರು ೧೦೦,೦೦೦,೦೦೦ ವರುಷ ಆಗಿದೆ ಎಂದೂ 'ಹರ್ಮನ್ ಕ್ಲೈನ್' ಎಂಬ ಜೋತಿಶ್ಶಾಸ್ತ್ರಜ್ಞನು ಪೃಥ್ವಿಯ ಮೇಲ್ಭಾಗವು ಘನೀಭೂತವಾದಾಗಿನಿಂದ ೨—೪ ಸಾವಿರ ದಶಲಕ್ಷ ವರುಷಗಳು ಗತಿಸಿ ಹೋಗಿವೆ ಎಂದೂ, 'ಬ್ಲಾಂಡೆಟ್' ಮತ್ತು 'ವಿನಾಟ್' ಎಂಬವರು ಪೃಥ್ವಿಗೆ ೬ ಸಾವಿರ ದಶಲಕ್ಷ ವರುಷಗಳಾಗಿವೆ ಎಂದೂ ಹೇಳುತ್ತಾರೆ.

ಭೂಗರ್ಭಶಾಸ್ತ್ರದ ದೃಷ್ಟಿಯಿಂದ ಭೂಮಿಯ ಮೇಲ್ಭಾಗವನ್ನು ಪರಿಶೀಲಿಸಿದರೆ, ಬೇರೆಬೇರೆ ಪದರುಗಳಲ್ಲಿ ಗುರುತಿಸಲು ಸುಲಭವಲ್ಲದ ಬೇರೆಬೇರೆ ಆಕೃತಿಗಳನ್ನು ನಾವು ಕಾಣುತ್ತೇವೆ. ಸುಮಾರು ನೂರು ಅಡಿ ದಪ್ಪವಾಗಿರುವ ಮೀನುಗೊಬ್ಬರ (guano) ದ ತರಗಳು ನಿರ್ಮಿತವಾಗಲು ೯ ಲಕ್ಷ ವರುಷಗಳು ಹತ್ತಿರಬೇಕೆಂದು 'ಅಲೆಕ್ಝಾಂಡರ ಹಂಬೊಲ್ಟ' ನು ಅಭಿಪ್ರಾಯಪಡುತ್ತಾನೆ. ಅನೇಕ ಕಲ್ಲಿದ್ದಲಿಯ ಪದರುಗಳಾಗಲು ಹತ್ತಿಪ್ಪತ್ತು ದಶಲಕ್ಷ ವರುಷಗಳು ಹಿಡಿದಿರಬಹುದೆಂದು ಕಂಡುಬಂದಿದೆ. ಅನೇಕ ಭೂಗರ್ಭಶಾಸ್ತ್ರಜ್ಞರು ಬೇರೆಬೇರೆ ಕಾಲಗಳ ಪರಿಮಾಣವನ್ನು ಕೆಳಗಿನಂತೆ ಊಹಿಸಿದ್ದಾರೆ.

| | | |
|---|---|---|
| ೧. ಮೂಲಪ್ರಕೃತಿಯ ಕಾಲ (Th-epremordial) | ೫೨,೦೦೦,೦೦೦ | ವ. |
| ೨ ಪ್ರಾಚೀನ ಜೀವಿಗಳ ಕಾಲ (Palaezoic) | ೩೪,೦೦೦,೦೦೦ | ,, |
| ೩. ಭೂಗರ್ಭಶಾಸ್ತ್ರದ ಮಾಧ್ಯಮಿಕ ಯುಗ | ೧೧,೦೦೦,೦೦೦ | ,, |
| ೪. ,, ತೃತೀಯ ,, | ೩,೦೦೦,೦೦೦ | ,, |
| ೫. ,, ಅರ್ವಾಚೀನ ಕಾಲ | ೧೨೦,೦೦೦ | ,, |

**ಮಾನವವಂಶ-ಮಾನವ ಸಂಸ್ಕೃತಿಯ ಕಾಲ:** ಇಂತು ಪೃಥ್ವಿಯ ಜೀವಮಾನವನ್ನು ಅಳೆಯುವದು ಮಾನವನ ಬುದ್ಧಿಗೆ ನಿಲುಕದ ಮಾತಾ-

ಗಿದೆ. ಹಾಗಾದರೆ ಮಾನವ ಸಂಸ್ಕೃತಿ ಎಷ್ಟು ಪುರಾತನದ್ದಾಗಿದೆ? ಅಥವಾ ಮಾನವನು ಎಷ್ಟು ವರುಷಗಳಿಂದ ಈ ಪೃಥ್ವಿಯ ಮೇಲೆ ವಾಸವಾಗಿದ್ದಾನೆ? ಎಂಬ ಕುತೂಹಲದ ಪ್ರಶ್ನೆಗಳು ಉದ್ಭವಿಸುತ್ತವೆ.

ಮಾನವನು ಬರ್ಫಯುಗದಲ್ಲಿಯೂ ಜಲಪ್ರಳಯ ಸಂಬಂಧವಾದ (Diluvial) ಯುಗದಲ್ಲಿಯೂ ಇದ್ದನೆಂಬುದನ್ನು ನಾವು ಖಂಡಿತವಾಗಿ ಒಲ್ಲೆವು. 'ಸೋವಲ್' ಎಂಬಲ್ಲಿಯ ಕೊಳ್ಳಗಳಲ್ಲಿ ದೊರೆತ ಕಲ್ಲಿನ ಆಯುಧೋಪಕರಣಗಳು ಏನಿಲ್ಲೆಂದರೂ ಸುಮಾರು ಒಂದು ನೂರು ಸಾವಿರ ವರುಷಗಳ ಹಿಂದಿನವೆಂದು 'ಲಾಯಲ್' ಎಂಬವನು ಅಭಿಪ್ರಾಯಪಡುತ್ತಾನೆ. 'ಲುವಾಕ್' ಎಂಬಾತನು ಕಲ್ಲಿನ ಹಳೆಯ ಯುಗದ ಉಪಕರಣಗಳೆಲ್ಲ ಒಂದು ಲಕ್ಷದಿಂದ ಎರಡು ಲಕ್ಷ ನಾಲ್ವತ್ತು ಸಾವಿರ ವರುಷಗಳ ಹಿಂದಿನ ಕಾಲಕ್ಕೆ ಸಂಬಂಧಿಸಿರಬೇಕೆಂದು ಹೇಳುತ್ತಾನೆ. 'ಕ್ರಾಲ್'ನ ಅಭಿಪ್ರಾಯದಂತೆ ಬರ್ಫಯುಗವು ಎರಡು ಲಕ್ಷ ವರುಷಗಳ ಹಿಂದೆ ಸುರುವಾಯಿತೆಂದೂ, ಒಂದು ಲಕ್ಷ ಅರವತ್ತು ಸಾವಿರ ವರುಷಗಳ ವರೆಗೆ ನಡೆಯಿತೆಂದೂ ತಿಳಿದುಬರುತ್ತದೆ. ಇನ್ನು ಕೆಲವರು ಬರ್ಫಯುಗವು ಸುಮಾರು ೨೫—೩೫ ಸಾವಿರ ವರುಷಗಳ ವರೆಗೆ ನಡೆಯಿತು ಎಂದು ಹೇಳುತ್ತಾರೆ. ಆದರೆ ಈ ವಿಷಯದಲ್ಲಿ ಒಳ್ಳೇ ಪಾರಂಗತನೆಂದು ಈಗ ತಿಳಿದುಬಂದ 'ಪೆಂಕ್' ಎಂಬಾತನು ಬರ್ಫಯುಗವು ಐದು ಲಕ್ಷ ವರುಷ ಅಸ್ತಿತ್ವದಲ್ಲಿತ್ತೆಂದು ಊಹಿಸುತ್ತಾನೆ.

ಈ ಅಭಿಪ್ರಾಯಗಳಲ್ಲಿ ಎಷ್ಟೊಂದು ಭಿನ್ನತೆ ಇದೆ ಎಂಬುದು ಥಟ್ಟನೆ ಹೊಳೆಯುವಂತಿದೆ. ಆದರೆ ಬರ್ಫಯುಗವು ಒಂದೇ ಆಗಿರದೆ ಅನೇಕವಾಗಿದ್ದವೆಂಬುದನ್ನರಿತುಕೊಂಡರೆ, 'ಪೆಂಕ್'ನು ಹೇಳುವಂತೆ ಬರ್ಫಯುಗವು ಐದು ಲಕ್ಷ ವರುಷಗಳ ವರೆಗೆ ನಡೆಯಿತೆಂದೂ ಮತ್ತು ಕಡೆಯ ಬರ್ಫಯುಗವು ೧೦—೨೦ ಸಾವಿರ ವರುಷಗಳ ಹಿಂದೆ ಇತ್ತೆಂದೂ ತಿಳಿದುಕೊಳ್ಳಬಹುದಾಗಿದೆ.

ಆದರೆ ಮಾನವನು ಬರ್ಫಯುಗಕ್ಕಿಂತಲೂ ಬಹು ಪೂರ್ವದವನಾಗಿರಬೇಕು. ಯಾಕೆಂದರೆ ಜಲಪ್ರಳಯ ಸಂಬಂಧವಾದ ಯುಗದ ಮನುಷ್ಯನು ಒಳ್ಳೇ ಪ್ರಗತಿಯನ್ನು ಹೊಂದಿದ ಸಂಸ್ಕೃತಿಯನ್ನು ಪಡೆದಿದ್ದನು. ಪ್ರಾಚೀನ ವಸ್ತುಶಾಸ್ತ್ರದಿಂದ ತಿಳಿದು ಬರುವಂತೆ ಅವನು ಪೃಥ್ವಿಯ ವಿವಿಧ ಭಾಗ-

ಗಳಲ್ಲಿ ಗಟ್ಟಿಯಾಗಿ ಕಾಲೂರಿದ್ದನು. ಬೆಂಕಿಯನ್ನು ಹೊತ್ತಿಸುವ ಜ್ಞಾನವೂ ಅವನ ಅನೇಕ ಉಪಕರಣಗಳೂ ಅವನಲ್ಲಿ ಕಾಣುತ್ತಿದ್ದವು.

ಆದುದರಿಂದ ಸಂಸ್ಕೃತಿಯ ಪ್ರಾಕೃತಿಕ ಅವಸ್ಥೆಯು ಈ ಯುಗಕ್ಕಿಂತಲೂ ಎಷ್ಟೋ ಮುಂಚಿತವಾಗಿಯೇ ಉಂಟಾಗಿರಲು ಬೇಕು. ಅದು ಪೃಥ್ವಿಯ ತೃತೀಯಾವಸ್ಥೆ (Tertiary period) ಯಲ್ಲಿಯೇ ಉಂಟಾಗಿರಬೇಕು. ಅಂತೂ ಮಾನವ ವಂಶದ ಜೀವಮಾನವನ್ನು ಸಾವಿರಾರು ವರುಷಗಳಿಂದ ಎಣಿಸುವುದರ ಬದಲು ಲಕ್ಷಾಂತರ ವರುಷಗಳಿಂದ ಎಣಿಸುವುದು ಸಾಧ್ಯ.

**ಕಲ್ಲಿನ ಹೊಸ ಯುಗ** (Neolithic)**ದ ಕಾಲ:** ಸ್ಕ್ಯಾಂಡಿನೇವಿಯಾ ಮತ್ತು ಡೆನ್ಮಾರ್ಕಗಳಲ್ಲಿ ಜಲಪ್ರಳಯ ಸಂಬಂಧವಾದ ಮಾನವನ ಕುರುಹುಗಳು ಕಂಡುಬರುವದಿಲ್ಲ. ಅಲ್ಲಿ ಮಾನವಸಂಸ್ಕೃತಿಯ ಅತಿ ಪ್ರಾಚೀನ ಕುರುಹುಗಳು ಕಲ್ಲಿನ ಹಳೆಯ ಯುಗದಿಂದ ಪ್ರಾರಂಭವಾಗಿರುತ್ತವೆ. ಅಂತಹ ಕುರುಹುಗಳು ಜವಳುಪ್ರದೇಶಗಳಲ್ಲಿ ದೊರೆಯುತ್ತವೆ. ಈ ಜವಳುಪ್ರದೇಶಗಳು ಇತಿಹಾಸಪೂರ್ವಕಾಲದ ಕೆಲವೊಂದು ಸಂಗತಿಗಳನ್ನು ಪೂರೈಸುವುದರಿಂದ ಅವುಗಳ ಮಹತ್ವ ಬಹಳ. ಈ ಪ್ರದೇಶಗಳಲ್ಲಿ ನಾಲ್ಕು ತರಗಳನ್ನು (Strata) ಕಾಣಬಹುದು.

ತೀರ ಕೆಳಗಿನ ತರದಲ್ಲಿ ಪಾಯಿನ್ ಅಡವೆಗಳ ಅವಶೇಷಗಳು ಇರುತ್ತವೆ. ಮೂರು ನಾಲ್ಕು ಸೂರು ವರುಷಗಳ ವರೆಗೆ ಬಾಳಿದ ಪಾಯಿನ ಬೊಡ್ಡಿಗಳನ್ನೂ, ಅವುಗಳ ಕೋನಾಕೃತಿಯ ತೊಗಟೆಯನ್ನೂ ಮುಳ್ಳುಗಳನ್ನೂ ಕಾಣಬಹುದು. ಈ ಪಾಯಿನ ಅಡವಿಗಳು ಒಂದಾನೊಂದು ಕಾಲದಲ್ಲಿ ಇಡೀ ಡೆನ್ಮಾರ್ಕವನ್ನು ಆವರಿಸಿದ್ದವು. ಎರಡನೆಯ ತರದಲ್ಲಿ ಆ್ಯಲ್ಡರ (aldor) ಎಂಬ ವೃಕ್ಷಗಳ ಅವಶೇಷಗಳನ್ನು ಕಾಣಬಹುದು. ಮೂರನೆಯ ತರದಲ್ಲಿ ಓಕ ಗಿಡಗಳ, ನಾಲ್ಕನೆಯ ತರದಲ್ಲಿ ಬೀಚ ಗಿಡಗಳ ಅವಶೇಷಗಳು ಕಂಡುಬರುತ್ತವೆ. ಈಗಿನ ಕಾಲದಲ್ಲಿಯೂ ಡೆನ್ಮಾರ್ಕದಲ್ಲಿ ಬರ್ಚ ಗಿಡಗಳ ವಿಶಾಲವಾದ ಅಡವಿಗಳೇ ಎಲ್ಲ ಕಡೆಯಲ್ಲಿಯೂ ಹಬ್ಬಿರುತ್ತವೆ. ಒಂದೊಂದು ತರವು ೧೫-೨೦ ಅಡಿಗಳಷ್ಟು ದಪ್ಪವಾಗಿರುತ್ತದೆ. ಈ ಎಲ್ಲ ತರಗಳು ಉಂಟಾಗಲಿಕ್ಕೆ ೧೦-೧೨ ಸಾವಿರ ವರುಷಗಳು ಹತ್ತಿರಬಹುದೆಂದು ಊಹಿಸಲಾಗಿದೆ.

ಇವೆಲ್ಲವುಗಳಲ್ಲಿ ಪಾಯಿನ ವೃಕ್ಷಗಳ ಕಾಲವೇ ಹೆಚ್ಚು ದಿನಗಳ ವರೆಗೆ ಬಾಳಿ ತೆಂದು ಹೇಳಬಹುದಾಗಿದೆ.

ಪ್ರಾಚೀನವಸ್ತುಶಾಸ್ತ್ರದ ಸಂಶೋಧನಗಳ ಮೇರೆಗೆ ಈ ಪಾಯಿನ ಅಡವಿಗಳ ಕಾಲವು ಕಲ್ಲಿನ ಹೊಸ ಯುಗಕ್ಕೆ ಸರಿಸಮಾನವಾಗಿರುತ್ತದೆ. ಅದು ಕ್ರಿ. ಪೂ. ೧೫೦೦ ವರುಷಗಳ ವರೆಗೆ ಬಾಳಿತೆಂದು ಹೇಳಬಹುದಾಗಿದೆ.

ಆ ಮೇಲೆ ಓಕ ಗಿಡಗಳು ಪಾಯಿನ ಗಿಡಗಳ ಸ್ಥಳವನ್ನು ಆಕ್ರಮಿಸಿ ಕೊಂಡವು. ಇದು ಕಂಚಿನ ಯುಗದ ಕಾಲದಲ್ಲಿಯೇ ಆಗಿರಬೇಕು.

ಮುಂದೆ ಕಬ್ಬಿಣ ಯುಗವು ಪ್ರಾರಂಭವಾದಾಗ ಈ ಓಕ ಗಿಡಗಳ ಕ್ಷೇತ್ರವು ಬೀಚ ಗಿಡಗಳಿಂದ ಆಕ್ರಮಿಸಲ್ಪಟ್ಟಿತು. ಬೀಚ ವೃಕ್ಷಗಳು ಈಗ ಸುಮಾರು ೧೯ ನೂರು ವರುಷಗಳ ವರೆಗೆ ತಮ್ಮ ಸ್ಥಳವನ್ನು ಭದ್ರವಾಗಿ ಟ್ಟುಕೊಂಡಿವೆ

ಕಲ್ಲಿನ ಹೊಸ ಯುಗದಲ್ಲಿ ಯುರೋಪದಲ್ಲೆಲ್ಲ ಇಂತಹ ಪ್ರಾಚೀನ ಅಡವಿಗಳು ಹಬ್ಬಿದ್ದವು. ಜನರು ಸರೋವರಗಳ ದಂಡೆಗಳ ಮೇಲೆ ಕಟ್ಟಿಗೆಯ ಮನೆಗಳನ್ನು ಕಟ್ಟಿಕೊಂಡು ಇರುತ್ತಿದ್ದರು. ಇಂತಹ ಸರೋವರ ತೀರದ ಮನೆಗಳು ಸುಮಾರು ೫೦೦೦ ವರುಷ ಬಾಳಿರಬಹುದೆಂದು ಹೇಳಲು ಸಾಧ್ಯವಿದೆ. ಇತಿಹಾಸಕಾಲವು ಸುರುವಾಗುವದಕ್ಕಿಂತ ಮುಂಚಿತ ವಾಗಿಯೇ ಅವು ಕಾಣದಾಗಿದ್ದವು. ಯಾವ ಪ್ರಾಚೀನ ಗ್ರಂಥಕರ್ತನೂ ಈ ಕಾಲದ ಜನರ ಬಗ್ಗೆ ಬರೆದಿರುವದಿಲ್ಲ. ಇವರು ಒಕ್ಕಲುತನವನ್ನೂ ದನ ಸಾಕುವುದನ್ನೂ ಬಳಕೆಯಲ್ಲಿ ತಂದಿದ್ದರೆಂದು ಊಹಿಸಬಹುದಾಗಿದೆ. ಅಂದ ಮೇಲೆ ಒಕ್ಕಲುತನವು ಎಷ್ಟು ಪ್ರಾಚೀನ ಕಾಲದಿಂದ ನಡೆದು ಬಂದಿದೆ ಎಂಬುದನ್ನು ನಾವು ತಿಳಿದುಕೊಳ್ಳಬಹುದು.

**ಸಂಸ್ಕೃತಿಯ ಬೇರೆಬೇರೆ ಅವಸ್ಥೆಗಳ ಕಾಲಪರಿಮಾಣ:** ಸಂಸ್ಕೃತಿಯ ಬೇರೆಬೇರೆ ಅವಸ್ಥೆಗಳ ಕಾಲ ಪರಿಮಾಣವನ್ನು ಸರಾಸರಿಯಾಗಿ ಊಹಿಸಬಹುದಾಗಿದೆ.

ಸಂಸ್ಕೃತಿಯ ಅವಸ್ಥೆಗಳ ಕಾಲಪರಿಮಾಣವು ಕ್ರಮೇಣ ಕಡಿಮೆಯಾಗುತ್ತ ಬರುತ್ತದೆಂದು 'ಕ್ಯಾಂಟ' ಎಂಬವನ ಅಭಿಪ್ರಾಯ. ಸಂಸ್ಕೃತಿಯ ಪ್ರಾಚೀನ ಅವಸ್ಥೆಗಳು ಬಹುಕಾಲದ ವರೆಗೆ ಹಬ್ಬಿದ್ದವೆಂದೂ,

ಪ್ರಗತಿಯು ಹೆಚ್ಚೆಚ್ಚಾದಂತೆ ಈ ಅವಸ್ಥೆಗಳ ಕಾಲಪರಿಮಾಣವು ಕಡಿಮೆಯಾಗುತ್ತ ಬಂದಿತೆಂದೂ ಹೇಳುತ್ತಾರೆ. ಈ ಸಿದ್ಧಾಂತದಲ್ಲಿ ತಥ್ಯವಿದೆ ಎಂಬುದನ್ನು ಇತಿಹಾಸವೂ ನಮ್ಮ ನಿದರ್ಶನಕ್ಕೆ ತಂದುಕೊಡುತ್ತದೆ ಕಳೆದ ಮೂವತ್ತು ವರುಷಗಳ ಪ್ರಗತಿಯು ಅದರ ಹಿಂದಿನ ನೂರು ವರುಷಗಳ ಪ್ರಗತಿಗಿಂತಲೂ ಹೆಚ್ಚಾಗಿದೆ. ಆ ನೂರು ವರುಷಗಳ ಪ್ರಗತಿ ಅದರ ಹಿಂದಿನ ಐದುನೂರು ವರುಷಗಳ ಪ್ರಗತಿಗಿಂತಲೂ ಹೆಚ್ಚು ಎಂಬುದು ಇತಿಹಾಸದಿಂದ ತಿಳಿದುಬರುವ ಮಾತಾಗಿದೆ ಪ್ರಪಂಚದ ಇತಿಹಾಸದಲ್ಲಿ ಬೇರೆಬೇರೆ ಕಾಲಗಳನ್ನು ಮಾಡುವ ಇತಿಹಾಸಕರ್ತರ ರೀತಿಯು ಇದೇ ತತ್ವವನ್ನು ಎತ್ತಿ ಹಿಡಿಯುತ್ತದೆ. ಇತಿಹಾಸಕರ್ತರು ಕೆಳಗಿನಂತೆ ಕಾಲವನ್ನು ವಿಭಾಗಿಸುತ್ತಾರೆ.

೧. ಪ್ರಾಚೀನಕಾಲ ಸುಮಾರು ಐದು ಸಾವಿರ ವರುಷಗಳ ವರೆಗೆ
೨. ಮಧ್ಯಮಕಾಲ ,, ಒಂದು ಸಾವಿರ ,, ,,
೩. ಹೊಸ ಯುಗ ,, ಮೂರುನೂರಾ ಐವತ್ತು ,, ,,
೪. ಆಧುನಿಕ ಯುಗ ,, ಒಂದುನೂರಾ ಇಪ್ಪತ್ತು ,, ,,

ಇದರ ಮೇಲಿಂದ ಕಂಡುಬರುವದೇನಂದರೆ ಸಂಸ್ಕೃತಿಯ ಅವಸ್ಥೆಗಳು ಹೆಚ್ಚೆಚ್ಚು ಹಿಂದಕ್ಕಿದ್ದಂತೆ ಹೆಚ್ಚೆಚ್ಚು ದೀರ್ಘವಾಗಿದ್ದವೆಂದು.

ಸಂಸ್ಕೃತಿಯ ಕ್ಷೇತ್ರದಲ್ಲಿ ಮಾನವನ ಮೊದಲಿನ ಹೆಜ್ಜೆಗಳು ಅಷ್ಟೊಂದು ಪ್ರಗತಿಪರವಾಗಿರಲಿಕ್ಕಿಲ್ಲ. ಆ ಕಾಲದ ಪರಿಮಾಣವು ಅತಿ ವಿಸ್ತೃತವಾಗಿದ್ದಿರಬೇಕು. ಮಾನವನು ಆದೇ ಆಗ ಪಶುಸ್ಥಿತಿಯಿಂದ ಹೊರಗೆ ಬಂದುದರಿಂದ ಅವನ ಪ್ರಗತಿ ಮಂದಗಾಮಿಯಾಗಿತ್ತು. ಹಳೆಯ ಆಚಾರವಿಚಾರಗಳಿಗೆ ಅಂಟಿಕೊಳ್ಳುವುದು, ಹೊಸತನ್ನು ಸಾವಧಾನವಾಗಿ ಸ್ವೀಕರಿಸುವುದು, ಜೀವಿಗಳ ಸ್ವಭಾವ. ಆದುದರಿಂದ ಮಾನವನ ಸಂಸ್ಕೃತಿಯ ಮೊದಲಿನ ಅವಸ್ಥೆ ಸುದೀರ್ಘವಾಗಿರಬೇಕೆಂದೂ, ಮಾನವನ ಮುನ್ನಡೆ ಬಹು ಸಾವಕಾಶವಾಗಿರಬೇಕೆಂದೂ ಹೇಳಬಹುದಾಗಿದೆ. ಅದರ ಮುಂದೆ ಬಂದ ಸಂಸ್ಕೃತಿಯ ಪ್ರತಿಯೊಂದು ಅವಸ್ಥೆಯ ಕಾಲಪರಿಮಾಣವು ಕಡಿಮೆಯಾಗುತ್ತ ಬಂದಿತು.

ಇಂತು ಪೃಥ್ವಿಯ ಇತಿಹಾಸ ಮತ್ತು ಮಾನವವಂಶದ ಇತಿಹಾಸಗಳ ಸಹಾಯದಿಂದ ಕೆಳಗಿನ ಅವಸ್ಥೆಗಳನ್ನು ನಾವು ವಿಂಗಡಿಸಬಹುದು.

(೧) ಜ್ಯೋತಿಶ್ಶಾಸ್ತ್ರದ ಅವಸ್ಥೆಗಳು:—(ಅ) ಪೃಥ್ವಿಯು ವಾಯು ರೂಪದಲ್ಲಿರುವದು. (ಆ) ಉಷ್ಣತಾಮಾನದ ಹೆಚ್ಚುಕಡಿಮೆಗಳ ಮೂಲಕ ದ್ರವಪದಾರ್ಥಗಳುಂಟಾದುದು. (ಇ) ಪೃಥ್ವಿಯ ಮೇಲ್ಭಾಗವು ಬಿರುಸಾದದ್ದು; ಘನೀಭೂತ ಪದಾರ್ಥಗಳು ಉಂಟಾದುದು.

(೨) ಭೂಗರ್ಭಶಾಸ್ತ್ರದ ಅವಸ್ಥೆಗಳು:—(ಅ) ಜೀವಿಗಳು ಇನ್ನೂ ನಿರ್ಮಾಣವಾಗದ ಕಾಲ. (ಆ) ವನಸ್ಪತಿಗಳೂ ಪ್ರಾಣಿಗಳೂ ಉಂಟಾದ ಕಾಲ. (ಇ) ಶ್ರೇಷ್ಠಜೀವಿಗಳ ನಿರ್ಮಾಣ ಕಾಲ; ಮಾನವನೂ ಅವನ ಸಂಸ್ಕೃತಿಯೂ ಉಂಟಾದ ಕಾಲ. ಇದರಲ್ಲಿಯೇ ಕೆಳಗಿನ ಅವಾಂತರ ಭೇದಗಳನ್ನು ಕಾಣಬಹುದು:

(೧) ಇತಿಹಾಸಪೂರ್ವಕಾಲದ ಅವಸ್ಥೆಗಳು:— (ಅ) ಪ್ರಾಚೀನ ಯುಗ. (ಆ) ಕ್ರೂರ ಸ್ಥಿತಿ. (ಇ) ಕಾಡು ಸ್ಥಿತಿ. ಮತ್ತು

(೨) ಇತಿಹಾಸಕಾಲದ ಅವಸ್ಥೆಗಳು;—ನಾಗರಿಕತೆ.

ಈ ಅನಂತವಾದ ಬದಲಾವಣೆಗಳಲ್ಲಿ ಇನ್ನೂ ಅನೇಕ ಅವಸ್ಥೆಗಳು ನಡುನಡುವೆ ತಲೆದೋರುವುದುಂಟು. ಪೃಥ್ವಿಯು ಶೀತವಾಗುವ ಕ್ರಮವು ನಡೆದೇ ಇದೆ. ವಾಯುರೂಪಿ ವಸ್ತುಗಳು ದ್ರವರೂಪಿಯಾಗಿಯೂ, ದ್ರವಗಳು ಘನೀಭೂತವಾಗಿಯೂ ಮಾರ್ಪಾಟುಗಳನ್ನು ಹೊಂದುತ್ತ ನಡೆದಿವೆ. ಜೀವಕಳೆಯನ್ನು ತುಂಬುವ ಸೂರ್ಯನು—ಯಾಕೆಂದರೆ ಪೃಥ್ವಿಯ ಮೇಲಿನ ಜೀವವೆಲ್ಲ ಬಿಸಿಲಿನ ರೂಪಾಂತರ—ಕ್ರಮೇಣ ತಂಪಾಗಹತ್ತಿದ್ದಾನೆ. ಹೆಚ್ಚು ಹೆಚ್ಚು ಶೀತವಾಗುತ್ತ ನಡೆದಿರುವ ಪೃಥ್ವಿಯು ಇನ್ನೂ ಬಹುಕಾಲ ಸೂರ್ಯನ ಸುತ್ತಲು ತಿರುಗಬಹುದು. ಪೃಥ್ವಿಯ ಮೇಲಿನ ಜೀವಿಗಳ ಜೀವವು ಕ್ಷಣಿಕ. ಅದು ಒಮ್ಮೆ ಸಂಪೂರ್ಣ ಇಲ್ಲದಾತಾಗಿ ಪೃಥ್ವಿಯು ಮತ್ತೆ ಕಲ್ಲಿನಂತೆ ನಿರ್ಜೀವವಾಗಿ ಸ್ತಬ್ಧವಾಗಿ ನಿಂತುಬಿಡಬಹುದು.

ಆದರೆ ಸಮಾಜಶಾಸ್ತ್ರವು ನಮ್ಮ ಕಣ್ಣಮುಂದಿರಿಸುವ ಹಸನ್ಮುಖವಾದ ಕೊಳ್ಳಗಳಲ್ಲಿ ಇಣಿಕಿ ನೋಡಿದರೆ, ಭವಿಷ್ಯವು ಸುಖಮಯವಾಗಿ ಕಂಗೊಳಿಸುತ್ತದೆ. ಮಾನವವಂಶದ ಜೀವನಕಾಲದ ಪರಿಮಾಣವು ಅನಂತ

ವಾಗಿ ತೋರುತ್ತದೆ. ಜಗತ್ತೆಂಬ ಗಡಿಯಾರದ ಮುಳ್ಳು ಅತಿ ಸಾವಕಾಶ ವಾಗಿ ಮುಂದಕ್ಕೆ ಸರಿಯುತ್ತದೆ. ಅದರ ಚಲನವು ನಮಗೆ ಗೋಚರ ವಾಗುವುದಿಲ್ಲ. ಅದರ ಆಂದೋಲಕದ (Pendulum) ಒಂದೇ ಒಂದು ಉಯ್ಯಾಲೆಗೆ ಒಂದೊಂದು ದೀರ್ಘ ಯುಗವು ಬೇಕಾಗುತ್ತದೆ. 'ಹಲ್ಮೊಝು' ಎಂಬವನು ಹೇಳುವಂತೆ ಸೂರ್ಯನ ಒಂದೇ ಒಂದು ಅಂಶ (Degree) ದಷ್ಟು ಉಷ್ಣತೆ ಕಡಿಮೆಯಾಗಲು ಇಪ್ಪತ್ತು ದಶಲಕ್ಷ ವರುಷಗಳ ಕಾಲವು ಬೇಕು. ಇನ್ನೂ ಕೋಟ್ಯಂತರ ವರುಷಗಳ ವರೆಗೆ ಬಾಳುಬಹುದಾದ ಪೃಥ್ವಿ ಯಲ್ಲಿ ಮಾನವಸಮಾಜವು ಸಂಸ್ಕೃತಿಯ ಎಂತಹ ಅತ್ಯುನ್ನತ ಶಿಖರವನ್ನು ಏರಬಹುದೆಂಬುದನ್ನು ಊಹಿಸಲು ಸಮಾಜಶಾಸ್ತ್ರವು ಎಡೆಯುಂಟುಮಾಡಿ ಕೊಡುತ್ತದೆ. ಈವರೆಗೆ ಆದ ಮಾನವನ ವಿಶಾಲವಾದ ಪ್ರಗತಿ ಮುಂಬರುವ ಆವನ ಅತಿ ಪರಿಪೂರ್ಣವಾದ ಸಂಸ್ಕೃತಿಯ ಪೂರ್ವರಂಗವೆಂದೇ ಹೇಳ ಬಹುದು.

ಮಾನವನು ಈಗಾಗಲೇ ಸಂಪಾದಿಸಿದ ವಿಜಯವು ಆವನನ್ನು ಮುಂದೆ ಸಾಗಿಸಿ, ಆವನ ಉನ್ನತ ಧ್ಯೇಯವು ಕೈಗೂಡುವಂತೆ ಮಾಡುವುದೆಂಬ ಹಿರಿ ದಾದ ಆಸೆ ಇದೆ.



## ಹದಿನಾಲ್ಕನೆಯ ಮೆಟ್ಟಲು

### ಸಂಸ್ಕೃತಿ ಮತ್ತು ಸುಖ



**ಸಂಸ್ಕೃತಿ ಎಂದರೇನು?** ಸಂಸ್ಕೃತಿ ಎಂದರೆ ಉಚ್ಚ ಧ್ಯೇಯವನ್ನು ಈಡೇರಿಸಲು ಪ್ರಗತಿಧರ್ಮವನ್ನು ಪಾಲಿಸಲು ಬೇಕಾಗುವ ಸಾಮುದಾ ಯಿಕ ಶಕ್ತಿ ಎಂದು ಸಾಮಾನ್ಯವಾಗಿ ಹೇಳುವ ರೂಢಿಯುಂಟು. ಇದರಿಂದ ನಿರ್ಣಯಿಸಬಹುದಾದ ಮಾತೇನೆಂದರೆ—ಮಾನವ ಜೀವನವು ಸಂಸ್ಕೃತಿಯ

ಮಾರ್ಗವನ್ನನುಸರಿಸಿ ಸತತವೂ ಹೆಚ್ಚೆಚ್ಚು ಸುಧಾರಣೆಯನ್ನೂ ಪರಿಪೂರ್ಣತೆಯನ್ನೂ ಪಡೆಯುತ್ತಲಿದೆ ಎಂದು. ಆದರೆ ಅನುಭವವು ಈ ಸಿದ್ಧಾಂತವನ್ನು ಪುಷ್ಟೀಕರಿಸುವುದಿಲ್ಲ. ಸಂಸ್ಕೃತಿಯು ಮಾನವನಿಗೆ ಅಪಾರ ಶಕ್ತಿ ಸಂಪತ್ತುಗಳನ್ನು ದೊರಕಿಸಿಕೊಟ್ಟಿದೆ. ಅದರಂತೆಯೆ ಮಾನವನ ಮೇಲೆ ಅನೇಕ ಕರ್ತವ್ಯಗಳ, ಅನೇಕ ನಿರ್ಬಂಧಗಳ ಬಹು ಭಾರವಾದ ಹೊರೆಯನ್ನು ಹೊರಿಸಿ ಬಿಟ್ಟಿದೆ. ಇಂತಹ ಭಾರವನ್ನು ಹೊರಲಾರದೆ ಮಾನವನು ನಿಶ್ಚಿಂತೆಯುಳ್ಳ, ನಿರ್ಬಂಧರಹಿತವಾದ, ಪ್ರಾಕೃತಿಕ ಮಾನವನ ಸ್ವಾಭಾವಿಕ ಜೀವನಕ್ರಮವನ್ನೇ ಹೆಚ್ಚಾಗಿ ಪ್ರೀತಿಸುವಂತೆ ತೋರುತ್ತದೆ. ಒಂದು ದಿಶೆಯಲ್ಲಿ ಪ್ರಗತಿಯಾಗಿದ್ದರೆ, ಇನ್ನೊಂದರಲ್ಲಿ ವ್ಯತಿಕ್ರಮವೂ ಹಾನಿಯೂ ಉಂಟಾಗಿರುತ್ತದೆಂಬುದನ್ನು ಸ್ಪಷ್ಟವಾಗಿ ಕಾಣಬಹುದು.

ಸಂಸ್ಕೃತಿಯೆಂದರೆ ಪ್ರಗತಿಪರ ಚಳವಳಿ ಎಂದು ನಾವು ಖಂಡಿತವಾಗಿ ಒಪ್ಪಿಕೊಂಡರೂ, ನಿಜವಾದ ಪ್ರಗತಿ ಎಷ್ಟರ ಮಟ್ಟಿಗೆ ಆಗಿದೆ ಎಂಬ ಪ್ರಶ್ನೆ ನಮ್ಮ ಕಣ್ಣೆದುರು ಬಂದು ನಿಲ್ಲುತ್ತದೆ. ಪ್ರಗತಿಯಿಂದುಂಟಾದ ವಿಶಿಷ್ಟ ಲಾಭಹಾನಿಗಳಾವವು ?

* * * * *

ಸೌಖ್ಯವನ್ನು ಪಡೆವುದು ಮಾನವ ಪ್ರಯತ್ನದ ಅಂತಿಮ ಧ್ಯೇಯವಾಗಿರುವುದರಿಂದ, ಸಂಸ್ಕೃತಿಯ ಮುಖಾಂತರ ಮಾನವನು ಸೌಖ್ಯವನ್ನು ಪಡೆಯಬಲ್ಲನೆಂಬುದೇ ಸಂಸ್ಕೃತಿ ಪ್ರಗತಿಗಳಿಂದ ಸೂಚಿತವಾಗುವ ಅರ್ಥ. ಸೌಖ್ಯವೆಂಬ ಶಬ್ದದ ಅಪಾರ ಅರ್ಥವನ್ನು ಸ್ಪಷ್ಟಗೊಳಿಸಿದರೆ, ಸಂಸ್ಕೃತಿ ಪ್ರಗತಿಗಳಿಂದ ನಾವು ಅದನ್ನು ಸಾಧಿಸಬಹುದೋ ಎಂಬುದು ತಿಳಿದುಬರುತ್ತದೆ. ಸೌಖ್ಯವೆಂದರೇನೆಂಬುದರ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಅನೇಕರು ಸೌಖ್ಯದ ಅಪಾರ್ಥವನ್ನೇ ಮಾಡಿಕೊಂಡಿರುತ್ತಾರೆ. ಒಂದು ಬಗೆಯ ಸೋಮಾರಿತನದ, ಉದ್ದೇಶರಹಿತ ಜೀವನವೇ ಸೌಖ್ಯವೆಂದು ಅವರು ತಿಳಿಯುತ್ತಾರೆ. ಇಂತಹ ಜೀವನದಲ್ಲಿ ಪ್ರವಾಹಗಳು ಹಾಲು ಜೇನುಗಳಿಂದ ತುಂಬಿ ಹರಿಯುತ್ತವೆಂದೂ, ಮಾಡಿದಡಿಗೆ ತಾನಾಗಿ ಬಾಯಲ್ಲಿ ಬಂದು ಬೀಳುತ್ತದೆಂದೂ—ಸ್ವಲ್ಪದರಲ್ಲಿ ಹೇಳುವುದಾದರೆ ಕಿಂಚಿತ್ತಾದರೂ ಪ್ರಯತ್ನವಿಲ್ಲದೆ ಎಲ್ಲ ಮನೋರಥಗಳೂ ಕೈಗೂಡುತ್ತವೆಂದು ಅವರ ಕಲ್ಪನೆ.

ಸುಖವೆಂದರೆ ಇಂತಹ ಸ್ವರ್ಗಸುಖದ ಸ್ವಪ್ನವೇ ಅನೇಕರಿಗೆ ಯಾಕೆ ಇರುತ್ತ ದೆಂದರೆ ಅನೇಕರು ಅತ್ಯುತ್ತಮ ವಸ್ತುಗಳನ್ನು ಅತಿ ಕಡಿಮೆ ಪ್ರಯತ್ನದಿಂದ ಹೊಂದಬೇಕೆಂದು ಹಂಬಲಿಸುವುದರಿಂದ. ಇಂತಹ ಮನೋರಥವು ಕೈಗೂಡಿ ದರೆ ಮಾನವನಿಗೆ ಅದರಿಂದ ಹಿತವಾಗುವುದರ ಬದಲು ದುಃಖವೇ ಅತಿಯಾ ಗುವುದು. ಇಂತಹ ಮನೋರಾಜ್ಯವು ಈಡೇರಿದರೆ ಅವನ ಆಶೆ-ಆಕಾಂಕ್ಷೆ ಗಳು, ಕಾರ್ಯಕಲಾಪಗಳು ಕೊನೆಗೊಳ್ಳುವವು. ಆಲಸ್ಯವು ಅತಿಯಾಗಿ ಪಶುಪಸಂತೆ ಕಾಲಕಳೆವುದರಿಂದ ಬೇಸತ್ತು ಬೆಂಡಾಗುವನು. ನಿಜವಾದ ಸೌಖ್ಯದ ಸಂವೇದನೆ, ಆಲಸ್ಯದಿಂದ ದಿಗ್ಭ್ರಮೆಗೊಂಡು ಕುಳಿತಿರುವುದರಲ್ಲಿ ಇರದೆ, ನಿರುದ್ಯೋಗದ ಆನಂದದಲ್ಲಿರದೆ ಸತತೋದ್ಯೋಗಿಯಾಗುವುದರಲ್ಲಿದೆ. ಧ್ಯೇಯದಲ್ಲಿರದೆ ಧ್ಯೇಯವನ್ನು ಸಾಧಿಸಲು ಶ್ರಮಪಡುವುದರಲ್ಲಿ ಇರು ತ್ತದೆ. ಅದನ್ನು ಹೊಂದುವುದರಲ್ಲಿರದೆ ಅದನ್ನು ಹೊಂದಲು ಹೆಣಗಾಡು ವುದರಲ್ಲಿ ಇರುತ್ತದೆ. ಸೌಖ್ಯವೆಂಬುದು ಒಂದು ನಿರ್ದಿಷ್ಟ ಸ್ಥಿತಿಯೆಂದೂ, ಒಮ್ಮೆ ಅದನ್ನು ಪಡೆದರೆ ಅದು ಶಾಶ್ವತವಾಗಿ ಉಳಿಯುತ್ತದೆಂದೂ ಭಾವಿ ಸುವುದು ತಪ್ಪು. ಜೀವದಂತೆ ಸೌಖ್ಯದ ಅನುಭವವೂ ಒಂದು ಕ್ರಮ. ಸತತ ಪ್ರಯತ್ನದಿಂದಲೇ ಅದನ್ನು ಸ್ವಾಧೀನದಲ್ಲಿಟ್ಟುಕೊಳ್ಳುವುದು ಸಾಧ್ಯ. ಗುರಿ ಗಿಂತಲೂ ಗುರಿಯನ್ನು ಸಾಧಿಸಲು ಮುಟ್ಟಿಸುವ ಮಾರ್ಗವೇ ಹೆಚ್ಚು ಮಹತ್ವವುಳ್ಳದ್ದು. ಅನೇಕ ದುಷ್ಟ ಚಟಗಳಿಗೆ ಗುಲಾಮನಾಗಿ ಕೆಲಸವಿಲ್ಲದೆ ಬೇಸರಬರುವಂತಹ ರೀತಿಯಿಂದ ಪಶುಗಳಂತೆ ಜೀವನಕ್ರಮವನ್ನು ಸಾಗಿ ಸುವುದು ಸುಖವಲ್ಲ ಎಂಬುದನ್ನು ಮಾನವನು ಚೆನ್ನಾಗಿ ಅರಿತುಕೊಳ್ಳಬೇಕು. ತನ್ನಲ್ಲಿ ಅಂಕುರಿಸುತ್ತಿರುವ, ಗುಪ್ತವಾದ ಅನೇಕ ಶಕ್ತಿಗಳನ್ನು ಬೆಳಕಿಗೆ ತಂದು, ಹೊಸ ಆಕಾಂಕ್ಷೆಗಳನ್ನೂ, ಹೊಸ ಕೊರತೆಗಳನ್ನೂ ಹೊಸ ಪ್ರಯತ್ನಗಳಿಂದ ಪೂರೈಸಿಕೊಳ್ಳುತ್ತ, ಮಾರ್ಗದಲ್ಲಿ ಬಂದ ಎಡರು-ತೊಡರು ಗಳನ್ನು ದಾಟುತ್ತ, ತನ್ನ ಪ್ರಯತ್ನಗಳಿಗನುಗುಣವಾದ ಫಲಗಳನ್ನು ರುಚಿ ಸುತ್ತ, ತನ್ನ ಎಲ್ಲ ಶಕ್ತಿ-ಸಾಮರ್ಥ್ಯ-ಬುದ್ಧಿಮತ್ತೆಯನ್ನು ಕೇಂದ್ರೀಕರಿಸಿ ತನ್ನ ವ್ಯಕ್ತಿತ್ವವನ್ನು ಪರಿಪೂರ್ಣಾವಸ್ಥೆಗೆ ಒಯ್ಯಲು ಎಡೆಬಿಡದೆ ಪ್ರಯತ್ನಿಸು ವವನೇ ಧನ್ಯನು. ವ್ಯಕ್ತಿಯ ಸಾಮರ್ಥ್ಯಗಳೆಲ್ಲವನ್ನೂ ಒಟ್ಟುಗೂಡಿಸಿ ವ್ಯಕ್ತಿತ್ವವನ್ನು ಪರಿಪೂರ್ಣಾವಸ್ಥೆಗೆ ಮುಟ್ಟಿಸಲು ಮಾಡುವ ಪ್ರಯತ್ನವೇ

ಸೌಖ್ಯವೆಂದರಿತುಕೊಳ್ಳಬೇಕು. ತಮ್ಮ ವ್ಯಕ್ತಿತ್ವವು ನಿರಾತಂಕವಾಗಿ ಬೆಳೆಯಲುಬಹುದಾದ ವಾತಾವರಣದಲ್ಲಿದ್ದುಕೊಂಡು, ತಮ್ಮ ಬುದ್ಧಿಶಕ್ತಿಯನ್ನು ಸ್ವತಂತ್ರವಾಗಿಯೂ ಸಂಪೂರ್ಣವಾಗಿಯೂ ಬೆಳೆಯಿಸಿಕೊಂಡು ತಮಗೂ ಸಮಾಜಕ್ಕೂ ಹಿತಕಾರಿಯಾಗುವ ಕೆಲಸವನ್ನು ಮಾಡಬಹುದಾದ ಶ್ರೇಷ್ಠ ಮಾನವರೇ ನಿಜವಾದ ಸುಖವನ್ನು ಅನುಭವಿಸಬಲ್ಲರು.

*  *  *  *  *

ಸಂಸ್ಕೃತಿಯಿಂದ ಮಾನವನು ಹೆಚ್ಚು ಸುಖಿಯಾಗಿದ್ದಾನೆಯೇ ಎಂಬ ಪ್ರಶ್ನೆಯ ವಿಷಯದಲ್ಲಿ ತಜ್ಞರು ಭಿನ್ನಾಭಿಪ್ರಾಯವುಳ್ಳವರಿರುತ್ತಾರೆ. ಕೆಲವರು ಮಾತ್ರ ಇದನ್ನು ಒಪ್ಪುತ್ತಾರೆ. ಸಮಾಜಶಾಸ್ತ್ರದ ಪುರಸ್ಕರ್ತರಲ್ಲಿ ಒಬ್ಬನಾದ 'ಸರ್ ಜಾನ್ ಲೂಬಕ್'' ಎಂಬ ಮಹಾವಿಜ್ಞಾನಿಯು ಸಂಸ್ಕೃತಿಯಿಂದ ಮಾನವನ ಪ್ರಗತಿಯಾಗಿ ಅವನು ಸುಖಿಯಾಗುವನೆಂದು ಹೇಳುತ್ತಾನೆ. ಸಮಾಜಶಾಸ್ತ್ರಜ್ಞರಲ್ಲಿ ಅನೇಕರು ಈ ಪ್ರಶ್ನೆಯನ್ನು ತಪ್ಪಿಸಿಕೊಳ್ಳುತ್ತಾರೆ. ಕೆಲವರು ಇದಕ್ಕೆ ಉತ್ತರವನ್ನೀಯುವುದು ಅಸಾಧ್ಯವೆಂದು ಹೇಳುತ್ತಾರೆ. ಇನ್ನೂ ಕೆಲವರು ಸಂಸ್ಕೃತಿಗೂ ಮಾನವಸುಖಕ್ಕೂ ಸಂಬಂಧವಿಲ್ಲವೆಂದು ಅಭಿಪ್ರಾಯಪಡುತ್ತಾರೆ. ಅನೇಕರು ಸಂಸ್ಕೃತಿಯಿಂದ ಮನುಷ್ಯನು ತನ್ನ ಸ್ಥಿತಿಯನ್ನು ಸುಧಾರಿಸಿಕೊಳ್ಳುವುದರ ಬದಲು ಅದನ್ನು ಹದಗೆಡಿಸಿಬಿಟ್ಟಿದ್ದಾನೆಂದು ಸಿದ್ಧಮಾಡಲು ಹೆಣಗುತ್ತಾರೆ. ಇಂತು ಸಂಸ್ಕೃತಿಯು ಮಾನವನಿಗೆ ಒಂದು ಹರಕೆ ಎಂದು ಕೆಲವರು ಭಾವಿಸುತ್ತಿದ್ದರೆ, ಇನ್ನು ಕೆಲವರು ಅದೊಂದು ಮಹಾಶಾಪವೆಂದು ತಿಳಿಯುತ್ತಾರೆ. ಈ ಇಬ್ಬಗೆಯ ಅಭಿಪ್ರಾಯಗಳಿಂದ, ವ್ಯಕ್ತಿಯ ಸುಖವನ್ನು ಸಂಸ್ಕೃತಿಯು ಖಂಡಿತವಾಗಿಯೂ ತೀವ್ರವಾಗಿಯೂ ಹೆಚ್ಚಿಸುವುದಿಲ್ಲವೆಂಬ ಮಾತು ತಿಳಿದುಬರುವಂತಿದೆ. ಬೇರೆ-ಬೇರೆ ಸಂಶೋಧಕರು ಸುಧಾರಿಸಿದ ರಾಷ್ಟ್ರಗಳ ಬೇರೆಬೇರೆ ಮಾನವ ವರ್ಗಗಳನ್ನು ಪ್ರಾಕೃತಿಕ ಜನರೊಂದಿಗೆ ಹೋಲಿಸಿ ನೋಡಿದ್ದಾರೆ. ಆದುದರಿಂದಲೇ ಅವರೆಲ್ಲರ ಅಭಿಪ್ರಾಯಗಳಲ್ಲಿ ಇಷ್ಟೊಂದು ವ್ಯತ್ಯಾಸ. ಕೆಲವೊಂದು ಮಾನವ ವರ್ಗಗಳು ಸಂಸ್ಕೃತಿಯ ಮೂಲಕ, ಪ್ರಾಕೃತಿಕ ಜನರು ಎಂದೂ ಮುಟ್ಟಲಾರದ ಉನ್ನತ ಶಿಖರಗಳನ್ನು ತಲುಪಿದ್ದಾರೆಂಬುದು ಖಂಡಿತ. ಆದರೆ ನಾವು ಸಂಸ್ಕೃತಿಯ ಮೇಲ್ಮೆಟ್ಟಲುಗಳ ಮೇಲಿದ್ದ ಸಾಮಾನ್ಯ ಜನಜೀವನದ ಸ್ಥಿತಿಗತಿ

ಗಳನ್ನು ಪರಿಶೀಲಿಸಿದರೆ, ಸಂಸ್ಕೃತಿಯಿಂದ ವ್ಯಕ್ತಿಗಳ ವ್ಯಕ್ತಿತ್ವವು ನಿರಾತಂಕ ದಿಂದ ಬೆಳೆಯುವುದರ ಬದಲು ಕಡಿಮೆಯಾಗಿದೆ ಎಂದು ಒಪ್ಪಿಕೊಳ್ಳಬೇಕಾಗು ತ್ತದೆ. ಮಾನವನು ಬುನಾದಿಕಾಲದ ಪ್ರಾಕೃತಿಕ ಸ್ವರೂಪದಲ್ಲಿ ತನ್ನ ಸರ್ವಶಕ್ತಿ ಯನ್ನು ತನ್ನ ಇಚ್ಛಾನುಸಾರವಾಗಿ ಉಪಯೋಗಿಸಿಕೊಳ್ಳಬಹುದು. ತನ್ನ ಇರುವಿಕೆಯಿಂದ ಸಂತುಷ್ಟನಾಗಿರುತ್ತಾನಲ್ಲದೆ ಭವಿಷ್ಯವನ್ನು ಗಣನೆಗೆ ತರುವು ದಿಲ್ಲ. ಆದರೆ ಸುಧಾರಿಸಿದ ಸ್ಥಿತಿಯಲ್ಲಿ ಜನಸಮುದಾಯವು ಒಂದೇ ಸಮನೆ ದುಡಿಯಬೇಕಾಗುತ್ತದೆ; ನಿರ್ದಿಷ್ಟ ಕೆಲಸವನ್ನೇ ಮಾಡಬೇಕಾಗುತ್ತದೆ. ಕ್ಲಿಷ್ಟ ಕಾರ್ಯಕಲಾಪಗಳಲ್ಲಿ ಸಿಲುಕಿ, ಅನೇಕ ನಿಯಂತ್ರಣಗಳಿಗೊಳಗಾಗಿ, ಕೊರತೆ ಚಿಂತೆಗಳಿಂದ ಪೀಡಿತರಾಗಿ, ಪೂರೈಸಲಸದಳವಾದ ಆಸೆಗಳಿಗೊಳ ಗಾಗಿ ಕುಂಠಿತ ಜೀವನಕ್ರಮವನ್ನು ಸಾಗಿಸಿಕೊಂಡು ಹೋಗಬೇಕಾಗು ತ್ತದೆ. ಪ್ರಾಕೃತಿಕ ಮಾನವನು ಇಂತಹ ಸ್ವಾತಂತ್ರ್ಯರಹಿತ ಜೀವನಕ್ರಮ ವನ್ನು ನೋಡಿದರೆ ಅಸಹ್ಯಪಟ್ಟುಕೊಳ್ಳುತ್ತಾನೆ.

* * * * *

ಈ ನಮ್ಮ ವಿಚಾರಗಳು ಆಶ್ಚರ್ಯಕರವಾಗಿರಬಹುದು. ನಂಬಲನರ್ಹ ವಾಗಿಯೂ ತೋರಬಹುದು. ಅನಂತ ಕಾಲದಿಂದಲೂ ಮಾನವನು ತನ್ನ ಸಾಧನಗಳನ್ನು ಬೆಳೆಸುತ್ತ ಬಂದಿದ್ದಾನೆ. ಸಂಶೋಧನಗಳ ಮೇಲೆ ಸಂಶೋ ಧನಗಳನ್ನು ಮಾಡಿದ್ದಾನೆ. ಪ್ರಗತಿಯ ಮುನ್ನಡೆಯನ್ನು ಸಾಗಿಸಿಕೊಂಡು ಬಂದಿದ್ದಾನೆ. ಪ್ರಬಲ ಪ್ರಯತ್ನಗಳಿಂದ, ತನ್ನ ಬುದ್ಧಿವಂತ ಮುಂದಾಳುಗಳ ವಿಚಿತ್ರ ಕಾರ್ಯದಿಂದ ಅತಿ ಶ್ರೇಷ್ಠವಾದ ಶಕ್ತಿಯನ್ನು ಸಂಪಾದಿಸಿದ್ದಾನೆ. ಈ ಶಕ್ತಿಯೇ ಅವನನ್ನು ಅಖಿಲ ಪ್ರಾಣಿ-ಸಾಮ್ರಾಜ್ಯದಿಂದ ಬೇರ್ಪಡಿಸಿ ಅವ ನಿಗೆ ಅಗ್ರಸ್ಥಾನವನ್ನಿತ್ತಿದೆ. ಪೃಥ್ವಿಯ ಮೇಲೆ ಎಲ್ಲ ಕಡೆಯಲ್ಲಿಯೂ ಅವನಿಗೆ ಪ್ರಭುತ್ವವನ್ನಿತ್ತಿದೆ. ಇಷ್ಟೆಲ್ಲ ಸಂಪತ್ತನ್ನು ಪಡೆದ ಮಾನವನ ಸ್ಥಿತಿಯು ಸಂಸ್ಕೃತಿಯಿಂದ ಕೀಳಾಗಿದೆಯೆಂದು ಹೇಳುವುದೇ ? ಮೇಲ್ತರಗತಿಯ ಸುಧಾರಣೆಯಿಂದ, ತನ್ನ ಕೆಲಸದಿಂದಲೇ ತನ್ನನ್ನು ಕಟ್ಟಿಕೊಳ್ಳುವಂತೆ ಕಬ್ಬಿ ಣದ ಸರಪಳಿಗಳನ್ನು ಅವನು ನಿರ್ಮಿಸಿಕೊಂಡಿದ್ದಾನೆಂದು ಊಹಿಸುವುದೇ ? ಇಂತು ತಾನು ತನ್ನನ್ನೇ ತನ್ನ ಕೆಲಸದ ದಾಸನನ್ನಾಗಿ ಮಾಡಿಕೊಂಡಿದ್ದಾ

ನೆಯೋ ? ಮುಂದಿನ ಕೆಲ ಮಾತುಗಳನ್ನು ಅರಿತುಕೊಂಡರೆ ಈ ಪ್ರಶ್ನೆಗಳಿಗೆ ಸುಲಭವಾಗಿ ಉತ್ತರವನ್ನೀಯಬಹುದು.

ಜೀವನಸಂಗ್ರಾಮದಲ್ಲಿ ಮಾನವನು ವೈಯಕ್ತಿಕವಾಗಿ ಹೋರಾಡದೆ, ಸಾಮೂಹಿಕವಾಗಿ ಹೋರಾಡುತ್ತಾನೆ. ವ್ಯಕ್ತಿವ್ಯಕ್ತಿಗಳು ಹೋರಾಡದೆ ಸಮಾಜ ಸಮಾಜಗಳು ಹೋರಾಡುತ್ತವೆ. ಜೀವನಸಂಗ್ರಾಮದಲ್ಲಿ ಸಮಾಜದ ಬಳಿ ಶಕ್ತಿವಂತ ಆಯುಧವೆಂದರೆ ಸಂಘಟನೆ. ಬಳಿ ಸುಸಂಘಟಿತ ಸಮಾಜವು ಸಂಘಟನೆಯಿಲ್ಲದ ಸಮಾಜವನ್ನು ಕೆಳಕ್ಕೆ ಹಾಕಿ ತನ್ನ ಸ್ವಾಮಿತ್ವವನ್ನು ಸ್ಥಾಪಿಸುತ್ತದೆ ಇಂತು ಜೀವನಸಂಗ್ರಾಮದಲ್ಲಿ ಸಮಾಜ ಸಂಘಟನೆ ಬೆಳೆಯುತ್ತದೆ. ಸಮಾಜ ಸಂಘಟನೆಯ ವಿಷಯದಲ್ಲಿ ವ್ಯಕ್ತಿಯ ಸ್ಥಿತಿಯೇನಾಗುತ್ತದೆಂಬುದು ಗೌಣ ವಿಷಯ ಇದಕ್ಕೆ ಒಂದು ದೃಷ್ಟಾಂತವನ್ನು ತೆಗೆದುಕೊಳ್ಳಬಹುದು: ಒಂದು ತಂಡವು ಬೇರೊಂದು ತಂಡವನ್ನು ಸೋಲಿಸುತ್ತದೆ. ಸೋತ ತಂಡದ ಜನರನ್ನು ತನ್ನ ಗುಲಾಮರನ್ನಾಗಿ ಮಾಡಿಕೊಳ್ಳುತ್ತದೆ. ಈ ಗುಲಾಮರು ಜಯಶಾಲಿಯಾದ ತಂಡಕ್ಕೆ ಬೇಕಾದ ಅನೇಕ ಕೆಲಸಗಳನ್ನು ಮಾಡುತ್ತಾರೆ. ಜಯಶಾಲಿಗಳು ತಮ್ಮ ವೇಳೆಯನ್ನೆಲ್ಲ ಯುದ್ಧಕಲೆಯನ್ನು ಬೆಳೆಸುವುದರಲ್ಲಿ ವೆಚ್ಚಮಾಡುತ್ತಾರೆ. ಹೀಗೆ ಗುಲಾಮರನ್ನು ಉಪಯೋಗಿಸಿಕೊಳ್ಳುವ ತಂಡವು ಗುಲಾಮರಿಲ್ಲದ ತಂಡಕ್ಕಿಂತಲೂ ಹೆಚ್ಚು ಸುಸಂಘಟಿತವಾಗುತ್ತದೆ. ಆದುದರಿಂದ ಸಂಸ್ಕೃತಿಯ ಕೆಲವೊಂದು ಅವಸ್ಥೆಯಲ್ಲಿ ಗುಲಾಮರನ್ನು ಮಾಡಿಕೊಳ್ಳುವುದು ಮಹತ್ವದ ವಿಷಯವಾಯಿತು. ಈ ರೂಢಿಯು ಎಲ್ಲ ಕಡೆಯಲ್ಲಿಯೂ ಹಬ್ಬಿತು. ಇದರಿಂದ ಅನೇಕ ವ್ಯಕ್ತಿಗಳ ಸೌಖ್ಯಕ್ಕೆ ಖಂಡಿತವಾಗಿಯೂ ಹಾನಿಯುಂಟಾಯಿತು. ತನ್ನಲ್ಲಿಯ ಅನೇಕ ವ್ಯಕ್ತಿಗಳನ್ನು ಕೃತ್ರಿಮ ಶ್ರಮವಿಭಾಗಕ್ಕೆ ಒತ್ತಾಯಪಡಿಸಬಹುದಾದ ಸಮಾಜವು ಇಂತಹ ಶ್ರಮವಿಭಾಗವನ್ನರಿಯದ ಸಮಾಜಕ್ಕಿಂತಲೂ ಹೆಚ್ಚು ಬಲಿಷ್ಠವಾಗಿರುತ್ತದೆ. ಶ್ರಮವಿಭಾಗವನ್ನರಿತ ಸಮಾಜವು ಅದನ್ನರಿಯದ ಸಮಾಜವನ್ನು ಸಹಜವಾಗಿ ತನ್ನ ವಶಪಡಿಸಿಕೊಳ್ಳುತ್ತದೆ. ಇದರಿಂದ ಬಹುಜನರ ಸುಖವು ಹೆಚ್ಚುವುದಕ್ಕಿಂತಲೂ ಕಡಿಮೆಯಾಗುತ್ತದೆ. ಸಂಸ್ಕೃತಿಯ ಲಾಭವನ್ನು ವ್ಯಕ್ತಿಗಳ ಸೌಖ್ಯಕ್ಕಾಗಿ ಉಪಯೋಗಿಸಿಕೊಳ್ಳುವುದರ ಬದಲು ಇಡೀ ಸಮಾಜದ ಹಿತಕ್ಕಾಗಿ ಉಪಯೋಗಿಸಿಕೊಳ್ಳುವ ಸಮಾಜವು ಬಳ್ಳೀ

ಶಕ್ತಿವಂತವಾಗುವುದು. ತದ್ವಿರುದ್ಧವಾದ ರೂಢಿಯುಳ್ಳ ಸಮಾಜಗಳು ಭೂತದಯಾದೃಷ್ಟಿಯಿಂದ ಎಷ್ಟೇ ಪ್ರಗತಿಯನ್ನು ಪಡೆದಿದ್ದರೂ ಬಲಿಷ್ಠ ಸಮಾಜಗಳ ವಶವಾಗಿಬಿಡುತ್ತವೆ. ಇಂತಹ ಬಲಿಷ್ಠ ಸಮಾಜಗಳು ಸಾಮೂಹಿಕ ಹಿತವನ್ನೇ ಕಣ್ಣುಮುಂದಿರಿಸಿಕೊಳ್ಳುವುದರಿಂದ ವ್ಯಕ್ತಿಯ ಹಿತವನ್ನು ಲೆಕ್ಕಿಸುವುದಿಲ್ಲ.

ಎಷ್ಟೋ ಪ್ರಗತಿ ಹೊಂದಿದ, ಅನೇಕ ಕಾರ್ಯಗಳನ್ನು ಸಾಧಿಸಿದ, ಸಂಸ್ಕೃತಿಯು ವ್ಯಕ್ತಿಗಳ ಹಿತವನ್ನು ಯಾಕೆ ಹೆಚ್ಚಿಸಲಿಲ್ಲವೆಂಬುದು ಮೇಲ್ಕಂಡ ವಿಚಾರ ಸರಣಿಯಿಂದ ಸ್ಪಷ್ಟವಾಗುತ್ತದೆ. ಸಂಸ್ಕೃತಿಯ ಅರ್ಥವೇನೆಂಬುದನ್ನೂ ಅದರ ಮಹತ್ವವೇನೆಂಬುದನ್ನೂ ನಾವು ಈಗ ಚನ್ನಾಗಿ ಅರಿತುಕೊಂಡಂತಾಯಿತು. ಪ್ರಗತಿಯ ಕರ್ತವ್ಯವು ವ್ಯಕ್ತಿಗಳ ಹಿತಸಾಧನೆಯಾಗದೆ, ವ್ಯಕ್ತಿಗಳಿಗೆ ಒಮ್ಮೊಮ್ಮೆ ಅಹಿತವಾದರೂ, ಇಡೀ ಸಮಾಜವನ್ನು ಪರಿಪೂರ್ಣಗೊಳಿಸುವುದೇ ಆಗಿತ್ತು. ಸಮಾಜವು ಹೆಚ್ಚೆಚ್ಚು ಪರಿಪೂರ್ಣವಾದಂತೆ ವ್ಯಕ್ತಿಯು ತನ್ನ ಸ್ವಾತಂತ್ರ್ಯ ಕಳೆದುಕೊಂಡು ಅನೇಕ ನಿಯಂತ್ರಣಗಳಿಗೆ ಒಳಗಾಗಿ ಕೇವಲ ಒಂದು ಯಂತ್ರದಂತೆ ಜೀವನದಲ್ಲಿ ಕೆಲಸ ನಡೆಸಬೇಕಾಗುತ್ತದೆ. ಇದರಿಂದ ವ್ಯಕ್ತಿಯ ಹಿತವೂ ಆಗಬಹುದು, ಅಹಿತವೂ ಆಗಬಹುದು. ಜಯಶಾಲಿಗಳು ಸುಸಂಘಟಿತರಾದ, ಸುವ್ಯವಸ್ಥಿತರಾದ, ಒಳ್ಳೇ ಆಡಳಿತಕ್ಕೆ ಒಳಪಟ್ಟ ಸಮಾಜಸೇವಕರಾಗಿರುತ್ತಿದ್ದರು. ಸಂಸ್ಕೃತಿಯ ಲಾಭಗಳು ವ್ಯಕ್ತಿಗಳಿಗೆ ವರವಾಗಿ ಬಂದಿರುವುದಿಲ್ಲ. ಯಾಕೆಂದರೆ ಅವು ಸಮಾಜದ ಶಕ್ತಿವರ್ಧನೆಗೂ ಸಮಾಜದ ಬೆಳವಣಿಗೆಗೂ ಅದನ್ನು ಪರಿಪೂರ್ಣಗೊಳಿಸುವುದಕ್ಕೂ ಉಪಯೋಗಿಸಲ್ಪಡುತ್ತವೆ. ಇಲ್ಲಿಯವರೆಗೆ ಆಗಿಹೋದ ಸಂಸ್ಕೃತಿಯ ತುದಿಮೊದಲುಗಳನ್ನು ನಾವು ತುಸು ನಿರೀಕ್ಷಿಸಿದರೆ ಈ ಮಾತಿನ ಸತ್ಯವು ಹೊರಬೀಳುತ್ತದೆ. ಈಹೊತ್ತಿನ ಯಾವುದೊಂದು ರಾಷ್ಟ್ರವೂ ಕಾಡುಜನರ ಗುಂಪಿಗಿಂತ ಎಷ್ಟೋ ಉನ್ನತಿಯನ್ನು ಪರಿಪೂರ್ಣತೆಯನ್ನು ಹೊಂದಿದೆ ಎಂಬುದರಲ್ಲಿ ಸಂಶಯವಿಲ್ಲ. ಆದರೆ ಇಂತಹ ಪರಿಪೂರ್ಣತೆ ವ್ಯಕ್ತಿಗಳ ಆಶೆ-ಆಕಾಂಕ್ಷೆಗಳ ದೃಷ್ಟಿಯಿಂದ ನಿರಾಶಾಜನಕವಿರುತ್ತದೆ.

ಸಂಸ್ಕೃತಿಯೆಂದರೆ ವ್ಯಕ್ತಿಯ ಹಿತವನ್ನು ಬೆಳೆಸುವ ವಿಷಯವಲ್ಲ

ವೆಂದೂ ಸಮಾಜಸಂಘಟನೆಯನ್ನು ಪರಿಪೂರ್ಣಗೊಳಿಸುವುದೇ ಅದರ ಹೆಗ್ಗುರಿ ಎಂದೂ ಈಗ ನಾವು ಸ್ಪಷ್ಟವಾಗಿ ಅರಿತುಕೊಂಡಂತಾಯಿತು.

ಜನಪದವು (State) ವ್ಯಕ್ತಿಯ ಗುರಿಯಾಗಿರದೆ ಅದು ವ್ಯಕ್ತಿಗೆ ತನ್ನ ಗುರಿಯನ್ನು ಸಾಧಿಸಿಕೊಳ್ಳಲು ಸಹಾಯಕಾರಿಯಾಗಿರಬೇಕು. ಈ ದೃಷ್ಟಿಯಿಂದ ಇಲ್ಲಿಯವರೆಗೆ ಸಂಸ್ಕೃತಿಯ ಕ್ರಮವೆಲ್ಲ ಅರ್ಥವಿಲ್ಲದ ಉದ್ದೇಶರಹಿತ ರೀತಿಯಲ್ಲಿಯೇ ನಡೆದಿದೆ. ಉದ್ದೇಶಯುಕ್ತ ಮನೋಬಲವು ಅದನ್ನು ಸಾಗಿಸದೆ ಕೆಲವೊಂದು ಕುರುಡು ರೀತಿಯಿಂದ ನಡೆವ ಶಕ್ತಿಗಳೇ ಅದನ್ನು ಸಾಗಿಸಿಕೊಂಡುಬಂದಿವೆ.

ಹಾಗಿರದಿದ್ದರೆ ಮತ್ತೇನು? ಮಾನವನು ಈಗಲೂ ಬುದ್ಧಿಮತ್ತೆಯಲ್ಲಿ ಬಹು ಕೀಳು ದೆಸೆಯಲ್ಲಿದ್ದಾನೆ ಸಂಸ್ಕೃತಿಯ ಕ್ರಮದ ಅರಿವೂ ಕೂಡ ಅವನಿಗಿಲ್ಲ. ಅಂದಮೇಲೆ ಈ ಕ್ರಮದಲ್ಲಿ ಅವನು ಉದ್ದೇಶವನ್ನಿಟ್ಟುಕೊಂಡು ಮುಂದೆ ಸಾಗುವದೆಂತು? ವ್ಯಕ್ತಿಯು ಗುರಿಯ ಅರಿವನ್ನಿಟ್ಟುಕೊಂಡರೆ ವ್ಯವಸ್ಥಿತವಾಗಿ ಕೆಲಸಮಾಡಬಲ್ಲನು. ಆದರೆ ಪರಸ್ಪರ ವಿರುದ್ಧ ಮನೋ-ವೃತ್ತಿಯುಳ್ಳ ಅನೇಕ ವ್ಯಕ್ತಿಗಳನ್ನೊಳಗೊಂಡ ಮಾನವಸಮಾಜವು ಧ್ಯೇಯ ವಿಲ್ಲದ ಗಿಡಗಂಟಿಗಳಂತೆಯೋ, ಪಶುಗಳಂತೆಯೋ ಉದ್ದಕ್ಕೆ ಬೆಳೆಯುತ್ತದೆ. ತಾನು ಅನುಸರಿಸಬೇಕಾದ ಮಾರ್ಗವನ್ನರಿಯದು. ಅಪರಿಚಿತವಾದ ನಿಯಮ ನಿಯಂತ್ರಣಗಳಿಗೆ ಒಳಗಾಗಿ ಸಾಗುತ್ತದೆ. ಆದುದರಿಂದ ಮಾನವಸಮಾಜವು ಕಾಡುಸ್ಥಿತಿಯಿಂದ ಇಲ್ಲಿಯವರೆಗೆ ಎರಡು ವರ್ಗಗಳಾಗಿ ವಿಭಾಗಿಸಲ್ಪಟ್ಟಿದೆ. ಆಡಳಿತೆಯ ಸೂತ್ರಗಳನ್ನು ವಹಿಸಿರುವ ಕೆಲವೊಂದು ವ್ಯಕ್ತಿಗಳದೊಂದು ವರ್ಗ. ಇಂತಹ ಆಡಳಿತೆಗೆ ಒಳಗಾಗಿರುವ ಬಹು ಜನರದು ಮತ್ತೊಂದು ವರ್ಗ. ಕೆಲವೊಂದು ವಿಷಯಗಳಲ್ಲಿ ಈ ಎರಡೂ ವರ್ಗಗಳ ಹಿತವು ಒಂದೇ ಆಗಿರುತ್ತದೆ. ಆದರೆ ಅನೇಕ ವಿಷಯಗಳಲ್ಲಿ ಇವೆರಡೂ ವರ್ಗಗಳ ಹಿತವು ಭಿನ್ನವಾಗಿರುತ್ತದೆ. ಸ್ವಾರ್ಥಕ್ಕಾಗಿ ಸುಲಿಗೆ ಮಾಡುವವರ ಹಿತವು, ಸುಲಿಗೆಗೊಳಗಾದವರ ಹಿತಕ್ಕೆ ವಿರುದ್ಧವಾಗಿರುತ್ತದೆ. ಈ ಪದ್ಧತಿಯಂತೆ ಅಲ್ಪಸಂಖ್ಯಾಕರ ಕೈಯಲ್ಲಿ ಅಧಿಕಾರವಿರುವುದರಿಂದ ಅವರು ಬಹು-ಸಂಖ್ಯಾಕರ ಹಿತವನ್ನು ಮೂಲೆಗುಂಪುಮಾಡಿ ಅವರನ್ನು ಬಹು ಶೋಚನೀಯ ಸ್ಥಿತಿಗೆ ಇಳಿಸುತ್ತಾರೆ. ಇಂತಹ ಸಂಸ್ಕೃತಿಯ ಪ್ರಗತಿಯಲ್ಲಿ ವ್ಯಕ್ತಿಗೆ

ಸ್ಥಾನವಿಲ್ಲ. ಪ್ರಕೃತಿಯೇ ಸಮಾಜದ ಹಿತಕ್ಕಾಗಿ ವ್ಯಕ್ತಿಯ ಹಿತವನ್ನು ಬದಿಗಿರಿಸುತ್ತದೆ.

* * * *

ಮೇಲ್ಕಂಡ ವಿಚಾರವು ಸ್ಥಿರವಾದ ದಿಟವು. ಇದು ಸಂಸ್ಕೃತಿ ಪ್ರಿಯನನ್ನು ಧೈರ್ಯಗೆಡಿಸುತ್ತದೆ. ಸಂಸ್ಕೃತಿಯ ಬೆಳವಣಿಗೆಯು ಮಾನವನ ಸೌಖ್ಯವನ್ನು ಹೆಚ್ಚಿಸದಿದ್ದರೆ, ಅದರ ಬಗ್ಗೆ ಅಭಿಮಾನ ತಾಳುವುದು ಮೂರ್ಖತನದ ಮಾತು. ಸಂಸ್ಕೃತಿಯು ಮಾನವನ ಹಿತಕ್ಕೆ ವಿರುದ್ಧವಾಗಿ ವರ್ತಿಸುವ ಶಕ್ತಿಯೆಂದು ಸಿದ್ಧವಾದರೆ, ಅದು ನಿಜವಾಗಿ ದೂಷ್ಯವು. ಹಾಗಿದ್ದರೆ ನಾವು ನಮ್ಮೆಲ್ಲ ಶಕ್ತಿಯಿಂದ ಅದನ್ನು ಎದುರಿಸಬೇಕು. ' ಸಂಸ್ಕೃತಿಯನ್ನು ದೂರಿಕರಿಸಿರಿ, ಪ್ರಾಕೃತಿಕ ಸ್ಥಿತಿಗೆ ನಾವು ಮರಳುವಾ ' ಎಂದು ಎಲ್ಲರೂ ಕೂಗಬೇಕಾಗುತ್ತದೆ. ' ರೂಸೋ ' ಎಂಬಾತನು ಖಂಡಿತವಾಗಿಯೂ ಇಂತಹ ಸಿದ್ಧಾಂತಕ್ಕೇ ಒಂದಿದ್ದನು. ಮಾನವನ ಎಲ್ಲ ದುಃಖಕ್ಕೂ ಸಂಸ್ಕೃತಿಯೇ ಕಾರಣವೆಂದೂ, ಸುಸಂಸ್ಕೃತ ಮಾನವನು ಅಧೋಗತಿಗಿಳಿದ ಪಶುವೆಂದೂ ಅವನ ಅಭಿಪ್ರಾಯವಾಗಿತ್ತು.

ಈಹೊತ್ತು ನಾವು ಎಲ್ಲವನ್ನೂ ಸಾರಾಸಾರವಾಗಿ ವಿವೇಚಿಸಿದರೆ ಈ ಸುಪ್ರಸಿದ್ಧ ಲೇಖಕನ ವಿಚಾರಸರಣಿಯು ದೋಷಯುಕ್ತವಾಗಿದೆ ಎಂದು ಹೇಳಬೇಕಾಗುತ್ತದೆ. ಈವರೆಗೂ ಸಂಸ್ಕೃತಿಗಾಗಿ ವ್ಯಕ್ತಿಯ ಹಿತವು ದುರ್ಲಕ್ಷಿಸಲ್ಪಟ್ಟಿದ್ದರೂ ಅದು ಇನ್ನು ಮುಂದೆಯಾದರೂ ಹಾಗೇ ಆಗುತ್ತದೆಂದು ನಂಬುವ ನಿರಾಶಾವಾದವು ಯೋಗ್ಯವಲ್ಲ. ಈ ಜಗತ್ತಿನಲ್ಲಿ ಹೊಸತೆಂಬುದು ಯಾವುದೂ ಇಲ್ಲವೆಂದು ಹೇಳುವುದು ಬುದ್ಧಿವಂತಿಕೆಯ ದೌರ್ಬಲ್ಯದ ಕುರುಹು. ನಿಜವಾದ ಸಂಗತಿಗಳು ಇದಕ್ಕೆ ವಿರುದ್ಧವಾಗಿಯೇ ಇರುತ್ತವೆ. ಈಗಾದ ಬೆಳೆವಣಿಗೆಗಿಂತಲೂ ಸಂಸ್ಕೃತಿಯ ಬೆಳೆವಣಿಗೆ ಹೆಚ್ಚಿಗೆ ಆದಾಗ ಮಾನವನ ಶಕ್ತಿ ವಿಪುಲವಾಗುವುದು. ಅವನು ಅಂಥ ಶಕ್ತಿಯನ್ನು ವ್ಯಕ್ತಿಗೆ ಹಿತವಾಗುವಂತೆ ಉಪಯೋಗಿಸಿಕೊಳ್ಳುವನು. ಇಲ್ಲಿಯವರೆಗೆ ಸಮಾಜದ ಪರಿಪೂರ್ಣತೆಯನ್ನು ಗುರಿಯನ್ನಾಗಿಟ್ಟುಕೊಂಡಿದ್ದ ಸಂಸ್ಕೃತಿಯ ಯುಗವು, ವ್ಯಕ್ತಿಯ ಪರಿಪೂರ್ಣತೆಯನ್ನು ಧ್ಯೇಯವನ್ನಾಗಿ ಇಟ್ಟುಕೊಂಡ ಮುಂಬರುವ ಸಂಸ್ಕೃತಿಯುಗಕ್ಕೆ ಪೀಠಿಕೆ ಎಂದರಿತುಕೊಳ್ಳ

ಬೇಕು. ಇಂತಹ ಬದಲಾವಣೆಯೂ ಮೇಲ್ಮುರಗತಿಯು ಒಂಡಪಲುಗಾರಿ ಕೆಯ ಅವಸ್ಥೆಯಲ್ಲಿ ನಮ್ಮ ಕಣ್ಣುಮುಂದೆಯೇ ಆಗುತ್ತಲಿದೆ ಇದು ಹೇಗಾದರೂ ಸಮಾಧಾನಮಾಡಿಕೊಳ್ಳಲು ಸೂಚಿಸುವ ಆಶಾವಾದವಲ್ಲ. ಇದರಲ್ಲಿ ಸತ್ಯವಿದೆ ಎಂಬುದು ಕೆಲವೊಂದು ಮಾತುಗಳಿಂದ ಸ್ಪಷ್ಟವಾಗುತ್ತದೆ.

ಮೊದಲಿನದಾಗಿ, ಸಂಸ್ಕೃತಿಯು ತಾನು ಮುಟ್ಟಿದ ಉನ್ನತ ಶಿಖರದಿಂದ ಮರಳಿ ತನ್ನ ಪೂರ್ವದ ಕೀಳು ಸ್ಥಿತಿಗೆ ಕಳಚಿ ಬೀಳುತ್ತದೆಂದು ಭಾವಿಸಕೂಡದು. ಬೆಳೆದ ಮನುಷ್ಯನು ಬಾಲ್ಯಾವಸ್ಥೆಗೆ ಹೇಗೆ ಮರಳಿ ಬರಲಾರನೋ ಹಾಗೆಯೇ ಸುಸಂಸ್ಕೃತ ಮನುಷ್ಯನು ಮತ್ತೆ ಪ್ರಾಕೃತ ಮನುಷ್ಯನಾಗಲಾರನು. ಮಾನವನ ಬೆಳವಣಿಗೆ ಈಗಿನ ಸ್ಥಿತಿಯಲ್ಲಿಯೇ ಉಳಿಯುವುದೆಂದಾಗಲಿ, ಅಥವಾ ನಿಂತುಬಿಡುವುದೆಂದಾಗಲಿ ಹೇಳುವುದು ಸಾಧ್ಯವಿಲ್ಲನೆಂದ ಮೇಲೆ ಅದು ಮುಂದಕ್ಕೆ ಸಾಗುವುದೆಂದು ಭಾವಿಸದೆ ಗತ್ಯಂತರವಿಲ್ಲ. ಸಂಸ್ಕೃತಿಯ ಸ್ವರೂಪವು ಈಗಿನಂತೆಯೇ ಕಡೆಯವರೆಗೆ ಉಳಿಯುವದೆಂದಾಗಲಿ, ಅಥವಾ ಸಮಾಜ ಹಿತಕ್ಕಾಗಿ ವ್ಯಕ್ತಿಯು ಹಿತವನ್ನು ಇನ್ನು ಮುಂದೆಯೂ ಸಂಪೂರ್ಣ ದುರ್ಲಕ್ಷಿಸುವುದೆಂದಾಗಲಿ ಹೇಳಲು ಬರುವುದಿಲ್ಲ. ಪ್ರಾಣಿಸಾಮ್ರಾಜ್ಯದಲ್ಲಿ ಈ ತತ್ವವನ್ನೇ (ಸಮಾಜಕ್ಕಾಗಿ ವ್ಯಕ್ತಿಯ ದುರ್ಲಕ್ಷ್ಯ) ಪ್ರಕೃತಿಯು ಸಾಧಿಸಿಕೊಂಡಿದೆಂಬುದೇನೋ ನಿಜ. ಜಂತುಗಳಲ್ಲಿ ಒಳ್ಳೇ ಉನ್ನತಿಯನ್ನು ಪಡೆದ ಇರಿವೆ, ಜೇನ್ನೊಣಗಳೇ ಇದಕ್ಕೆ ದೃಷ್ಟಾಂತ. ಈ ಪ್ರಾಣಿಗಳಲ್ಲಿ ಕೆಲವೊಂದು ವಿಶಿಷ್ಟ ಗಂಡು ಹೆಣ್ಣುಗಳಿವೆ. ಅವು ಸ್ವತಂತ್ರ ಜನನೇಂದ್ರಿಯಗಳೆಂಬಂತೆಯೇ ಆಗಿಬಿಟ್ಟಿವೆ. ಉಳಿದ ವ್ಯಕ್ತಿ ಜಂತುಗಳು ಜನನೇಂದ್ರಿಯಗಳನ್ನು ಪಡೆಯಲಾರವು. ಆದುದರಿಂದ ಅವು ಸಮಾಜದ ಕೆಲಸಗಾರರಂತೆಯೋ, ಸೈನಿಕರಂತೆಯೋ ಅನುರಣಾಂತ ಕೆಲಸ ಮಾಡಬೇಕಾಗುತ್ತದೆ. ಇದಲ್ಲದೆ ಇವುಗಳಲ್ಲಿ ಗುಲಾಮರ ಒಡೆಯರಂತೆ ಕೆಲವು ಇರುತ್ತವೆ. ಇವುಗಳ ಸ್ವಯಂಪೋಷಣೆಗೆ ಬೇಕಾಗುವ ಇಂದ್ರಿಯಗಳು ಕುಂಠಿತವಾಗಿರುವುದರಿಂದ ತಮ್ಮ ಗುಲಾಮರಿಂದ ಪೋಷಿಸಲ್ಪಡದಿದ್ದರೆ ಇವು ಉಪವಾಸ ಬೀಳಬೇಕಾಗುತ್ತದೆ. ನಿಜವಾಗಿಯೂ ಇರಿವೆಗಳಲ್ಲಿ ಈ ರೂಢಿಯು ಸ್ಪಷ್ಟ ಕಂಡುಬರುತ್ತದೆ. ಕೆಲವೊಂದು ವೈಯಕ್ತಿಕ ಇರಿವೆಗಳು ಮಧುರ ರಸದಿಂದ ತುಂಬಲ್ಪಟ್ಟು ಹುತ್ತುಗಳಲ್ಲಿ ತೂಗುಹಾಕಲ್ಪಡು

ತ್ತವೆ. ಇಂಥವುಗಳನ್ನು ಜೇನುತುಪ್ಪದ ಸಂಗ್ರಹದಂತೆ ಉಳಿದ ಇರುವೆಗಳು ಉಪಯೋಗಿಸಿಕೊಳ್ಳಬಹುದು. ಇಂತು ಕೆಲವೊಂದು ಇರುವೆಗಳು ತಮ್ಮ ಸಮಾಜದ ಬೇರೆ ಕೆಲವು ಇರುವೆಗಳಿಗಾಗಿ ಜೀವವನ್ನೇ ತ್ಯಜಿಸುವವು. ಜೇನು ಹುಳಗಳಲ್ಲಿ ಗಂಡು ಜೇನುಹುಳಗಳ ವಿಷಯವೂ ಹೀಗೆಯೇ. ಇಂತಹ ದೃಷ್ಟಾಂತಗಳಿಂದ ವ್ಯಕ್ತಿಯ ಶಕ್ತಿ ಕುಂಠಿತವಾಗುತ್ತದೆಂದೂ, ಹಾಳಾಗು ತ್ತದೆಂದೂ ಸ್ಪಷ್ಟವಾಗುತ್ತದೆ. ಮಾನವ ಸಮಾಜಗಳಲ್ಲಿ ವ್ಯಕ್ತಿಗಳ ಶಕ್ತಿ ಕುಗ್ಗಿದ ದೃಷ್ಟಾಂತಗಳು ಅನೇಕವಾಗಿದ್ದರೂ ಶರೀರ ರಚನೆಯಲ್ಲಿ ಬದಲಾವ ಣೆಗಳಾದುದು ತೀರ ವಿರಲ. ಮಾನವರಲ್ಲಿ ಶರೀರ ರಚನೆಯ ವಿಷಯವು ಆನುವಂಶಿಕವಾದುದು. ಉಳಿದ ಜೀವಿಗಳಿಗಿಂತ ಮಾನವನ ಬೆಳವಣಿಗೆ ಅಪಾರವಾಗಿದೆ. ಸಂಪೂರ್ಣ ಮನುಷ್ಯತ್ವವನ್ನು ಪಡೆಯಬೇಕೆಂಬ ಬಲ ವಾದ ಆಂತರಿಕ ಇಚ್ಛೆ ಪ್ರತಿಯೊಂದು ಮನುಷ್ಯ ಪ್ರಾಣಿಯಲ್ಲಿಯೂ ಇರು ತ್ತದೆ. ವ್ಯಕ್ತಿಯ ಹಿತವನ್ನು ಪಾದಾಕ್ರಾಂತ ಮಾಡುವುದರಿಂದಲೇ ಸಮಾ ಜದ ಹಿತವು ಸಾಧಿಸಲ್ಪಡಬೇಕೆಂಬ ವಿಚಾರವನ್ನು ಮನುಷ್ಯನ ಚಿತ್ತ ವೃತ್ತಿಯು ಯಾವಾಗಲೂ, ಎಲ್ಲೆಡೆಗಳಲ್ಲಿಯೂ, ವಿರೋಧಿಸುತ್ತದೆ.

ಸಂಸ್ಕೃತಿ ಬೆಳೆದಂತೆ ಅದು ಒಳ್ಳೇ ತೀಕ್ಷ್ಣವಾದುದೂ, ಶಕ್ತಿವಂತ ವಾದುದೂ ಆಗುತ್ತದೆ. ಸಂಸ್ಕೃತಿಯಿಂದ ಮಾನವನ ಉಪಭೋಗದ ಶಕ್ತಿ ಬೆಳೆಯುತ್ತದೆ. ಅದರಂತೆಯೇ ದುಃಖವನ್ನು ತೀವ್ರವಾಗಿ ಮನಸ್ಸಿಗೆ ಹಚ್ಚಿ ಕೊಳ್ಳುವ ಗುಣವೂ ಬೆಳೆಯುತ್ತದೆ. ಅನುಕೂಲ ಪರಿಸ್ಥಿತಿಯಲ್ಲಿ ಸಂಸ್ಕೃತನು ಅಸಂಸ್ಕೃತನಿಗಿಂತ ಹೆಚ್ಚು ಸುಖಿಯಾಗಬಲ್ಲನು. ಆದರೆ ಪ್ರತಿಕೂಲ ಪರಿ ಸ್ಥಿತಿಯಲ್ಲಿ ಅವನು ಹೆಚ್ಚು ದುಃಖಿಯಾಗುವನು ಸಂಸ್ಕೃತಿ ಬೆಳೆದಂತೆ ಅವನಲ್ಲಿ ' ಜೀವನವೆಂದರೇನು ?' ' ಅದರ ಭವಿತವ್ಯವೇನು ? 'ಎಂಬ ವಿಚಾರ ಗಳು ಹೆಚ್ಚು ಬಲವತ್ತರವಾಗಿ ಉದ್ಭವಿಸಿ, ತನ್ನ ಸೌಖ್ಯವನ್ನು ಸಂಪೂರ್ಣ ವಾಗಿ ಸಾಧಿಸಿಕೊಳ್ಳಬಹುದಾದ ಇನ್ನೊಂದು ಲೋಕವನ್ನು ತಾನು ಪಡೆ ಯಬೇಕೆಂಬ ಉತ್ಕಟೇಚ್ಛೆ ಅವನಲ್ಲಿ ಅಂಕುರಿಸುವುದು. ಸಂಸ್ಕೃತಿಯಿಂದ ಸುಖ ಸಾಧಿಸಿಕೊಳ್ಳಲೂ ದುಃಖವನ್ನು ನಿವಾರಿಸಿಕೊಳ್ಳಲೂ ಶಕ್ತಿ ದೊರೆತ ಬಳಿಕ ಮಾನವನು ಸಮಾಜಕ್ಕಾಗಿ ವ್ಯಕ್ತಿಯ ಹಿತವನ್ನು ಕಾಲಬುಡಕ್ಕೆ ಹಾಕಿ ತುಳಿದರೆ ಸುಮ್ಮನಿದ್ದಾನೆಂದು ನಂಬುವುದು ಅಸಾಧ್ಯ. ನಮ್ಮ ಈ

ಆಧುನಿಕ ಯುಗದಲ್ಲಿಯೇ ಬಳ್ಳೀ ಹಿಂಸೆಗೆ ಆಧೀನರಾದ ಕೀಳು ವರ್ಗದವರು ತಮ್ಮ ಹಕ್ಕು ಬಾಧ್ಯತೆಗಳಿಗಾಗಿ ಹೋರಾಡುತ್ತಿರುವುದೂ, ಮನುಜವಂಶ ದಲ್ಲಿ ಬಹು ಪುರಾತನ ಕಾಲದಿಂದಲೂ ದಾಸ್ಯತ್ವದಲ್ಲಿದ್ದ ಸ್ತ್ರೀಯು ತನ್ನ ಸ್ವಾತಂತ್ರ್ಯಕ್ಕಾಗಿ ಹೆಣಗುತ್ತಿರುವುದೂ, ಈ ಅಭಿಪ್ರಾಯವನ್ನೇ ಎತ್ತಿಹಿಡ ಯುತ್ತವೆ. ಈ ಶತಮಾನದಲ್ಲಿ ಎಲ್ಲ ಕಡೆಗೂ ಕೇಳಬರುತ್ತಿರುವ 'ವ್ಯಕ್ತಿತ್ವ' ಮತ್ತು 'ಸಮಾಜತ್ವ' (ಸಮಾಜ ಸಮತಾವಾದ) ಎಂಬ ಈ ಎರಡು ದೊಡ್ಡ ಶಬ್ದಗಳು ಸುಖಕ್ಕಾಗಿ ಬೆಳೆಯುತ್ತಿರುವ ವ್ಯಕ್ತಿಯ ಇಚ್ಛೆಯ ದ್ಯೋತಕಗಳಾಗಿರುತ್ತವೆ.

ಈ ಎರಡು ಶಬ್ದಗಳು ಪರಸ್ಪರ ವಿರೋಧಿಗಳಾಗಿವೆ ಎಂದು ಜನರು ಸಾಮಾನ್ಯವಾಗಿ ತಿಳಿಯುವುದುಂಟು. ನಿಜವಾಗಿಯೂ ಹಾಗಿಲ್ಲ. ಅವು ಒಂದೇ ಬಗೆಯ ಪ್ರಯತ್ನವನ್ನು ಸೂಚಿಸುವ ಎರಡು ಭಿನ್ನ ಶಬ್ದಗಳು. ವ್ಯಕ್ತಿತ್ವವೆಂದರೆ ಪ್ರತಿಯೊಬ್ಬ ವ್ಯಕ್ತಿಯೂ ಬೇರೊಬ್ಬ ವ್ಯಕ್ತಿಯ ಹುಟ್ಟು ವೈರಿಯೆಂದೂ, ಏಕಾಕಿಯಾಗಿರುವವನೆಂದೂ, 'ಸಮಾಜತ್ವ' ವೆಂದರೆ ಬೇಸರ ವನ್ನುಂಟುಮಾಡುವ ಸಮಾನತೆ, ಏಕರೂಪತೆ ಎಂದೂ ತಿಳಿದರೆ ಈ ಎರಡೂ ಶಬ್ದಗಳೂ ಪರಸ್ಪರ ವಿರೋಧಿಗಳಾಗುವುದುಂಟು. ಆದರೆ ಈ ಶಬ್ದಗಳ ಇಂತಹ ವಿಕಾರವಾದ ಅರ್ಥಚಿತ್ರಗಳನ್ನು ಬದಿಗಿರಿಸಿ, ವ್ಯಕ್ತಿತ್ವವೆಂದರೆ ಸ್ವಾತಂತ್ರ್ಯ ಸಂಘಟನೆಯೆಂದೂ, ಸಮಾಜತ್ವವೆಂದರೆ ಶ್ರಮಸಂಘಟನೆ ಯೆಂದೂ, ಇಂತಹ ಶ್ರಮಸಂಘಟನೆಯಿಂದ ಯೋಗ್ಯ ಸಹಕಾರವುಂಟಾಗಿ ಪರಿಶ್ರಮದ ಪ್ರಮಾಣಕ್ಕನುಗುಣವಾಗಿ ಫಲವಿಭಾಗವಾಗುವುದೆಂದೂ ಭಾವಿಸಬೇಕು. ಸಮಾಜತ್ವದ ಅರ್ಥವನ್ನು ಈ ರೀತಿಯಾಗಿ ತಿಳಿದುಕೊಂಡರೆ ಅದು ಖಂಡಿತವಾಗಿಯೂ ವ್ಯಕ್ತಿತ್ವದ ಯೋಗ್ಯ ತಳಹದಿಯಾಗಿರುತ್ತದೆ. ಯಾಕೆಂದರೆ ಈ ನಮ್ಮ ಕಾಲದಲ್ಲಿಯಾದರೂ ಅದು ವ್ಯಕ್ತಿಗೆ ಯೋಗ್ಯ ಸ್ವಾತಂತ್ರ್ಯ ಸಾಮರ್ಥ್ಯಗಳನ್ನು ಒದಗಿಸಿಕೊಟ್ಟು ಅವನ ಸಂಪೂರ್ಣ ಬೆಳೆ-ವಣಿಗೆಗೆ ಸಹಾಯಕಾರಿಯಾಗುತ್ತದೆ. ಸಾಮಾಜಿಕ ಪ್ರಾಣಿಯಂತೆ ಮಾನ ವನು ಸಾಮಾಜಿಕ ರೀತಿಯಿಂದಲೇ ತನ್ನ ಗುರಿಯನ್ನು ಸಾಧಿಸಿಕೊಳ್ಳಬಲ್ಲನು. ಸಿರಿವಂತರು ವ್ಯಕ್ತಿತ್ವವನ್ನು ಸಮರ್ಥಿಸುವುದೂ, ಬಡವರು ಸಮಾಜತ್ವ ವನ್ನು ಎತ್ತಿಹಿಡಿಯುವುದೂ ಈಗ ಸುಲಭವಾಗಿ ತಿಳಿಯುತ್ತದೆ. ಇವೆರಡು

ಶಬ್ದಗಳನ್ನು ಬೇರೆಬೇರೆ ಉಪಯೋಗಿಸಿ ಅವುಗಳ ಅರ್ಥವನ್ನು ತಿಳಿದು ಕೊಳ್ಳಲು ಪ್ರಯತ್ನಿಸುವುದಕ್ಕಿಂತ, ಮಾನವವಂಶದ ಸೌಖ್ಯಕ್ಕಾಗಿ ಹೆಣಗುವು ದನ್ನು 'ಸಾಮಾಜಿಕ ವ್ಯಕ್ತಿತ್ವ' ವೆಂಬ ಶಬ್ದಪ್ರಯೋಗದಿಂದ ಅರಿತುಕೊಳ್ಳು ವುದು ಯೋಗ್ಯವಾಗಿ ಕಾಣುತ್ತದೆ.

ಸುಖಪಡೆಯಬೇಕೆಂಬ ಮಾನವನ ಕೋರಿಕೆ ಈವರೆಗೂ ನಿಷ್ಫಲ ವಾಗಿದೆ. ಯಾಕೆಂದರೆ ಅದನ್ನು ಅವನು ಪರಲೋಕದ ವಿಷಯವೆಂದು ಭಾವಿಸುತ್ತಾನೆ. ಇಂತಹ ನಂಬುಗೆ ಸಂಸ್ಕೃತಿಯ ಮೊದಲಿನ ಮೆಟ್ಟಲುಗಳ ಮೇಲಿದ್ದ ದುಃಖಿತನಾದ ವ್ಯಕ್ತಿಗೆ ಒಳ್ಳೇ ವರವಾಗಿತ್ತು. ಆದರೆ ಸಂಸ್ಕೃ ತಿಯ ಮೇಲ್ಮೆಟ್ಟಲುಗಳಲ್ಲಿದ್ದು ಈ ಜಗತ್ತಿಗೇ ಹೆಚ್ಚು ಮಹತ್ವವನ್ನಿತ್ತು ಮೈಮುರಿದು ದುಡಿಯುವ ವ್ಯಕ್ತಿಗೆ ಇದು ತುಂಬ ತಡೆಯನ್ನುಂಟುಮಾಡು ತ್ತದೆ. ಇತ್ತಿತ್ತಲಾಗಿ ಈ ನಂಬುಗೆ ಮಾಯವಾಗಿ ಅದರ ಸ್ಥಳದಲ್ಲಿ ಈ ಜಗತ್ತಿ ನಲ್ಲಿಯ ವ್ಯಕ್ತಿಯ ದುಃಖಕ್ಕೆ ಸಾಮಾಜಿಕ ಅವ್ಯವಸ್ಥೆಯೇ ಕಾರಣವೆಂಬ ದೃಢ ನಂಬಿಗೆ ಅಂಕುರಿಸಹತ್ತಿದೆ. ಸಾಮಾಜಿಕ ಸುವ್ಯವಸ್ಥೆಯಿಂದ ಇಂತಹ ದುಃಖ ಕೊನೆಗೊಳ್ಳಬಹುದೆಂದೂ ನಂಬಬಹುದಾಗಿದೆ. ವ್ಯಕ್ತಿಯು ಇಲ್ಲಿ ಹೆಚ್ಚೆಚ್ಚು ವಿಪತ್ತನ್ನು ಕಾಣಬಹುದಾದಂತೆ, ಸಾಮಾಜಿಕ ಸುಧಾರಣೆಗಾಗಿ ಹೆಚ್ಚೆಚ್ಚು ಪ್ರಯತ್ನಿಸುತ್ತಾನೆ. ಹಳೆಯ ಸಮಾಜಧರ್ಮವು ಮಾನವನನ್ನು ಸಮಾಧಾನಪಡಿಸಲು, ಶಾಂತಿಪಡಿಸಲು ಮಾತ್ರ ಸಮರ್ಥವಾಗಿತ್ತು. ಆದರೆ ಅವನಲ್ಲಿ ಹೊಸ ಹುರುಪನ್ನೂ ಹೊಸ ಆಸೆಯನ್ನೂ ತುಂಬಲು ಈ ಹೊಸ ಧರ್ಮವು ಮಾನವನ ದುಃಖವನ್ನು ಉಪಯೋಗಿಸಿಕೊಳ್ಳುವುದಲ್ಲದೆ, ಅವ ನನ್ನು ಹೊಸ ಕೃತಿಗಳಿಗಾಗಿ ಪ್ರಚೋದಿಸಲೂ ಉಪಯೋಗಿಸಿಕೊಳ್ಳುತ್ತದೆ. ಅದರಿಂದಲೇ ಮಾನವನ ಜೀವನದಲ್ಲಿ ನಿಜವಾದ ಪ್ರಗತಿಯಾಗುತ್ತದೆ.

ಈ ನಮ್ಮ ಯುಗದಲ್ಲಿ ಸುಖಸಂಪಾದನೆಗಾಗಿ ಹೋರಾಡುವ ಜೀವಿ ಗಳ ಮಾರ್ಗದಲ್ಲಿ ಅನೇಕ ಎಡರು-ತೊಡರುಗಳು ಬರುವುದನ್ನು ನಾವು ಕಾಣುತ್ತೇವೆ. ಸಂಸ್ಕೃತಿಯು ವ್ಯಕ್ತಿಯ ಸುಖಸಂಪಾದನೆಯ ವಿಷಯದಲ್ಲಿ ಇಲ್ಲಿಯವರೆಗೆ ಇಷ್ಟೊಂದು ಕಡಿಮೆ ಪ್ರಮಾಣದಿಂದ ಸಹಾಯಕಾರಿಯಾದು ದರ ಮುಖ್ಯ ಕಾರಣವೇನೆಂದರೆ ಜಗತ್ತಿನ ಬಹುಜನ ಸಮಾಜಗಳು ಅಧಿಕಾರ ಸಂಪನ್ನ ಅಲ್ಪಸಂಖ್ಯಾಕರಿಂದ ಹತ್ತಿಕ್ಕಲ್ಪಟ್ಟು ತಮ್ಮ ಗುರಿಯನ್ನು ಮರೆತು

ಬಿಟ್ಟು ತಪ್ಪುಹಾದಿಯನ್ನು ಹಿಡಿಯುವಂತೆ ಮಾಡಲ್ಪಟ್ಟಿದು. ಈಗ ಈ ಬಹುಜನರು ತಮ್ಮ ನಿದ್ರಾವಸ್ಥೆಯಿಂದ ಎಚ್ಚತ್ತು, ಸುಸಂಘಟಿತರಾಗಿ ತಮ್ಮ ಹಕ್ಕು ಬಾಧ್ಯತೆಗಳನ್ನು ಪಡೆಯಲು, ಶಕ್ತಿಸಂಪನ್ನರಾಗಲು ಪ್ರಯತ್ನಿ ಸುತ್ತಿರುವದು ಬಳ್ಳೇ ಶುಭಚಿನ್ಹವು. ದಬ್ಬಾಳಿಕೆ, ಒತ್ತಾಯಗಳಿಗೊಳಗಾದ ವರು ಇಂತಹ ದಬ್ಬಾಳಿಕೆ ಕೊನೆಗೊಳ್ಳಬೇಕಾದರೆ ಜೀವನಸಂಗ್ರಾಮವು ಮಾನವಧರ್ಮವನ್ನನುಸರಿಸಿ ಸಾಗಬೇಕೆಂದು ಭಾವಿಸುತ್ತಾರೆ. ಅಂತರ-ರಾಷ್ಟ್ರೀಯ ಸಂಘಟನೆಗಳಿಂದಲೇ ಇಂತಹ ಫಲವನ್ನು ಪಡೆಯುವುದು ಸಾಧ್ಯವೆಂದು ಅವರು ನಂಬುತ್ತಾರೆ. ಇದನ್ನು ಸಾಧಿಸಲು ಕೆಳಗಿನ ವರ್ಗ ಗಳೇ ಸಹಾಯಕಾರಿಯಾಗುತ್ತವೆ. ಬೇರೆಬೇರೆ ರಾಷ್ಟ್ರಗಳ ನಡುವೆ ಯುದ್ಧ ಗಳಿಂದ ಸಂಪರ್ಕವುಂಟಾಗುವುದರ ಬದಲು ವ್ಯಾಪಾರದಿಂದ ಆಗುತ್ತಲಿದೆ. ಇದರಿಂದ ಜಗತ್ತಿನ ಎಲ್ಲ ರಾಷ್ಟ್ರಗಳು ಒಂದೇ ಒಂದು ಶ್ರಮಸಂಘಟನೆ ಯಾಗಿ ಪರಿಣಮಿಸುವವು. ಇಂತಹ ಶ್ರಮಸಂಘಟನೆಯಲ್ಲಿ ಸಮಾಜದ ಹಿತಕ್ಕಾಗಿ ವ್ಯಕ್ತಿಯ ಹಿತವನ್ನು ದುರ್ಲಕ್ಷಿಸುವ ಆವಶ್ಯಕತೆಯುಂಟಾಗುವು ದಿಲ್ಲ. ಸರಕಾರವೇ ವ್ಯಕ್ತಿಯ ಹಿತದ ಹೊಣೆಯನ್ನು ಹೊರುತ್ತದೆ.

ಇಂತು ಶಾಂತಮಯವಾದ ಶ್ರಮಸಂಘಟನೆಯ ಅಭಿವೃದ್ಧಿಯಾದರೆ, ಮತ್ತು ಅದರಲ್ಲಿ ಜಗತ್ತಿನ ಎಲ್ಲ ರಾಷ್ಟ್ರಗಳೂ ಭಾಗಿಗಳಾದರೆ, ಸಂಸ್ಕೃ ತಿಯ ಮುಖಾಂತರ ವ್ಯಕ್ತಿಯ ಸುಖಸಾಧನೆಯಲ್ಲಿ ವಿಚಿತ್ರ ಬದಲಾವಣೆ ಯಾಗುತ್ತದೆ. ಹಿಂದೆ ಹೇಳಿದಂತೆ ಗುಂಪುಗಳ ಪರಸ್ಪರ ಪ್ರಭಾವವೇ ಸಂಸ್ಕೃ ತಿಯ ಮುನ್ನಡೆಗೆ ಪ್ರಬಲ ಕಾರಣ. ಮೊದಲು ವಿರೋಧಿಗಳಾಗಿದ್ದ ರಾಷ್ಟ್ರ ಗಳು ಪರಸ್ಪರ ಸಹವಾಸ ಸಂಬಂಧಗಳನ್ನು ಉಂಟುಮಾಡಿಕೊಂಡೊಡನೆಯೆ ಪ್ರಗತಿಗೆ ಬಲವಾದ ಶಕ್ತಿಯುಂಟಾಗುತ್ತದೆ. ಇತ್ತೀಚಿನ ಶತಮಾನಗಳಲ್ಲಾದ ಪ್ರಗತಿಯ ತೀವ್ರ ಮುನ್ನಡೆಗೆ, ಬಹು ಮುಂದುವರಿದ ರಾಷ್ಟ್ರಗಳು ಒಂದರ ಬಳಿಗೊಂದು ಬಂದು ಬಹು ತೀವ್ರವಾಗಿ ಸಂಪರ್ಕವನ್ನು ಹೊಂದಿದುದೇ ಕಾರಣ. ಇದರಿಂದ ಇಡೀ ಜಗತ್ತಿನ ದ್ವಾರಗಳೇ ಅವರಿಗಾಗಿ ತೆರೆದಿಟ್ಟಂತಾ ದವು. ಆದರೆ ಸಂಸ್ಕೃತಿಯು ಇಷ್ಟೊಂದು ತೀವ್ರವಾಗಿ ಮುಂದೆ ಸಾಗಿದರೆ ವ್ಯಕ್ತಿಗಳ ಪರಿಸ್ಥಿತಿಯಲ್ಲಿ ಕೋಲಾಹಲವುಂಟಾಗಿ ವ್ಯಕ್ತಿಗಳಿಗೆ ಅಷ್ಟೊಂದು ಹಿತವಾಗುವುದಿಲ್ಲ. ಈಗ ಜಗತ್ತಿನ ಎಲ್ಲ ಭಾಗಗಳೂ ಮಾನವನಿಗೆ ಸಂಪೂ

ರ್ಣವಾಗಿ ಗೊತ್ತಾಗಿದ್ದುದರಿಂದ, ಇನ್ನು ಯಾವ ಹೊಸ ಭಾಗದ ಸಂಶೋಧನವೂ ಆಗುವ ಸಂಭವವಿಲ್ಲ. ಆದುದರಿಂದ ಯಾವ ಹೊಸ ಗೊಂದಲವೂ ಮಾನವನಲ್ಲಿ ಆಗುವ ಸಂಭವವಿಲ್ಲವೆಂದು ನಾವು ಭಾವಿಸಬಹುದಾಗಿದೆ. ಜಗತ್ತಿನ ಹೊಸ ಭಾಗಗಳ ಸಂಶೋಧನದಿಂದ ಬಂದ ಮಾನವನ ಅನುಭವಗಳು ಪರಿಪೂರ್ಣಾವಸ್ಥೆಯನ್ನು ಪಡೆಯಬೇಕಾದರೆ ಇನ್ನೂ ಬಹು ಕಾಲವು ಗತಿಸಬೇಕು. ಇಂತಹ ಅನುಭವಗಳು ದೃಢವಾದೊಡನೆ ವ್ಯಕ್ತಿಗಳಿಗೆ ಅತ್ಯಂತ ಹಿತವಾಗುವುದು.

'ಮಾಲ್ಥಸ್' ನ ಕಾಲದಿಂದ ಇಲ್ಲಿಯವರೆಗಿನ ಪ್ರಸಿದ್ಧ ಸಮಾಜ ಶಾಸ್ತ್ರಜ್ಞರು ಸುಧಾರಿಸಿದ ರಾಷ್ಟ್ರಗಳ ದುಃಖದ ಬಹು ಭಾಗಕ್ಕೆ ಜನ ವಸತಿಯ ಹೆಚ್ಚಳವೇ ಕಾರಣವೆಂದು ಅಭಿಪ್ರಾಯಪಡುತ್ತಾರೆ. ಸಂಸ್ಕೃತಿಯಿಂದ ಸಂಪಾದಿಸಿದ ಭಾಗ್ಯವನ್ನೆಲ್ಲ ಮಾನವನು ಪ್ರಜೋತ್ಪಾದನವನ್ನು ಬೆಳೆಸುವದಕ್ಕಾಗಿ ಉಪಯೋಗಿಸಿಕೊಂಡರೆ, ಅದರಿಂದ ವ್ಯಕ್ತಿಜೀವನದ ಬೆಳೆವಣಿಗೆ ಕುಗ್ಗುವದೆಂಬುದು ಸಹಜ. ಯುರೋಪ, ಅಮೇರಿಕಾ, ಹಿಂದುಸ್ಥಾನ, ಚೀನ ಮುಂತಾದ ಜಗತ್ತಿನ ಬೇರೆಬೇರೆ ಭಾಗಗಳಲ್ಲಿ ಜನಸಂಖ್ಯೆ ವಿಪರೀತ ಬೆಳೆಯುಹತ್ತಿದೆ. ಇದರಿಂದ ಕಷ್ಟಪರಂಪರೆಗಳು ಬಂದೊದಗುವವೆಂಬುದರಲ್ಲಿ ಸಂದೇಹವಿಲ್ಲ. ಮಕ್ಕಳಿಗೆ ಯೋಗ್ಯ ವಿದ್ಯಾಭ್ಯಾಸವನ್ನು ಮಾಡಿಸಲು ಸಾಮರ್ಥ್ಯವಿಲ್ಲದ, ಅವರಿಗೆ ಯೋಗ್ಯ ಜೀವನಕ್ರಮವನ್ನು ಉಂಟುಮಾಡಿಕೊಡಲು ಶಕ್ತಿಯಿಲ್ಲದ, ಅನೇಕ ತಂದೆತಾಯಿಗಳು ಅನೇಕ ಮಕ್ಕಳುಗಳನ್ನು ಹಡೆಯುತ್ತಾರೆ. ಇದರಿಂದ ತಂದೆತಾಯಿಗಳೂ ಅವರ ಮಕ್ಕಳುಗಳೂ ದುರ್ಮಾರ್ಗಿಗಳಾಗಬಹುದೆಂಬ ಭಯ ಎಲ್ಲ ಸುಸಂಸ್ಕೃತ ರಾಷ್ಟ್ರಗಳಲ್ಲಿ ಉಂಟಾಗಿದೆ. ಆದುದರಿಂದ ಇಂತಹ ರಾಷ್ಟ್ರಗಳಲ್ಲಿ ಯೋಗ್ಯವಾದ ರೀತಿಯಲ್ಲಿ ಸಂತತಿ-ಸಂಯಮನಮಾಡುವ ಪ್ರಯತ್ನಗಳು ನಡೆದಿವೆ. ಸಂಸ್ಕೃತಿ-ಸೌಖ್ಯಗಳ ಸಂಬಂಧದ ವಿಷಯದಲ್ಲಿ ಇದೊಂದು ಮಹತ್ವದ ಸಂಗತಿ. ಸಂತತಿ ನಿರ್ಮಾಣವು ಮಾನವ ವಂಶದ ಹಿತವನ್ನು ಲಕ್ಷಿಸಿ ಸಾಗಬೇಕೆಂಬ ಮಾತು ಇದರಲ್ಲಿ ಅಡಕವಾಗಿದೆ. ಹೀಗಾದರೆ ಅಪಾರ ದುಃಖವನ್ನು ತಪ್ಪಿಸಿಕೊಳ್ಳಬಹುದು.

ಇಂತು ವೈಯಕ್ತಿಕ ಸೌಖ್ಯ ಸಂಪಾದನೆಗಾಗಿ ಅನೇಕ ಶಕ್ತಿಗಳು

ಕರ್ಮಭೂಮಿಗೆ ಬಂದಿಳಿದಿವೆ. ಮತ್ತು ಅವನ್ನು ವಿರೋಧಿಸುವ ಎಲ್ಲ
ಎಡರು ತೊಡರುಗಳನ್ನು ಯಶಸ್ವಿಯಾಗಿ ಹೊಡೆದೋಡಿಸಹತ್ತಿವೆ.

ಇದೇ ಸಮಯದಲ್ಲಿ ವಿಜ್ಞಾನಕ್ಷೇತ್ರದಲ್ಲಿ ' ಸಂಸ್ಕೃತಿಯ ಚಳವಳಿ '
ಎಂಬ ಒಳ್ಳೇ ಮಹತ್ವದ ಸಂಗತಿ ಸಂಭವಿಸಿದೆ. ಸೃಷ್ಟಿಯಲ್ಲಿ ಎಲ್ಲ ಕಡೆಯ
ಲ್ಲಿಯೂ ಜಾಗ್ರತಾವಸ್ಥೆಯ ಪೂರ್ವದಲ್ಲಿ ಅಜಾಗ್ರತಾವಸ್ಥೆ ಇರುವದು
ಕಂಡುಬರುವಂತೆ, ಸಾಂಸ್ಕೃತಿಯ ಚಳವಳಿಯೂ ಈವರೆಗೆ ಅಜಾಗ್ರತವಾಗಿ
ದ್ದಿತು. ಆದುದರಿಂದಲೇ ಉದಾಸೀನವಾಗಿತ್ತು. ಆದರೆ ಬೆಳವಣಿಗೆ ಮುಂದೆ
ಮುಂದೆ ಸಾಗಿದಂತೆ, ಮಾನವ ವಂಶಕ್ಕೆ ತನ್ನ ಅರಿವು ತನಗಾಗುವ ಸ್ಥಿತಿ
ಬರಲೇಬೇಕು. ಸಮಾಜಶಾಸ್ತ್ರದ ಉದಯದೊಡನೆ ಈ ಸಂಗತಿ ಸಂಭವಿ
ಸಿತು. ಆದುದರಿಂದ ಈಗ ಜಗತ್ತಿನಲ್ಲಿ ಹೊಸ ಕಾಲವು ಪ್ರಾರಂಭವಾದಂತಾ
ಗಿದೆ. ಮಾನವನ ಅಜ್ಞಾನವು ಅಳಿದುಹೋಗಿ, ಅವನ ಗುರಿಯ ಅರಿವು
ಅವನಿಗಾಗಿ, ಅದನ್ನು ಸಾಧಿಸುವದಕ್ಕಾಗಿ ಉದ್ದೇಶಪೂರ್ವಕ ಶ್ರಮದಿಂದ
ಅವನು ಹೆಣಗಾಡುತ್ತಲಿದ್ದಾನೆ. ಈವರೆಗೆ ಪ್ರಕೃತಿಯ ಕುರುಡು ಶಕ್ತಿ
ಯಂತೆ ಕೆಲಸ ಮಾಡಿದ ಮನುಷ್ಯತ್ವವು ಈಗ ಕಣ್ದೆರೆದು ನೋಡಬಹುದಾ
ಗಿದೆ ಕೊಳ್ಳಗಳಲ್ಲಿ ಕಗ್ಗತ್ತಲೆ ಇನ್ನೂ ವಿಸ್ತಾರವಾಗಿ ಹಬ್ಬಿದ್ದರೂ, ಅರು
ಣೋದಯದ ಹೊಂಬಣ್ಣದಲ್ಲಿ ಪರ್ವತಶಿಖರಗಳು ಕಂಗೊಳಿಸಹತ್ತಿವೆ.
ಸಾಮಾಜಿಕಬುದ್ಧಿ ಮತ್ತೆ ತನ್ನ ತಾನರಿಯಹತ್ತಿದೆ. ಆದುದರಿಂದಸಂಸ್ಕೃತಿಯ
ಚಳವಳಿಯ ಸ್ವರೂಪ ಅವಶ್ಯವಾಗಿ ಬದಲಾಗಲೇಬೇಕಾಗುತ್ತದೆ. ಮಾನ
ವನಿಗೆ ಈ ಬಗೆಯ ಬೆಳವಣಿಗೆಯ ಅರಿವು ಇಲ್ಲದಿರುವ ವರೆಗೆ, ಎಲ್ಲ ರೂಪಾಂ
ತರಗಳೂ ತನ್ನ ವಿಧಿಲಿಖಿತ ಎಂದು ತಿಳಿದುಕೊಳ್ಳುವದು ಸ್ವಾಭಾವಿಕವಾ
ಗಿತ್ತು. ಈಗ ವಿಜ್ಞಾನದ ಸಹಾಯದಿಂದ ಅವನು ಈ ಚಳವಳಿಯನ್ನು
ನೆಚ್ಚೈಚ್ಚು ತನ್ನ ಹಿತಕ್ಕಾಗಿ ಮಾರ್ಪಡಿಸಿಕೊಳ್ಳಬಹುದು. ಪದಾರ್ಥವಿಜ್ಞಾ
ನದಿಂದ ಮನುಷ್ಯನು ಸೃಷ್ಟಿಯ ಮೇಲೆ ತನ್ನ ಪ್ರಭುತ್ವವನ್ನು ನಡೆಸುತ್ತಿರು
ವಂತೆ, ಸಂಸ್ಕೃತಿ–ವಿಜ್ಞಾನದ ಸಹಾಯದಿಂದ ಅದರಿಂದುಂಟಾದ ಫಲವನ್ನು
ತನ್ನ ಹಿತಕ್ಕಾಗಿಯೇ ಉಪಯೋಗಿಸಿಕೊಳ್ಳುವ ಶಕ್ತಿಯನ್ನು ಪಡೆಯುತ್ತಾನೆ.
ಈಗ ಮನುಷ್ಯನು ಎಲ್ಲವೂ ತನ್ನ ವಿಧಿಲಿಖಿತವೆಂದು ಹೇಳುತ್ತ ಸುಮ್ಮನೆ

ಕೈಮುಚ್ಚಿಕೊಂಡು ಕುಳ್ಳಿರದೆ, ತನ್ನ ಗುರಿಯನ್ನರಿತುಕೊಂಡು ತನ್ನ ದೈವ ವೆಂಬ ಸೋಪಾನವನ್ನೇರಲು ಸಾಮರ್ಥ್ಯ ಪಡೆಯುತ್ತಾನೆ.

* * * *

ಈವರೆಗಿನ ವಿಚಾರಗಳ ತಾತ್ಪರ್ಯವೇನೆಂದರೆ-ಮಾನವ ವಂಶವು ಇಲ್ಲಿಯವರೆಗೆ ಜ್ಞಾನ-ಸಂಕಲ್ಪಗಳಿಲ್ಲದೆ ಮೇಲ್ತರಗತಿಯ ಸಂಘಟನೆಗ ಗಳನ್ನು ಸುತ್ತುವರಿದು ಸುದೀರ್ಘ ಪ್ರಯತ್ನದಿಂದ ಮಾಡಿಕೊಂಡು ಬಂದಿದೆ. ಲಕ್ಷಾಂತರ ವರುಷಗಳ ವಿಸ್ತರಣ ಪಡೆದ ಈ ಮನ್ವಂತರದಲ್ಲಿ ಸಮಾಜವು ಪರಿಪೂರ್ಣತೆಯ ಕ್ರಮವನ್ನು ಅನುಸರಿಸಿದೆ. ವ್ಯಕ್ತಿಯ ಹಿತವೇ ಅದರ ಫಲ. ಈ ಕ್ರಮದ ಪರಿಣಾಮವಾಗಿ ಹೆಚ್ಚೆಚ್ಚು ಶಕ್ತಿಯುಳ್ಳ, ಹೆಚ್ಚೆಚ್ಚು ತಿಳಿವಳಿಕೆಯುಳ್ಳ ಸಂಘಗಳನ್ನು ಮಾನವನು ಸಂಘಟಿಸಿಕೊಂಡಿದ್ದಾನೆ. ಇಂತು ಮಾನವನು ತನ್ನ ಜೀವಿತದ ಅರಿವನ್ನು ಪಡೆಯಬಹುದಾದ ಮಟ್ಟಕ್ಕೆ ಏರಿದ್ದಾನೆ. ಇದುವರೆಗೆ ಬಹು ಪ್ರಯಾಸದಿಂದ ಬೆಳವಣಿಗೆಯನ್ನು ಪಡೆದ ಮಾನವನು ಸಂಸ್ಕೃತಿಯ ಕೈಗೊಂಬೆಯಾಗಿದ್ದು ಈಗ ತನ್ನ ಜ್ಞಾನದಿಂದ, ಅಪಾರ ಶಕ್ತಿಯಿಂದ ಸಂಸ್ಕೃತಿಯ ಫಲವನ್ನು ತನ್ನ ಹಿತಕ್ಕಾಗಿ ಬಳಸಿಕೊಳ್ಳುವ ಶಕ್ತಿಯನ್ನು ಸಂಪಾದಿಸಿದ್ದಾನೆ. ಎಂಬ ಚಿಹ್ನಗಳು ಎಲ್ಲೆಲ್ಲಿಯೂ ಕಂಡುಬರುತ್ತವೆ. ಮಾನವನ ಪ್ರಗತಿಯ ಇದೊಂದು ಹೊಸ ಮನ್ವಂತರ ವೆಂದೇ ಹೇಳಬಹುದು.

ಈ ಎರಡನೆಯ ಅಥವಾ ಹೊಸ ಮನ್ವಂತರವು ಲಕ್ಷಾಂತರ ಇಲ್ಲವೆ ಕೋಟ್ಯಂತರವರುಷಗಳವರೆಗೆ ಬಾಳಬಹುದೆಂಬುದಕ್ಕೆ ಜ್ಯೋತಿಶ್ಶಾಸ್ತ್ರದ,ಭೂ ಗರ್ಭಶಾಸ್ತ್ರದ ಕಾರಣಗಳೇ ಸಾಕ್ಷಿಯಾಗಿವೆ. ಇತ್ತೀಚಿನ ಎರಡು ಸಾವಿರ ವರುಷಗಳಲ್ಲಾದ ಅಪಾರ ಪ್ರಗತಿಯನ್ನು ನೋಡಿದರೆ, ಇನ್ನು ಮುಂದೆ ಇದಕ್ಕೂ ಹೆಚ್ಚಿನ ಪ್ರಗತಿಯಾಗುವುದೆಂದೂ, ಮಾನವನು ಇನ್ನೂ ಹೆಚ್ಚಿನ ಉನ್ನತಿಗೇರಿ ಸಂಸ್ಕೃತಿಯ ಪರಿಪೂರ್ಣಾವಸ್ಥೆಯನ್ನು ತಲುಪುವನೆಂದೂ ಭಾವಿಸಲು ಆಧಾರಗಳಿವೆ. ಮುಂಬರುವ ಯುಗದಲ್ಲಿ ಸಂಸ್ಕೃತಿ ಸಂಪೂರ್ಣ ವಿಕಾಸವನ್ನು ಪಡೆದಾಗ ಮಾನವನಿಗೆ ಅದರ ಯೋಗ್ಯ ಬೆಲೆ ತಿಳಿಯುವುದು.

* * * *

ಸಮಾಜಶಾಸ್ತ್ರದ ಬೆಳಕಿನಲ್ಲಿ ನಾವು ಸಂಸ್ಕೃತಿಯ ಬೆಳವಣಿಗೆಯನ್ನು ಪರಿಶೀಲಿಸಿದರೆ, ನಿಷ್ಪಕ್ಷಪಾತಬುದ್ಧಿಯಿಂದಲೂ ಶಾಂತರೀತಿಯಿಂದಲೂ ಅದರ ವಿಮರ್ಶೆ ಮಾಡಿದರೆ, ನಮ್ಮನ್ನು ಯಾವ ನಿರಾಶಾವಾದಿ ನಿರ್ಣಯಕ್ಕೂ ಅದು ಒಯ್ಯುವುದಿಲ್ಲೆಂದು ಖಂಡಿತವಾಗಿ ಹೇಳಬಹುದು. ತದ್ವಿರುದ್ಧವಾಗಿ ಈ ಅಪಾರವಾದ ಮಾನವವಂಶದ ನಾಟಕದಲ್ಲಿ ಮಾನವನ ಅಭ್ಯುದಯ ವನ್ನು ಸಾಧಿಸುವ ಗುಪ್ತ ಪ್ರಯತ್ನವೇ ನಡೆದಿದೆ ಎಂಬ ಭಾವನೆಯಾಗು ತ್ತದೆ. ಒಂದು ಗುರಿಯನ್ನು ಸಾಧಿಸಲು ಕೆಲವೊಂದು ಸಾಧನಗಳು ಬೇಕು. ಇಂತಹ ಸಾಧನಗಳನ್ನು ನಿರ್ಮಿಸಿಕೊಂಡಾದ ಮೇಲೆಯೇ ಗುರಿಯನ್ನು ಸಾಧಿಸುವುದು ಸಾಧ್ಯ. ಉದಾಹರಣೆಗಾಗಿ ನಾವು ಒಂದು ಕೊಡಲಿಯನ್ನು ನಿರ್ಮಿಸುವ ವರೆಗೆ ನಾವು ಅದರ ದಾಸಾನುದಾಸರಂತೆ ತೋರಬಹುದು. ಅದನ್ನು ನಿರ್ಮಿಸಿದ ಬಳಿಕ ಕೊಡಲಿಯಿಂದ ಸಾಧಿಸಬೇಕಾದ ಕೆಲಸಕ್ಕೆ ಅದೊಂದು ಸಾಧನನೆಂದೂ, ಆ ಸಾಧನದ ಮೇಲೆ ನಮ್ಮ ಪ್ರಭುತ್ವ ಉಂಟಾ ಗುತ್ತದೆಂದೂ ನಾವು ಸಹಜವಾಗಿ ನೋಡಿದ ಮಾತಾಗಿದೆ. ಮೊದಲು ಕೆಲ ವೊಂದು ಸಾಧನಗಳಿಗೆ ನಾವು ದಾಸರಾಗಿದ್ದು ಅವು ಪರಿಪೂರ್ಣತೆಯನ್ನು ಪಡೆದ ಮೇಲೆ ನಾವು ಅವುಗಳ ಪ್ರಭುಗಳಾಗುತ್ತೇವೆ. ಸಂಸ್ಕೃತಿಯ ವಿಷ ಯದಲ್ಲಿಯೂ ಇದೇ ರೀತಿ.

ಇದೀಗ ಸಂಸ್ಕೃತಿ ಸಾಕಷ್ಟು ಬೆಳೆದಿದೆ ಎಂದು ಹೇಳಬಹುದು. ಆದು ದರಿಂದ ಅದರ ಪ್ರಭುತ್ವ ನಮ್ಮ ಕೈಸೇರಿದೆ. ಈಗ ನಾವು 'ಪ್ರಾಕೃತಿಕ ಸ್ಥಿತಿಗೆ ಮರಳುವಾ' ಎಂದೆನ್ನುವುದರ ಬದಲು 'ಸಂಸ್ಕೃತಿಯ ಪರಿಪೂರ್ಣತೆ ಯನ್ನು ಮುಟ್ಟುವಾ' ಎಂದು ಕೂಗಬೇಕು. ಇಲ್ಲಿಯವರೆಗೆ ಮಾನವನು ಸಂಸ್ಕೃತಿಯ ಮುಖಾಂತರ ಸಂಪಾದಿಸಿದ ಅಪಾರ ಶಕ್ತಿಯನ್ನು ತನ್ನ ಉನ್ನತಿ ಗಾಗಿ ಉಪಯೋಗಿಸದೆ ಹಾಗೆಯೇ ಬಿಟ್ಟುಬಿಟ್ಟರೆ ಅದು ಅತ್ಯಂತ ತಿಳಿಗೇಡಿ ತನದ ಮಾತಾಗುವುದು. ತನ್ನ ಆಯುಷ್ಯದ ಅರ್ಧವನ್ನು ಸಂಪತ್ತಿನ ಸಂಪಾದನೆಗಾಗಿ ಉಪಯೋಗಿಸಿ, ಆ ಮೇಲೆ ಅದನ್ನು ಸಂಪಾದಿಸಲು ತನ ಗಾದ ಕಷ್ಟನಷ್ಟಗಳಿಂದ ಎದೆಗುಂದಿ, ಆ ಸಂಪತ್ತನ್ನು ಉಪಭೋಗಿಸದೆ ಸಿಟ್ಟಿನಿಂದ ತೂರೆದು ಬಿಡುವ ಮೂರ್ಖ ಮಾನವನಂತೆ, ಇಲ್ಲಿಯ ವರೆಗೆ

ಲಕ್ಷಾಂತರ ವರುಷಗಳಿಂದ ಸಂಸ್ಕೃತಿಯನ್ನು ಬೆಳೆಸಿ ಈಗ ಅದರ ಲಾಭ ಪಡೆಯದೆ ಬಿಟ್ಟುಬಿಡುವ ಮಾನವನ ಸ್ಥಿತಿಯಾಗುವುದು.

ಸಂಸ್ಕೃತಿಯಿಂದಲೇ ಮಾನವನು ತನ್ನ ಧ್ಯೇಯವನ್ನು ಸಾಧಿಸಬಲ್ಲನು. ಇದಕ್ಕಾಗಿ ನಾವು ನಮ್ಮ ಸರ್ವ ಶಕ್ತಿಯನ್ನು ಕೇಂದ್ರೀಕರಿಸಿ ಕೆಲಸದಲ್ಲಿ ತೊಡಗಬೇಕು. ಇಂತಹ ಆಶಾವಾದಿಗಳಲ್ಲದವರೂ ಈ ಕೆಲಸದಲ್ಲಿ ಭಾಗಿಗಳಾದರೆ, ಸಂಸ್ಕೃತಿಯ ಮೇಲ್ಮೆಟ್ಟಲುಗಳನ್ನೇರಲು ಮಾನವನಲ್ಲಿ ಎಷ್ಟೊಂದು ಅಪರಿಮಿತ ಶಕ್ತಿ ಇದೆ ಎಂಬ ಮಾತನ್ನು ಕಂಡಾರು. ಮಾನವನ ಸೌಖ್ಯ ತನ್ನ ಗುರಿಯನ್ನು ಮುಟ್ಟುವುದರಲ್ಲಿ ಇರದೆ, ಅದಕ್ಕಾಗಿ ಮಾರ್ಗಕ್ರಮಣ ಮಾಡುವುದರಲ್ಲಿದೆ; ಪರಿಸಮಾಪ್ತಿಯಲ್ಲಿರದೆ ಅದರ ಬಳಿಗೆ ಅವನನ್ನು ಕರದೊಯ್ಯುವ ಕ್ರಮದಲ್ಲಿದೆ; ಸಂಪಾದನೆಯಲ್ಲಿರದೆ ಸಂಪಾದನೆಗಾಗಿ ಸ್ಥಿರವಾದ ಮುನ್ನಡೆಯಲ್ಲಿದೆ; ಸತತ ಪ್ರಯತ್ನದಲ್ಲಿ, ಹೋರಾಟದಲ್ಲಿದೆ ಮಾನವನ ಹಿರಿದಾದ ಸುಖದ—ಹೆಜ್ಜೇನು.

—

## ಹದಿನೈದನೆಯ ಮೆಟ್ಟಲು

## ಸಂಸ್ಕೃತಿಯ ಗುರಿ?



ಇದುವರೆಗೆ ಮಾಡಿದ ಸಂಸ್ಕೃತಿ-ಸಮಾಜ-ಶಾಸ್ತ್ರಗಳ ವಿವೇಚನೆಯು ಕೇವಲ ಆದಿಭೌತಿಕದೃಷ್ಟಿಯಿಂದ ಮಾಡಿದಂತೆ ಕಂಡುಬರುವಂತಿದೆ. ಸಮಾಜಶಾಸ್ತ್ರವು ಮಾನವನ ಇಹಲೋಕದ ಆಹಾರ-ವಿಹಾರಗಳ ವಿಷಯವನ್ನಷ್ಟೇ ವಿವೇಚಿಸಬಲ್ಲುದಾದರೆ ಅದರ ಕಾರ್ಯಕ್ಷೇತ್ರ, ಅದರ ಗುರಿ ಬಹು ಕೀಳುತರಗತಿಯವೆಂದೇ ಹೇಳಬೇಕಾದೀತು. ಕೋಟ್ಯಂತರ ವರುಷಗಳಿಂದ ಪ್ರಗತಿಯನ್ನು ಹೊಂದುತ್ತ ಬಂದಿರುವ ಮಾನವಸಮಾಜವು ಕೇವಲ ಮಾನವನ ಹೊಟ್ಟೆ-ಬಟ್ಟೆಗಳ ವಿಷಯವನ್ನಷ್ಟೇ ತನ್ನ ಮುಂದಿರಿಸಿಕೊಂಡಿದೆ ಎಂದು ಹೇಳಬಹುದೇ? ಅತಿ ಪ್ರಾಚೀನಕಾಲದಲ್ಲಿ ಮಾನವನು ತೀರ ಒರಟು

ಸ್ಥಿತಿಯಲ್ಲಿದ್ದನೆಂಬುದು ನಿಜ. ಆಗ 'ಆಹಾರ ನಿದ್ರಾ ಭಯ ಮೈಥುನಂ ಚ ಸಾಮಾನ್ಯಮೇತತ್ ಪಶುಭಿರ್ನರಾಣಾಂ' ಎಂಬಂತೆ ಅವನು ಪಶುವೃತ್ತಿಯಿಂದಲೇ ತನ್ನ ಕಾಲಕ್ಷೇಪವನ್ನು ಮಾಡುತ್ತಿದ್ದನೆಂಬುದೂ ಖಂಡಿತ. ತನ್ನ, ತನಗೆ ಸಂಬಂಧಿಸಿದ ಕುಟುಂಬ ಅಥವಾ ತಂಡದ ಹೊಟ್ಟೆಗೆ ಹಿಟ್ಟನ್ನು ದೊರಕಿಸುವುದೇ ಅವನ ಮುಖ್ಯ ಕೆಲಸವಾಗಿರುತ್ತಿತ್ತು. ಆಹಾರವನ್ನು ದೊರಕಿಸುವ ರೀತಿಯೂ ಕೂಡ ಬಹು ಕಾಡು, ಕ್ರೂರ ಚಟುವಟಿಕೆಗಳನ್ನೊಳಗೊಂಡಿರುತ್ತಿತ್ತು. ತನ್ನವರನ್ನೇ ತಾನು ಹರಿದು ತಿನ್ನುವ ಅಮಾನುಷ ರೀತಿಯನ್ನು ಬಿಟ್ಟು ಈಹೊತ್ತು ಮಾನವನು ಬಳ್ಳೇ ಸುಸಂಸ್ಕೃತ ರೀತಿಯಿಂದ ಆಹಾರವನ್ನು ದೊರಕಿಸುವ ಮೇಲ್ತರಗತಿಗೆ ಬಂದು ಮುಟ್ಟಿದ್ದಾನೆ. ಮಾನವ ಸಮಾಜವು ಬೆಳೆದು ಪ್ರಗತಿಯನ್ನು ಹೊಂದಿದಂತೆ, ಮಾನವಸಂಸ್ಕೃತಿಯೂ ಅಭಿವೃದ್ಧಿಯನ್ನು ಪಡೆದಿದೆ. ತನ್ನ ಹಿತ, ತನ್ನ ಕುಟುಂಬ-ತಂಡಗಳ ಸೌಖ್ಯ ಎಂಬ ಸಂಕುಚಿತ ಭಾವನೆಗಳನ್ನು ತೊರೆದು ಅಂತರರಾಷ್ಟ್ರೀಯ ಹಿತವನ್ನು ಒಳಗೊಂಡ ವಿಶಾಲದೃಷ್ಟಿಯಿಂದ ಮಾನವನು ಈಹೊತ್ತು ಜಗತ್ತಿನ ಕಡೆಗೆ ತನ್ನ ದೃಷ್ಟಿಕೋನವನ್ನು ತಿರುಗಿಸುತ್ತಲಿದ್ದಾನೆ. ಪಶುಗಳಂತೆ ಕೇವಲ ಹಸಿವೆ ನೀರಡಿಕೆಗಳಿಂದ ಕೂಡಿದ ಅವನ ಜೀವನವು ಈಹೊತ್ತು ನೈತಿಕ, ಧಾರ್ಮಿಕ, ಸಾಮಾಜಿಕ ತತ್ವಗಳನ್ನೊಳಗೊಂಡು ಬಳ್ಳೇ ವೈಭವದಿಂದ ಮೆರೆಯಬಹುದಾದಂತೆ ತೋರುತ್ತಿದೆ. ಮಾನವನ ಇಂತಹ ವಿಚಿತ್ರವಾದ ಬೆಳವಣಿಗೆಗೆ ಮಾನವಸಂಸ್ಕೃತಿಯೇ ಕಾರಣವೆಂದು ಒತ್ತಿ ಒತ್ತಿ ಹೇಳಬೇಕಾಗಿದೆ. ಮಾನವನು ಸಂಸ್ಕೃತಿಯ ಮೇಲ್ಮೆಟ್ಟಲುಗಳನ್ನು ಕ್ರಮೇಣ ಏರುತ್ತ ಬಂದಿರುವನೆಂದೂ, ಅವನ ಸಂಸ್ಕೃತಿಯು ಗತಿ ಒಂದೇಸವನೆ ಸಾಗದೆ ಒಮ್ಮೊಮ್ಮೆ ಹೆಚ್ಚು ರಭಸದಿಂದ ಮುಂದುವರಿಯುತ್ತಲೂ, ಒಮ್ಮೊಮ್ಮೆ ಕುಂಠಿತವಾಗುತ್ತಲೂ, ಒಮ್ಮೊಮ್ಮೆ ವಿರುದ್ಧ ದಿಕ್ಕಿನಲ್ಲಿ ಹಿಂದೆ ಸರಿಯುತ್ತಲೂ ಸಾಗಿದೆ ಎಂಬುದನ್ನು ಈವರೆಗೆ ವಿವೇಚಿಸಿದ ವಿಷಯದಿಂದ ತಿಳಿದುಕೊಳ್ಳಬಹುದಾಗಿದೆ. ಮಾನವನ ಹಿರಿಮೆಯನ್ನು ಇಷ್ಟೊಂದು ವಿಶಾಲವಾಗಿ ಹಬ್ಬಿಸಲು ಕಾರಣೀಭೂತವಾದ ಅವನ ಸಂಸ್ಕೃತಿಯು, ಬಹು ಕಿರಿದಾದ, ಕೀಳಾದ ಹಗುರಾದ ಆದಿಭೌತಿಕ ಧ್ಯೇಯವನ್ನೇ ತನ್ನ ಮುಂದಿಟ್ಟುಕೊಂಡಿದೆ ಎಂದು ಹೇಳಿ ಈ ಗ್ರಂಥವನ್ನು ಮುಗಿಸುವುದು ಸಾಧ್ಯವಿಲ್ಲ. ಮಾನವಸಮಾಜವು

ಇನ್ನೂ ಬೆಳೆದು ಬಹುಕಾಲ ಬಾಳಬೇಕಾಗಿದೆ. ಮಾನವನ ಆದಿಭೌತಿಕ ಸುಖವನ್ನಲ್ಲದೆ ಅದು ಅವನ ಆಧ್ಯಾತ್ಮಿಕ ಸುಖದ ಕಡೆಗೂ ಲಕ್ಷ್ಯಕೊಡುತ್ತ ಬಂದಿದೆ. ಇನ್ನುಮುಂದೆಯಾದರೂ ಅದನ್ನೇ ಹೆಚ್ಚಿಚ್ಚು ಲಕ್ಷಿಸಬೇಕಾಗಿದೆ ಎಂದು ಧೈರ್ಯದಿಂದ ಹೇಳಬಹುದು. ಮಾನವಸಂಸ್ಕೃತಿಯು ಮಾನವನ ಸರ್ವತೋಮುಖವಾದ ಬೆಳೆವಣಿಗೆಯನ್ನು ಮಾಡಿಕೊಟ್ಟು ಅವನನ್ನು ಘನತೆಯ ಪರಮಾವಧಿಗೆ ಮುಟ್ಟಿಸಿ, ಪಾರಮಾರ್ಥದ ಬೆಳಕನ್ನು ಬೀರಿ, ಪ್ರಾಣಿ-ಕೋಟಿಗಳಲ್ಲಿ ಅತ್ಯುನ್ನತ ಸ್ಥಾನವನ್ನು ಅವನಿಗೆ ನಿರ್ಮಿಸಿಕೊಟ್ಟು, ಅವನು ವಾಸಿಸುವ ಈ ಜಗತ್ತು ಶಾಶ್ವತವಾದ ಸುಖಸಂಪತ್ತುಗಳ ನೆಲೆವೀಡಾಗುವಂತೆ ಮಾಡಬೇಕಾಗಿದೆ. ಇದುವೆ ಮಾನವಸಂಸ್ಕೃತಿಯ ಗುರಿ—ಹೆಗ್ಗುರಿ ಆಗಿರಬೇಕು. ಆದುದರಿಂದ ಮಾನವಸಂಸ್ಕೃತಿ ಅತ್ಯುತ್ತಮವಾದ ತತ್ವಗಳ ಸ್ಥಿರವಾದ ತಳಹದಿಯ ಮೇಲೆ ಕಟ್ಟಲ್ಪಟ್ಟಿರಬೇಕು. ಮಾನವಸಂಸ್ಕೃತಿಯ ತಳಹದಿಯನ್ನು ಹೀಗೆ ದೃಢೀಕರಿಸಲು, ಕಾಲಕಾಲಕ್ಕೆ ಈ ವರೆಗೆ ಅನೇಕ ಧರ್ಮೋಪದೇಶಕರೂ, ಧರ್ಮಗುರುಗಳೂ, ಮಹಾಪುರುಷರೂ ಪ್ರಯತ್ನಿಸಿದ್ದಾರೆಂಬುದು ಪೂರ್ವಕಾಲದ ಮತ್ತು ಇತ್ತೀಚಿನ ಐತಿಹಾಸಿಕ ಸಂಗತಿಗಳಿಂದ ಕಂಡುಬರುವಂತಿದೆ. ಮನುಷ್ಯನ ಜೀವನದಲ್ಲಿ ಕೇವಲ ಯಾಂತ್ರಿಕ-ಬಲ ಬೆಳೆಯುವುದರಿಂದ, ಅವನ ಬಂಡವಲುಗಾರಿಕೆಯ ಶಕ್ತಿಯು ಅಭಿವೃದ್ಧಿಯಾಗುವುದರಿಂದ, ಅಥವಾ ವ್ಯಕ್ತಿಗಳಿಗೆ ಆದಿಭೌತಿಕ ಸುಖ ದೊರೆಯುವುದರಿಂದ ಶ್ರೇಷ್ಠ ಮಾನವನಿಗೆ ಸಮಾಧಾನವಾಗಲಾರದು. ಇಂತಹ ಸಾಮಗ್ರಿ ಸೌಕರ್ಯಗಳಿಂದ ಅವನ ಆಕ್ರಮಣಶೀಲತೆಗೆ ಅನುವು ದೊರೆತು ಅವನು ಅನಂತ ರಕ್ತಪಾತವನ್ನು ಮಾಡುವುದಕ್ಕಾಗಿ ಟೊಂಕಕಟ್ಟಿ ನಿಲ್ಲುತ್ತಾನೆಂಬುದು, ಈಹೊತ್ತು ಜಗತ್ತಿನ ಬಲಿಷ್ಠ ರಾಷ್ಟ್ರಗಳು ತಾಂಡವನೃತ್ಯವನ್ನಾಡುತ್ತ ದುರ್ಬಲ ರಾಷ್ಟ್ರಗಳನ್ನು ನುಂಗಿ ನೀರು ಕುಡಿಯುತ್ತಿರುವುದರಿಂದ ಸ್ಪಷ್ಟವಾಗುತ್ತಿದೆ. ಇಂತಹ ರಾಕ್ಷಸೀ ಶಕ್ತಿ ಬೆಳೆಯಬಾರದೆಂದೂ, ಮಾನ-ವನು ಇಹಲೋಕದ ಸ್ವಾರ್ಥಸುಖಕ್ಕೆ ಮೆಚ್ಚಿ, ತನ್ನ ಜೀವನರಥವನ್ನು ಮೈಮರೆತು ಮನಬಂದಂತೆ ನಡೆಸಿ, ಕಗ್ಗತ್ತಲೆಯು ಮುಸುಕಿದ ಆಳವಾದ ಕೊತ್ತಳದಲ್ಲಿ ನೂಕಿ ನುಗ್ಗುಮಾಡಬಾರದೆಂದೂ, ಅನೇಕ ಮಹಸೀಯರು, ಸಾಧು-ಸಂತರು, ತಮ್ಮ ಶಕ್ತಿಮೀರಿ ಪ್ರಯತ್ನಿಸಿದ್ದಾರೆ. ತತ್ವಗಳನ್ನರಿತು

ಬಹುಜನ ಹಿತಕ್ಕಾಗಿ ಕೈಕೊಳ್ಳುವ ಅಂಥವರ ಕೃತಿಗಳಿಂದಲೇ ಕಾಲಕಾಲಕ್ಕೆ ಸಂಸ್ಕೃತಿ ಮುಂದೆ ಹೆಜ್ಜೆಯನ್ನಿಟ್ಟಿದೆ, ಸಂಸ್ಕೃತಿ ಹೊಸಬೆಳಕಿನಿಂದ ಬೆಳಗಿದೆ. 'ನೀಚೈರ್ಗಚ್ಛತ್ಯುಪರಿಚ ದಶಾ ಚಕ್ರನೇಮಿಕ್ರಮೇಣ' ಎಂಬಂತೆ ಸಂಸ್ಕೃತಿಯ ದಶೆಗಳೂ ಮೇಲೆ ಕೆಳಗೆ ಹೋಗುತ್ತಲಿರುತ್ತವೆ. ಮಹಾತ್ಮರು ಮಾನವನ ಮುನ್ನಡೆಗೆ ಪ್ರಯತ್ನಿಸಿದ್ದಾರೆ. ಆದರೂ ಮಾನವನು ಮತ್ತೆ ಮತ್ತೆ ಅಧೋಗತಿಗಿಳಿಯುತ್ತ ಬಂದಿದ್ದಾನೆ. ಮಾನವನು ಈಹೊತ್ತು ಜಗತ್ತಿನ ಬೇರೆಬೇರೆ ಭಾಗಗಳಲ್ಲಿ ತನ್ನ ತೋಳ್ಬಲದ ಉನ್ಮತ್ತತೆಯಿಂದ, ತನ್ನ ಯಾಂತ್ರಿಕಬಲದ ಉನ್ಮಾದದಿಂದ ಮಾಡುತ್ತಿರುವ ರಕ್ತಪಾತವನ್ನು ನೋಡಿದರೆ ಮಾನವಸಂಸ್ಕೃತಿ ಅಧೋಗತಿಗಿಳಿಯಹತ್ತಿದೆ ಎಂದು ಭಯಗೊಳ್ಳುವಂತಿದೆ. ಇಂತಹ ಘೋರಪರಿಸ್ಥಿತಿಯಲ್ಲಿಯೂ ಕೂಡ ಅಹಿಂಸಾವಾದಿಗಳಾದ ಮಹಾತ್ಮಾ ಗಾಂಧೀಜಿಯವರಂತಹ ಪುಣ್ಯಪುರುಷರ ಶಾಂತಿಯುದ್ಧದ ರೀತಿ-ನೀತಿಗಳನ್ನೂ, ವಿಶ್ವಕುಟುಂಬತ್ವವನ್ನೂ ಕಂಡರೆ, ಮಾನವ ಸಂಸ್ಕೃತಿ ಇನ್ನೂ ಹಾಳಾಗಿಲ್ಲ, ಎಂದೂ ಹಾಳಾಗುವುದಿಲ್ಲ, ಅದು ಹಾಳಾಗದಂತೆ ಅದನ್ನು ಭದ್ರವಾಗಿರಿಸುವುದು ಎಲ್ಲ ಶ್ರೇಷ್ಠಜೀವಿಗಳ ಕರ್ತವ್ಯವಾಗಿದೆ, ಎಂಬ ಆಶೆ-ಆಕಾಂಕ್ಷೆಗಳು ಅಂಕುರಿಸುತ್ತವೆ. ಅಂತೂ ಮಾನವಸಮಾಜ ಸಂಸ್ಕೃತಿಗಳು ನೀತಿತತ್ವ, ತತ್ವಜ್ಞಾನ, ಧರ್ಮಶಾಸ್ತ್ರಗಳಿಗನುಗುಣವಾಗಿ ಮುಂದುವರಿಯಬೇಕೆಂಬುದೇ ತಾತ್ಪರ್ಯ.

**ಸಂಸ್ಕೃತಿ ಮತ್ತು ಧರ್ಮ—** ಪ್ರಾಕೃತಿಕ ಮಾನವನಿಗೆ ಧರ್ಮದ ವಿಚಾರವು ಯಾವ ರೂಪದಲ್ಲಿ, ಯಾವ ಕಾಲಕ್ಕೆ ಬಂದಿತೆಂದು ಹೇಳುವುದು ದುಸ್ತರ. ಮೊದಮೊದಲುಮಾನವನುಕೇವಲ ಪಶುವಿನಂತೆಯೇ ತನ್ನ ಆಹಾರ ವಿಹಾರಗಳ ಕ್ರಮವನ್ನು ಸಾಗಿಸುತ್ತಿದ್ದನೆಂಬುದನ್ನು ನಾವು ಈಗಾಗಲೇ ನೋಡಿದ್ದೇವೆ. ತಂಡಗಳು ಉಂಟಾದಾಗ ಮಾನವನ ಬುದ್ಧಿ ತುಸು ವಿಕಾಸಗೊಂಡು ಕೇವಲ ಆತ್ಮಹಿತದ ಬದಲು ತಂಡದ ಹಿತವನ್ನು ಬಯಸುವ ಮನೋಭೂಮಿಕೆ ಅವನಲ್ಲಿ ಸಿದ್ಧವಾಗಿರಬೇಕು. ಬರಬರುತ್ತ ತಂಡದ ಮುಖ್ಯಸ್ಥನ ಬಗ್ಗೆ ಪ್ರೀತಿ, ಮನ್ನಣೆ, ವಿಶ್ವಾಸಗಳು ತಲೆದೋರಹತ್ತಿ ವೀರಪೂಜೆಗೆ ಪ್ರಾರಂಭವಾಯಿತು. ಇದರಿಂದಲೇ ಶಕ್ತಿಪೂಜೆಗೆ ಇಂಬುದೊರೆತಿರಬೇಕು. ವೇದಕಾಲದಲ್ಲಿ ಈ ಶಕ್ತಿಯನ್ನು ಮಾನವನು ಸೃಷ್ಟಿಯ ಅನೇಕ

ವಸ್ತುಗಳಲ್ಲಿ ಕಂಡು ಆ ವಸ್ತುಗಳನ್ನೇ ಪೂಜಿಸಹತ್ತಿದನು. ಆದುದರಿಂದಲೇ ವೇದಕಾಲದಲ್ಲಿ, ಅಗ್ನಿ, ವರುಣ, ವಾಯು, ಸರ್ಪ ಮುಂತಾದ ಶಕ್ತಿಯುತ ವಸ್ತುಗಳಿಗೆ ಅಷ್ಟೊಂದು ಮನ್ನಣೆ ದೊರೆತಿದೆ. ಬರಬರುತ್ತ ಮಾನವನು ತನ್ನ ವಾತಾವರಣಕ್ಕನುಗುಣವಾಗಿ, ತನ್ನ ಹಿತಾಹಿತಗಳನ್ನರಿತು ಕೆಲವೊಂದು ನೀತಿತತ್ವಗಳನ್ನೊಳಗೊಂಡ ಧರ್ಮಶಾಸ್ತ್ರಗಳನ್ನೇ ರಚಿಸಿ, ಅವುಗಳಂತೆ ತಾನು, ತನ್ನ ಸಮಾಜವು ನಡೆಯುವಂತೆ ಏರ್ಪಾಡು ಮಾಡಿಕೊಂಡನು. ಕೆಲವು ಕಾಲ ಗತಿಸಿಹೋದ ಬಳಿಕ ವಾತಾವರಣವು ಬದಲಾದರೂ ಒಮ್ಮೆ ರಚಿಸಿದ ಧರ್ಮಶಾಸ್ತ್ರಗಳು ಹಾಗೆಯೇ ಉಳಿದುಕೊಂಡವು. ಪರಿಸ್ಥಿತಿಯು ಬದಲಾವಣೆಗನುಗುಣವಾಗಿ ಧರ್ಮಶಾಸ್ತ್ರಗಳ ನಿಯಮಾವಳಿಯಲ್ಲಿಯೂ ಹೆಚ್ಚು ಕಡಿಮೆಯಾಗಬೇಕಿತ್ತು. ಆದರೆ ಅದನ್ನು ಮರೆತುಬಿಟ್ಟು, ಕೆಲವೊಂದು ಧರ್ಮಾಧಿಕಾರಿಗಳು ತಮ್ಮ ಕೈಯಲ್ಲಿಯ ಅಧಿಕಾರಬಲದಿಂದ, ಅಥವಾ ತಮ್ಮ ಪ್ರಭಾವದ ಮೂಲಕ, ಅರ್ಥವಿಲ್ಲದ ಧರ್ಮನಿಯಮಗಳನ್ನೇ ಸಮಾಜದ ಮೇಲೆ ಹೇರಿ ಧರ್ಮವನ್ನು ಕೃತ್ರಿಮ ನಿಯಮಾನುಸರಣೆಯ ಕೀಳು ದೆಸೆಗಿಳಿಸಿದರು. ಆದುದರಿಂದ ಈಹೊತ್ತು ಧರ್ಮವು—ಧರ್ಮಶಾಸ್ತ್ರವು ಅಲ್ಪಸಂಖ್ಯಾಕರಾದ ಧರ್ಮಾಧಿಕಾರಿಗಳ ಕೈಗೊಂಬೆಯಾಗಿದೆ. ಜನರಲ್ಲಿ ಧರ್ಮದ ವಿಷಯವಾಗಿ ಅಸಹ್ಯವೂ, ನಿಂದೆ ದ್ವೇಷಗಳೂ ಉಂಟಾಗಹತ್ತಿವೆ. ಈ ವಿಜ್ಞಾನಯುಗದಲ್ಲಂತೂ, ಧರ್ಮದ ಶುಷ್ಕ ತತ್ವಗಳಿಂದ ಬೇಸತ್ತವರು ಧರ್ಮವನ್ನು ಸಂಪೂರ್ಣ ನಿರಾಕರಿಸಿದ್ದಾರೆ. ಅದರ ಸ್ಥಳದಲ್ಲಿ ವಿಜ್ಞಾನವು ತಮಗೆ ಸಹಕಾರಿಯಾಗಬಲ್ಲದೆಂದು ದೃಢವಾಗಿ ನಂಬಿದ್ದಾರೆ.

ಆದರೆ ಹಿಂದಿನ ಕಾಲದಲ್ಲಾಗಲಿ, ಈಗಾಗಲಿ ಯಾವ ಮಾನವಸಮಾಜವೂ, ಯಾವ ಬುದ್ಧಿವಂತ ಮಾನವನೂ, ಯೋಗ್ಯವಾದ ಧರ್ಮದ ಸಹಾಯವಿಲ್ಲದೆ ಜೀವಿಸಲಿಲ್ಲ—ಜೀವಿಸಲಾರನು. ಬುದ್ಧಿಹೀನನು ಪಶುವಿನಂತೆ ಧರ್ಮದ ಸಹಾಯವಿಲ್ಲದೆ, ಸಹಜವಾಗಿ ಜೀವಿಸಬಹುದು. ಬುದ್ಧಿವಂತನಿಗೆ ನುವ್ಯವಸ್ಥಿತವಾದ ಧರ್ಮವೇ ಮಾರ್ಗದರ್ಶಿಯಾಗಲು ಬಹುದು. ಅವನ ಕುಂದು ಕೊರತೆಗಳನ್ನು ಪೂರೈಸಿಕೊಡಬಲ್ಲದು. ಅವನು ಮಾಡಬೇಕಾದ, ಮಾಡಬಾರದ ಕೆಲಸಗಳಾವವು ? ಈಗ ಮಾಡಬೇಕಾದ ಕೆಲಸವಾವುದು ? ಮುಂದೆ ಮಾಡಬೇಕಾದುದು ಆವುದು ? ಎಂದು ಮುಂತಾದ ಜ್ಞಾನೋದಯವನ್ನು

ಅವನಲ್ಲಿ ಉಂಟುಮಾಡಿಕೊಡಬಲ್ಲದು. ಧಾರ್ಮಿಕ ರೀತಿಯಿಂದ ನಡೆವುದು ಸುಸಂಸ್ಕೃತ ಮಾನವನ ವೈಶಿಷ್ಟ್ಯ. ಪ್ರತಿಯೊಂದು ಪ್ರಾಣಿಯೂ ತನ್ನ ಪ್ರತಿಯೊಂದು ಕೆಲಸವನ್ನು ಅದರಿಂದುಂಟಾಗುವ ಫಲದ ಅರಿವಿನಿಂದಲೇ ಮಾಡುತ್ತದೆಂದು ಹೇಳಬಹುದು. ತುಂಬಿಯು ಚಳಿಗಾಲದಲ್ಲಿ ತನಗೂ ತನ್ನ ಮರಿಗಳಿಗೂ ಆಹಾರ ಬೇಕೆಂಬ ಭಾವನೆಯಿಂದ, ಮಧುವನ್ನು ಸಂಚಯಿಸುತ್ತದೆ. ಈ ವಿಚಾರವನ್ನುಳಿದು ಬೇರೆ ಯಾವ ವಿಚಾರಗಳೂ ಅದರ ಮನಸ್ಸಿನಲ್ಲಿ ಸುಳಿಯುವಂತಿಲ್ಲ. ಇದೇ ಪ್ರಕಾರ ಒಂದು ಹಕ್ಕಿಯು ಗೂಡನ್ನು ಕಟ್ಟುವ ವಿಚಾರ. ಮಾನವನ ವಿಷಯ ಹಾಗಲ್ಲ. ಪಶುಪಕ್ಷಿಗಳು ಅಂತಃ ಪ್ರವೃತ್ತಿಯಿಂದ ಕೆಲಸಮಾಡಿದರೆ, ಮಾನವನು ವಿಚಾರಶಕ್ತಿಯಿಂದ ಕಾರ್ಯ ನಿರ್ವಹಿಸುತ್ತಾನೆ. ಪಶುಪಕ್ಷಿಗಳು ಜೀವನದಲ್ಲಿ ಶೀಘ್ರವಾಗಿ ಸಂಭವಿಸುವ ಪರಿಣಾಮಗಳನ್ನಷ್ಟೇ ಲಕ್ಷಿಸಿ ಕಾರ್ಯಮಾಡುವವು. ಆದರೆ ಮಾನವನು ಬಹುದೂರದರ್ಶಿಯಾಗಿ, ಶಾಶ್ವತವಾಗಿ ಬಾಳುವ ಫಲಗಳನ್ನಪೇಕ್ಷಿಸಿ ಕೆಲಸ ಮಾಡುವನು. ತಾನೊಂದು ಅಖಿಲ ವಿಶ್ವದ ಭಾಗವೆಂದರಿತುಕೊಳ್ಳುವುದೂ, ಆ ವಿಶ್ವಶಕ್ತಿಯ ಪ್ರೇರಣೆಯೇ ತನಗೆ ಮಾರ್ಗದರ್ಶಿ ಎಂದು ಭಾವಿಸುವುದೂ ಮಾನವನ ಧರ್ಮದ ತಳಹದಿ. ಆದುದರಿಂದ ಬುದ್ಧಿವಂತನಿಗೆ ಧರ್ಮವು ಅತ್ಯಾವಶ್ಯಕ ವಿಷಯವಾಗಿತ್ತು—ಹಾಗೆ ಆಗುತ್ತಲೂ ಇದೆ.

ತನಗಿಂತಲೂ ಹೆಚ್ಚಿನ ವಿಶ್ವವ್ಯಾಪಿಯಾದ ಆ ಅನಂತಶಕ್ತಿಯೊಡನೆ—ದೇವರೊಡನೆ—ಸಂಬಂಧ ಬೆಳೆಸಿಕೊಳ್ಳಲು ಸಹಾಯಕಾರಿಯಾಗುವುದೇ ಧರ್ಮವೆಂದು ಬುದ್ಧಿವಂತನು ತಿಳಿಯುತ್ತಾನೆ. ಈ ಸಂಬಂಧವು—ಬೇರೆಬೇರೆ ಕಾಲಕ್ಕೆ ಬೇರೆಬೇರೆ ರಾಷ್ಟ್ರಗಳಿಗೆ ವಿಧವಿಧವಾಗಿದ್ದರೂ—ಈ ಜಗತ್ತಿನಲ್ಲಿ ಮಾನವನ ಕರ್ಮಗತಿಯನ್ನು ನಿರ್ದಿಷ್ಟಗೊಳಿಸುತ್ತಿದೆ. ಇದರಿಂದಲೇ ಅವನ ರೀತಿನೀತಿಗಳಿಗೆ ಯೋಗ್ಯ ಮಾರ್ಗದರ್ಶಿತ್ವವು ದೊರೆಯುತ್ತದೆ. ಬೇರೆಬೇರೆ ಧರ್ಮದವರು ಈ ಸಂಬಂಧವನ್ನು ಬೇರೆಬೇರೆ ವಿಧವಾಗಿ ತಿಳಿದುಕೊಳ್ಳುತ್ತಾರೆ. ಬ್ರಾಹ್ಮಣನು ತಾನು ಪರಬ್ರಹ್ಮನ ಸ್ವರೂಪನೆಂದೂ, ಜೀವನದಲ್ಲಿ ತಾನು ಆ ಪರಾತ್ಪರ ಶಕ್ತಿಯೊಡನೆ ಐಕ್ಯನಾಗಲು ಪ್ರಯತ್ನಿಸಬೇಕೆಂದೂ, ಬೌದ್ಧನು ತನ್ನ ಕಾಮಾದಿ ಷಡ್ವೈರಿಗಳನ್ನು ನಾಶಗೊಳಿಸಿ ನಿರ್ವಾಣವನ್ನು ಪಡೆಯಬೇಕೆಂದೂ ಮುಂತಾಗಿ ಭಾವಿಸುತ್ತಾರೆ. ಮಾನವನಿಗೂ ಪರಮಾತ್ಮ

ನಿಗೂ ಸಂಬಂಧವನ್ನು ತಿಳಿಸಿಕೊಡುವುದೇ ಎಲ್ಲ ಧರ್ಮಗಳ ಹೆಗ್ಗುರಿ. ಮಾನವನ ಬುದ್ಧಿಗೂ ಅವನ ಜ್ಞಾನಕ್ಕೂ ಸರಿಹೋಗುವಂತೆ, ಅವನಿಗೂ ಅವನ ಸುತ್ತುಮುತ್ತಲಿರುವ ಅನಂತಶಕ್ತಿಗೂ ಸಂಬಂಧವನ್ನುಂಟುಮಾಡಿ ಕೊಟ್ಟು, ಬಹುಜನರಿಗೆ ಹಿತಕಾರಿಯಾಗುವಂತೆ ಯೋಗ್ಯ ಜೀವನವನ್ನು ಸಾಗಿಸಲು ಅವನಿಗೆ ಸಹಾಯಕಾರಿಯಾಗಬಲ್ಲುದೇ ನಿಜವಾದ ಧರ್ಮ.

ಮಾನವನು ಪ್ರಾಕೃತಿಕ ಸ್ವರೂಪದಲ್ಲಿದ್ದಾಗ ಅವನಿಗೆ ಧರ್ಮದ, ದೇವರ ವಿಷಯವಾಗಿ ಯಾವ ವಿಚಾರವೂ ಇದ್ದಿರಲಿಲ್ಲವೆಂಬುದು ನಿಜ. ಆದರೆ ಸಂಸ್ಕೃತಿ ಕ್ರಮೇಣ ಬೆಳೆದಂತೆ ಮಾನವನಲ್ಲಿ ಧರ್ಮದ ವಿಚಾರ ತಲೆದೋರ ಹತ್ತಿತು. ವ್ಯಕ್ತಿಗಳ ಗುಣಧರ್ಮಗಳಿಗನುಸಾರವಾಗಿ ಅನೇಕ ಧರ್ಮಗಳು, ಧರ್ಮಗುರುಗಳು, ಧಾರ್ಮಿಕವಿಚಾರಗಳ ಪ್ರಚಾರವನ್ನು ಮಾಡಹತ್ತಿದರು. ವೈದಿಕಧರ್ಮ, ಬೌದ್ಧಧರ್ಮ, ಮುಹಮ್ಮದೀಯಧರ್ಮ, ಕ್ರಿಸ್ತಧರ್ಮ ಮುಂತಾದ ಅನೇಕ ಧರ್ಮಗಳು ಬೇರೆಬೇರೆ ಮತಾಚಾರ್ಯರಿಂದ ಪ್ರಚಾರಕ್ಕೆ ಬಂದು, ವೈಭವದಿಂದ ಬಹುಕಾಲದ ವರೆಗೆ ವಿರಾಜಿಸಿ, ಈಗ ಮತ್ತೆ ಮೂಲೆಗುಂಪಾದಂತೆ ತೋರುತ್ತವೆ. ಈಹೊತ್ತಿನ ವಿದ್ಯಾವಂತರು ತಾವು ಧರ್ಮದ ಸಹಾಯವಿಲ್ಲದೆ ಬಾಳಬಹುದೆಂದೂ, ಬಾಳಬೇಕೆಂದೂ ಅಭಿಪ್ರಾಯ ಪಡುತ್ತಾರೆ. ಆದರೆ ಧರ್ಮವು ಹಿಂದಿನ ಕಾಲದಂತೆ ಈಗಲೂ ಮಾನವ ಸಮಾಜವನ್ನು ಕಾರ್ಯರಂಗಕ್ಕಿಳಿಸಬಹುದಾದ ಮಹಾಶಕ್ತಿಯಾಗಿದೆ; ಮಾನವನ ಹೃದಯದಂತಿದೆ. ಹೃದಯವಿಲ್ಲದೆ ಮಾನವನು ಜೀವಿಸುವುದು ಅಸಂಭವ. ಜೀವಿಗಳಂತೆ ಧರ್ಮವೂ ಹುಟ್ಟುತ್ತದೆ, ಬಾಳುತ್ತದೆ, ಬೆಳೆದು ಮುಪ್ಪಾಗಿ ಸಾಯುತ್ತದೆ, ಸತ್ತು ಹುಟ್ಟುತ್ತದೆ. ಮರಳಿ ಹುಟ್ಟಿದರೆ ಹೆಚ್ಚು ಪರಿಪೂರ್ಣಾವಸ್ಥೆಯನ್ನು ಪಡೆಯುತ್ತದೆ. ಒಂದೊಂದು ಧರ್ಮವು ಉನ್ನತಿಯನ್ನು ಪಡೆದೊಡನೆ ಅದಕ್ಕೆ ಕೆಲವೊಂದು ತಡೆಯುಂಟಾಗಿ ಅದು ಅಧೋಗತಿಗಿಳಿಯುತ್ತದೆ. ಆಮೇಲೆ ಮತ್ತೆ ಊರ್ಜಿತ ಸ್ಥಿತಿಯನ್ನು ಪಡೆಯುತ್ತದೆ. ಆಗ ಅದರಲ್ಲಿ ಹೆಚ್ಚು ವಿಶಾಲವಾದ ವಿಶದವಾದ ತತ್ವಗಳು ತಲೆದೋರುತ್ತವೆ. ಉಚ್ಚತತ್ವಗಳನ್ನೊಳಗೊಂಡ ಎಲ್ಲ ಧರ್ಮಗಳು, ಎಲ್ಲ ಮಾನವರೂ ಸರಿಸಮಾನರೆಂದು ಭಾವಿಸುತ್ತವೆ. ಆದರೆ ಕೆಲವೊಂದು ಜೀವಿಗಳು ತಮ್ಮ ಹಿರಿಮೆಯನ್ನು ಸಾಧಿಸಿಕೊಳ್ಳುವುದಕ್ಕಾಗಿ, ಈ ಸರಿಸಮಾನತೆಯ ತತ್ವವನ್ನು

ಜಾಣತನದಿಂದ ಬಚ್ಚಿಡುತ್ತಾರೆ. ಆದುದರಿಂದ ಸಾಮಾನ್ಯ ಜನರು ತಾವು ಯಾವಾಗಲೂ ಕೆಲವೊಂದು ಮಾನವರಿಗೆ ಅಂಕಿತರಾಗಿರುವುದೇ ತಮ್ಮ ಧರ್ಮಸಿದ್ಧಾಂತವೆಂದು ಭಾವಿಸುತ್ತಾರೆ.

ಸರ್ವಮಾನವರು ಸರಿಸಮಾನರೆಂಬ ಉದಾತ್ತಭಾವನೆಯನ್ನು ಜನರಲ್ಲಿ ಬೀರುವುದು ಸಂಸ್ಕೃತಿಯ ಪರಿಪೂರ್ಣತೆಯ ಕುರುಹು. ಅದುವೆ ಮಾನವ ಸಮಾಜವನ್ನು ಪರಿಪೂರ್ಣಗೊಳಿಸಲು ಉತ್ತಮ ಸಾಧನ. ಧರ್ಮವು ಈ ಕೆಲಸವನ್ನು ಮಾಡಿದರೆ ಮಾನವಸಂಸ್ಕೃತಿಯನ್ನು ಪರಿಪೂರ್ಣಗೊಳಿಸಲು ಸಹಾಯಕಾರಿಯಾಗುತ್ತದೆ. ಆದುದರಿಂದ ಸಮಾಜವು ಮಾನವರಲ್ಲಿ ವಿಶೇಷತಃ ಚಿಕ್ಕ ಮಗುಗಳ ಅಂತಃಕರಣದಲ್ಲಿ ಉದಾತ್ತ ತತ್ತ್ವಗಳು ಬೇರೂರು ವಂತೆ ಪ್ರಯತ್ನಿಸಬೇಕು. ಹಿರಿಯರು, ಗುರುಗಳು, ಅರಸರು, ಶಿಕ್ಷಕರು, ಚಿಕ್ಕವರಲ್ಲಿ, ತರುಣರಲ್ಲಿ 'ದೇವರ ಅಂಶವು ಮನುಷ್ಯನಲ್ಲಿದೆ. ಅದನ್ನು ಅವನು ಬೆಳೆಸಿ ಬೆಳಕಿಗೆ ತರಲು ಪ್ರಯತ್ನಿಸಬೇಕು. ತನ್ನಂತೆ ಪರರ ಬಗೆಯಬೇಕು' ಎಂಬ ಸರ್ವಸಾಮಾನ್ಯ ತತ್ತ್ವಗಳನ್ನು ಬಿಂಬಿಸಿದರೆ ಧರ್ಮದ ತಳಹದಿಯನ್ನು ಬಹು ದೃಢವಾಗಿ ಕಟ್ಟಿದಂತಾಗುವುದು. ಇವತ್ತಿನಮಗುಗಳು ನಾಳಿನ ನಾಗರಿಕರಾಗುವುದರಿಂದ, ಅವರು ಇಂತಹ ಉದಾರಭಾವನೆಗಳಿಂದ ಜಗತ್ತಿನ ರಂಗಭೂಮಿಯ ಮೇಲೆ ಕಾಲಿಟ್ಟರೆ, ಅವರು ಹೂಡುವ ಜೀವನ ನಾಟಕವು ಬಹು ಯಶಸ್ವಿಯಾಗಿ ಮನೋಹಾರಿಯಾಗುವುದೆಂಬುದರಲ್ಲಿ ಸಂದೇಹವಿಲ್ಲ. ಪ್ರತಿಯೊಬ್ಬನು ತನ್ನ ನೆರೆಹೊರೆಯವರ ಸುಖದುಃಖಗಳಲ್ಲಿ ಭಾಗಿಯಾಗಲು ಪ್ರಯತ್ನಿಸಿದರೆ, ಆಹಾರ-ವಿಹಾರಗಳ ಯೋಗ್ಯ ನಿಯಂತ್ರಣದಿಂದ, ಆತ್ಮ-ಸಂಯಮದಿಂದ ತನ್ನ ಜೀವನಕ್ರಮವನ್ನು ಸಮತೋಲಿಸಿಂದ ಸಾಗಿಸಿಕೊಂಡು ಹೋದರೆ, ಅವನು ನಿಜವಾಗಿಯೂ ಧರ್ಮವನ್ನಾಚರಿಸಿದಂತೆ ಆಗುತ್ತನಲ್ಲದೆ, ವ್ಯರ್ಥ ವೈರತ್ವವೂ, ಜಗಳಾಟವೂ, ಮೋಸ ಮಾಯೆಗಳೂ ಇಲ್ಲದಂತಾಗಿ ಮಾನವಸಮಾಜವು ಸುಖಮಯವಾಗಿ, ಶಾಂತಮಯವಾಗಿ ಬದುಕಿ ಬೆಳೆಯಬಹುದು. ಇದರಿಂದಲೇ ಸಂಸ್ಕೃತಿಯ ಅಭಿವೃದ್ಧಿ. ಇದರಿಂದಲೇ ಸಮಾಜದ ಹಿತ.

ಆದರೆ ಇಂತಹ ಯಾವ ಪರಿಸ್ಥಿತಿಯನ್ನೂ ಈಗ ನಾವು ಕಾಣಲಾರೆವು. ಸುಳ್ಳು ಧರ್ಮದ ಮೋಸವನ್ನು ಮಾನವನು ತಡೆದು ನಿಲ್ಲಿಸಿ, ನಿಜವಾದ

ಧರ್ಮಪ್ರಸಾರವನ್ನು ಮಾಡುವುದರ ಬದಲು, ಅವನು ಸತ್ಯವನ್ನು ಎದುರಿಸಲು ಹಿಂಜರಿಯುತ್ತಿದ್ದಾನೆ. ಸ್ವಾಭಾವಿಕವಾದ, ಸಹಜವಾದ, ಶಕ್ಯವಾದ ಧಾರ್ಮಿಕರೀತಿಯಿಂದ ಜೀವನಕ್ರಮವನ್ನು ಮಾನವನು ಸಾಗಿಸದಿರುವುದಕ್ಕೆ ಮುಖ್ಯ ಕಾರಣವೇನೆಂದರೆ, ಅವನು ಬಹುಕಾಲದಿಂದ ಧರ್ಮದ ನೆರಲ್ಲದೆ ಜೀವಿಸಿದ್ದಾನೆ. ಹಿಂಸೆಯಿಂದ, ಬರ್ಚಿ ಬಿಲ್ಲು ಬಾಣಗಳಿಂದ, ಮದ್ದುಗುಂಡುಗಳಿಂದ, ತುಬಾಕಿ ತೋಫುಗಳಿಂದ, ಸೆರೆಮನೆ ಗಲ್ಲುಗಳಿಂದ, ಸುವ್ಯವಸ್ಥಿತವಾಗಿ ಜೀವನಕ್ರಮವನ್ನು ಸಾಗಿಸುವುದೇ ಯೋಗ್ಯ ರೀತಿಯೆಂದು ಅವನಿಗೆ ಎನಿಸುತ್ತದೆ. ಇಂತಹ ಹಿಂಸಾತ್ಮಕ ರೀತಿಗಳಿಂದ ಪರರನ್ನು ಪೀಡಿಸಿ ಜೀವಿಸುವವರಷ್ಟೇ ಅಲ್ಲ, ಅವರಿಂದ ಪೀಡಿತರಾದ ದುರ್ಬಲರೂ ಕೂಡ, ಹಿಂಸಾತ್ಮಕ ವಾತಾವರಣದಲ್ಲಿ ಬೆಳೆಯುತ್ತಿರುವುದರಿಂದ, ಹಿಂಸೆಯಿಂದಲೇ ಮಾನವಸಮಾಜದ ಹಿತವನ್ನು ಸಾಧಿಸುವುದು ಸಾಧ್ಯವೆಂದು ದೃಢವಾಗಿ ನಂಬುತ್ತಾರೆ. ಹಿಂಸೆಯಿಂದ ಸಾರ್ವಜನಿಕ ಸುಖವನ್ನು ಸಾಧಿಸುವ ಈ ವ್ಯವಸ್ಥೆಯೇ ಮಾನವನು ತನ್ನ ದುಃಖದ ಮೂಲಭೂತ ಕಾರಣಗಳನ್ನರಿತುಕೊಳ್ಳಲು ಅಡ್ಡಬರುತ್ತದೆ. ಸತ್ಯದ ತಳಹದಿಯ ಮೇಲೆ ಅವನು ಕಾಲೂರಿ ನಿಲ್ಲಲು ಪ್ರತಿಬಂಧಕವಾಗುತ್ತದೆ. ರೋಗಿಯ ರೋಗವನ್ನರಿತು ಅವನಿಗೆ ಹಿತಕಾರಿಯಾಗುವ ಉಪಾಯಗಳನ್ನು ವೈದ್ಯನು ಕೈಕೊಳ್ಳದೆ, ಅವನ ದೇಹದಲ್ಲಿ ಕೋಲಾಹಲವನ್ನೆಬ್ಬಿಸಿ ಅವನ ಪರಿಸ್ಥಿತಿಯನ್ನು ತೀರ ಹದಗೆಡಿಸುವ ಅನಿಷ್ಟ ಉಪಾಯವನ್ನು ಅವನು ಕೈಕೊಂಡರೆ, ರೋಗಿಯ ಸ್ಥಿತಿ ತೀರ ಹದಗೆಟ್ಟು ಅವನ ರೋಗದ ಉಪಶಮನವು ಅಶಕ್ಯವಾಗುವುದು. ಈಹೊತ್ತು ಮಾನವಸಮಾಜದ ಮುಂದಾಳುಗಳೆಂದು ಹೆಮ್ಮೆಪಡುತ್ತಿರುವವರ ಅನೇಕರ ರೀತಿ ಇಂತಹ ಮೂಢ ವೈದ್ಯರಂತಿದೆ.

ರಾಜ್ಯದಾಡಳಿತೆಯ ಸೂತ್ರಗಳನ್ನು ಹಿಡಿದ, ಸರ್ವಾಧಿಕಾರವನ್ನು ಕೈಕೊಂಡ ವ್ಯಕ್ತಿಗಳೂ, ಅಧಿಕಾರಲಾಲಸೆಯಿಂದ ಅಧಿಕಾರದ ಸೂತ್ರಗಳನ್ನೆಲ್ಲ ತಮ್ಮ ಕೈಯಲ್ಲಿರಿಸಿಕೊಂಡ ಮೇಲಿನ ವರ್ಗದ ಅಲ್ಪ ಸಂಖ್ಯಾಕರೂ, ಅಜ್ಞಾನಿಗಳಾದ ಬಹು ಸಂಖ್ಯಾಕರ ಸುಖಸಂಪತ್ತುಗಳನ್ನು ಹತ್ತಿಕ್ಕುವುದರಲ್ಲಿ ಇದೇ ರೀತಿಯಿಂದ ವರ್ತಿಸುತ್ತಿದ್ದಾರೆ. ಧರ್ಮೋಪದೇಶಕರ, ಸೈನಿಕರ, ಸಿಪಾಯಿಗಳ ಸಹಾಯದಿಂದಲೂ, ಮದ್ದು ಗುಂಡು, ಸೆರೆಮನೆ ಗಲ್ಲುಗಳ

ಬೆದರಿಕೆಯಿಂದಲೂ ತಮ್ಮ ಗುಲಾಮರು ಮೈಮರೆತು ಶಾಶ್ವತವಾಗಿ ತಮಗೆ ಅಧೀನರಾಗಿರುವಂತೆ ಪ್ರಯತ್ನಿಸುತ್ತಾರೆ. ತಾವು ಅವರನ್ನು ಅವ್ಯಾಹತವಾಗಿ ಸುಲಿಯಲು ಅವಕಾಶ ದೊರೆಯಬೇಕೆಂದು ಹವಣಿಸುತ್ತಾರೆ. ಆಳರಸರು ಇದನ್ನೇ ಸುವ್ಯವಸ್ಥಿತವಾದ ರಾಜ್ಯದಾಡಳಿತೆ ಎಂದು ಕರೆಯುವರು. ಆದರೆ ಇದರಷ್ಟು ಮತ್ತಾವುದೂ ಸಾಮಾಜಿಕ ಸುವ್ಯವಸ್ಥೆಗೆ ವಿರೋಧಿಯಾಗಲಾರದು. ಇದರಿಂದ ಸುವ್ಯವಸ್ಥೆ ಪರಿಣಮಿಸುವ ಬದಲು ಮಾನವ ಸಮಾಜಕ್ಕೆ ಕೇಡು ಅನಿಷ್ಟಗಳು ಖಂಡಿತವಾಗಿಯೂ ಸಂಭವಿಸುವವು.

ಈಹೊತ್ತು, ಕ್ರೈಸ್ತ ಧರ್ಮ, ಬೌದ್ಧ ಧರ್ಮ ಮುಂತಾದ ಉದಾತ್ತ ಧರ್ಮಗಳಿಗೊಳಗಾದ ಜಗತ್ತಿನ ದೊಡ್ಡ ದೊಡ್ಡ ರಾಷ್ಟ್ರಗಳು ಆಕ್ರಮಣಶೀಲತೆಗೊಳಗಾಗಿ ಘೋರ ಕೊಲೆಪಾತಕಗಳನ್ನು ಮಾಡುತ್ತಿರುವುದರ ಅರ್ಥವೇನು? ತಮ್ಮ ಪೂರ್ವಜರ ಕಾಡು, ಕ್ರೂರ ರೀತಿಗಳೇ ಅವರಿಗೆ ಮಾರ್ಗದರ್ಶಿಯಾಗಿವೆ. ತಮ್ಮ ಪೂರ್ವಜರನೇಕರು ಕ್ರೂರತನದಿಂದ, ಯುದ್ಧ, ಕೊಲೆಗಡಕತನ, ಬಂದಿವಾಸ, ಅಫು, ಶೆರೆ ಮುಂತಾದ ಮಾದಕದ್ರವ್ಯಗಳ ಮಾರಾಟ, ಇವುಗಳಿಂದ ಜನರಲ್ಲಿ ಸುವ್ಯವಸ್ಥೆಯನ್ನೂ ನೈತಿಕ ಬಲವನ್ನೂ ರಕ್ಷಿಸಲು ಹೋರಾಡಿದ ದೃಷ್ಟಾಂತಗಳು ಇತಿಹಾಸದಲ್ಲಿ ಇನ್ನೂ ಅಚ್ಚಳಿಯದೆ ಅವರ ಕಣ್ಣುಮುಂದೆ ಕಟ್ಟಿದಂತಿವೆ. ಈ ದೃಷ್ಟಾಂತಗಳಿಂದಲೇ ಈಗಲೂ ಸುಪ್ರಸಿದ್ಧ ರಾಷ್ಟ್ರಗಳು ಇಂತಹ ಅಮಾನುಷ ಕೃತಿಗಳನ್ನು ಮಾಡುವುದು ಪಾಪಕರ್ಮವಲ್ಲ ಎಂದು ಭಾವಿಸುತ್ತಲಿವೆ. ರಾಜ್ಯಸಂಸ್ಥಾಪನೆಗೆ, ರಾಜ್ಯ ಪರಿಪಾಲನೆಗೆ ಇಂತಹ ಅಮಾನುಷ ಕೃತಿಗಳು ಅವಶ್ಯ ಮತ್ತು ಸ್ವಾಭಾವಿಕವೆಂಬ ದೃಢ ವಿಶ್ವಾಸದಿಂದಲೇ ಇಂತಹ ಕೃತಿಗಳಿಗೆ ಕೈಯಿಕ್ಕುತ್ತಲಿವೆ.

ಮಾನವಸಮಾಜದ ಅಥವಾ ಅದರಲ್ಲಿಯ ವೈಯಕ್ತಿಕ ಜೀವಿಗಳ ಜೀವನಕ್ರಮದಲ್ಲಿ ಸುಧಾರಣೆಯಾಗಬೇಕಾದರೆ, ಆಂತರಿಕ ನೈತಿಕ ಬೆಳವಣಿಗೆ ಅತ್ಯವಶ್ಯ. ಹೊರಗಣ ಕೃತಿಗಳಿಂದ-ಹಿಂಸೆಯಿಂದ—ತಮ್ಮ ಜೀವನವನ್ನು ತಿದ್ದಿಕೊಳ್ಳಬೇಕೆಂಬ ಪ್ರಯತ್ನಗಳೆಲ್ಲ ವಿಫಲವಾಗುವವು. ಅಷ್ಟೇ ಅಲ್ಲ, ಮಾನವನ ಜೀವನದಲ್ಲಿ ಪ್ರಗತಿಯಾಗುವುದು ಒತ್ತಟ್ಟಿಗುಳಿದು, ಅವನು ನಿಜವಾಗಿಯೂ ಅಧೋಗತಿಗಿಳಿದು ಸಂಸ್ಕೃತಿಯ ಮೇಲ್ಮೆಟ್ಟಲುಗಳ ಮೇಲಿಂದ ಆಳವಾದ ಕಗ್ಗತ್ತಲೆಯ ಕಂದುಕದಲ್ಲಿ ಬೀಳುತ್ತಾನೆ. ಸಮಾ

ಜವನ್ನೂ ಉರುಳಿಸುತ್ತಾನೆ. ಇಂತಹ ಅಮಾನುಷ ಕೃತಿಗಳು ಬಹುಕಾಲ ನಡೆದರೆ ಮಾನವನ ಮನೋವೃತ್ತಿಯೂ ವಿರೂಪಗೊಳ್ಳುತ್ತದೆ. ತಮ್ಮ ನೆರೆ ಹೊರೆಯವರೊಡನೆ ಪ್ರೀತಿ ವಿಶ್ವಾಸಗಳಿಂದ ನಡೆದುಕೊಂಡು, ಅವರಿಗೆ ಹಿತ ವಾಗುವಂತೆ ತಮ್ಮ ಸೇವೆಯನ್ನು ಸಲ್ಲಿಸಬೇಕೆಂಬ ಮಹಾ ತತ್ವವು ಮರೆ ಯಾಗಿ, ಅವರನ್ನು ಪೀಡಿಸಿ, ಹಿಂಸಿಸಿ ಹರಿದು ತಿನ್ನುವುದೇ ಶ್ರೇಷ್ಠ ಧರ್ಮ ವೆಂಬ ವಿಶ್ವಾಸವು ಬೇರೂರಿ ನಿಲ್ಲುತ್ತದೆ. ಇಂತಹ ವಿಶ್ವಾಸವು ಹೆಚ್ಚೆಚ್ಚು ದೃಢವಾದಂತೆ, ಮಾನವನು ಹೆಚ್ಚೆಚ್ಚು ಅಧೋಗತಿಗಿಳಿದು, ಪಶುಗಳಿಗೆ ಸರಿಸಮಾನನಾಗುತ್ತಾನೆ. ಆ ಮೇಲೆ ಇಂತಹ ವಿಶ್ವಾಸವನ್ನು ಚದುರಿಸಿ, ನಿಜವಾದ ಧರ್ಮವೇ ಮಾನವನ ಜೀವನದ ತಳಹದಿ ಎಂಬ ವಿಶ್ವಾಸವನ್ನು ಹುಟ್ಟಿಸುವುದು ದುಃಸಾಧ್ಯವಾಗುತ್ತದೆ. ಇಂತಹ ವಿಕೃತ ಮನೋ ವೃತ್ತಿಯು ಮಾನವರನ್ನು ಸತ್ಯಪ್ರತಿಜ್ಞೆಯುಳ್ಳ, ಸತ್ಯಪ್ರೇಮಿಗಳಾದ ಕೆಲ ವೊಂದು ಹಿರಿಜೀವಿಗಳು ಸತ್ಯವನ್ನರುಹಿ ಸನ್ಮಾರ್ಗಕ್ಕೆ ಹಚ್ಚಲು ಪ್ರಯತ್ನಿ ಸಿದರೆ ಅದು ಅರಣ್ಯರೋದನವೇ ಆಗುವುದೆಂಬುದರಲ್ಲಿ ಸಂದೇಹವಿಲ್ಲ.

ಅಧರ್ಮದಿಂದ ನಡೆಯುವ, ಮೇಲುವರ್ಗಕ್ಕೆ ಸೇರಿದ, ಅಧಿಕಾರ ಸಂಪನ್ನರಿಗೆ ತಮ್ಮ ಕೈಯಲ್ಲಿ ಸಿಕ್ಕು ಬಳಲುತ್ತಿರುವ ಅಸಂಖ್ಯಾತ ಜನ ಸಮುದಾಯವನ್ನು ಬಿಡುಗಡೆ ಮಾಡಿ, ಅವರೂ ಶ್ರೇಷ್ಠ ಸಂಸ್ಕೃತಿಯ ಫಲ ವನ್ನು ರುಚಿಸಲು ಎಡೆಮಾಡಿಕೊಡುವುದು ದುಃಸಾಧ್ಯ. ಅದರಂತೆ, ಕೇವಲ ಆದಿಭೌತಿಕ ಸುಖಕ್ಕೆ ಮೆಚ್ಚಿ, ಆತ್ಮೋನ್ನತಿಯನ್ನು ಮರೆತು, ಒಂದು ತುಣುಕು ರೊಟ್ಟಿ ಒಂದು ತುಂಡು ಅರಿವೆಗಾಗಿ ಬಾಯ್ಬಿಟ್ಟು ದಾಸ್ಯತ್ವದಲ್ಲಿ ಹೊರಳಾಡುತ್ತಿರುವ ಅಸಂಖ್ಯಾತ ಅಜ್ಞಾನಿಗಳಿಗೂ ಇಂತಹ ಕಗ್ಗತ್ತಲೆ ಯಿಂದ ಹೊರಬೀಳುವುದು ಸಾಧ್ಯವಾಗವುದಿಲ್ಲ. ಆದರೆ ಧಾರ್ಮಿಕರ ವಿಷಯ ಬೇರೆ. ಸಮಾಜವು ಎಷ್ಟು ಹೀನಾವಸ್ಥೆಗಿಳಿದಿದ್ದರೂ, ಧರ್ಮದ ಕಾಂತಿಯು ಒಳಗೆ ಬೆಳಗುತ್ತಿರುವ ಮಹಾನುಭಾವರು, ಮಾನವನ ಜೀವನದಲ್ಲಿ ಹೊಸ ಕಳೆಯನ್ನು ತುಂಬಬಲ್ಲರು. ಇಂತಹರ ಜೀವನವು ಸುಖಮಯವಾಗುವು ದಿಲ್ಲ. ಇಂತಹರು ಕಾರಾಗೃಹದಲ್ಲಿ ಕೊಳೆಯಬೇಕಾಗುವುದು. ಗಡಿ ಪಾರಾಗಲು ಸಿದ್ಧರಿರಬೇಕಾಗುವುದು. ಗುಂಡಿನ ಸುರಿಮಳೆಯನ್ನು ಧೈರ್ಯ ವಾಗಿ ಎದುರಿಸಬೇಕಾಗುವುದು. ಇಷ್ಟಾದರೂ ಇವರು ಜೀವಿಸುವರು.

ಮಾನವವಂಶದ ಹಿತಾಹಿತಗಳು ಇಂತಹರ ಜೀವನವನ್ನೇ ಅವಲಂಬಿಸಿರು ವುವು. ಮಾನವ ಸಂಸ್ಕೃತಿ ಮಾನವಸಮಾಜ ಬೆಳೆಯುವುದು ಕುಗ್ಗುವುದು ಇವರನ್ನೇ ಕೂಡಿರುತ್ತದೆ. ಇಂತಹ ಒಬ್ಬೊಬ್ಬ ವ್ಯಕ್ತಿಗಳೂ ಕೂಡ ಅಸಂಖ್ಯಾತ ಅಜ್ಞಾನಿಗಳ ತಿಳಿಗೇಡಿತನವನ್ನೂ ಮಂಕುಬುದ್ಧಿಯನ್ನೂ ಹೊಡೆದೋಡಿಸಿ ಅವರನ್ನು ಬಂಧಮುಕ್ತರನ್ನಾಗಿ ಮಾಡುವರು. ಸಂಸಾರಸುಖಕ್ಕೆ ಮೆಚ್ಚಿದ ಹೀನ ಮಾನವನಿಗೆ ಸಾಧ್ಯವಾಗದ ಕೆಲಸ ಇಂತಹ ಧಾರ್ಮಿಕ ಜೀವಿಗಳಿಗೆ ಸಾಧ್ಯವಾಗುವುದು. ಯಾಕೆಂದರೆ ಅವರ ಸತ್ಯಪ್ರೇಮದ ಮೂಲಕ ಸತ್ಯ ಸಾಧನೆಗಾಗಿ ಅವರು ಮಾಡುವ ಕಾರ್ಯದಲ್ಲಿ, ಯಾವ ಎಡರು ತೊಡರು ಗಳೂ ಆತಂಕವಾಗಿ ಬಹುಕಾಲ ನಿಲ್ಲಲಾರವು. ಹೆಚ್ಚೆಚ್ಚು ಪೀಡಿಸಲ್ಪಟ್ಟಂತೆ, ಅವರ ಪಾವಿತ್ರ್ಯ, ಸತ್ಯಪ್ರೇಮ, ಹೆಚ್ಚೆಚ್ಚು ಉಜ್ವಲವಾಗಿ ಬೆಳಗಲಾರಂ- ಭಿಸುತ್ತವೆ. ಇಂತಹ ಮಾನವನು ರಾಜಕುಲದಲ್ಲಿ ಹುಟ್ಟಿರಲಿ, ಮಧ್ಯಮ ವರ್ಗಕ್ಕೆ ಸೇರಿದವನಾಗಿರಲಿ, ಕೀಳುವರ್ಗದಲ್ಲಿ ಜನ್ಮವೆತ್ತಿರಲಿ, ಎಲ್ಲಿದ್ದ ರೇನು ? ಅವನು ಸತ್ಯವನ್ನು ಹುದುಗಿಸಿಕೊಂಡಿರಲಾರನು. ಸತ್ಯವೇ ಅವನ ದೇವತೆ. ಸತ್ಯವನ್ನು ಬೆಳಕಿಗೆತರುವುದೇ ಅವನ ಧರ್ಮಕಾರ್ಯ. ಮರಣ, ದುಃಖಗಳು ಅವನನ್ನು ಎದೆಗುಂದಿಸಲಾರವು. ಇಂತಹ ಶ್ರೇಷ್ಠ ಧಾರ್ಮಿಕ ಜೀವಿಗಳೇ—ಹಿಂದುಸ್ಥಾನದ ಭಾಗ್ಯದೇವತೆಯಂತಿರುವ ಮಹಾತ್ಮಾ ಗಾಂಧೀಜೀಯಂತಹ ಪುಣ್ಯಪುರುಷರೇ—ಪಾಶವೀಶಕ್ತಿಯ ಬಲದಿಂದ ತಲೆ ಬಾತುಹೋದ ಉನ್ಮಾದಕರ ಉನ್ಮಾದವನ್ನೂ, ಪಿತ್ತವನ್ನೂ ಇಳಿಸಿ ಅವರನ್ನು ಸತ್ಪಥಕ್ಕೆಳೆಯುವರು. ಇಂತಹರ ಸಾಮಾಜಿಕ, ಸಾಂಪತ್ತಿಕ ಸ್ಥಿತಿ ಏನಿ ದ್ದರೂ, ವಿದ್ಯಾಭ್ಯಾಸವು ಎಷ್ಟು ಕಡಿಮೆಯಾಗಿದ್ದರೂ ಸಂಸ್ಕೃತಿಯ ಬೆಳಕು ಇವರಲ್ಲಿ ಬೆಳಕನ್ನುಂಟುಮಾಡುತ್ತದೆ. ಇವರು, ಬೆಂಕಿಯು ಒಣಕಟ್ಟಿಗೆ ಯನ್ನು ತೀವ್ರವಾಗಿ ಖಂಡಿತವಾಗಿ ಹೊತ್ತಿಸಿಬಿಡುವಂತೆ, ಅಧರ್ಮದಿಂದ ಬಾಡಿಹೋದ ಜೀವಿಗಳಲ್ಲಿ ಪ್ರಚಂಡ ಸ್ಫೂರ್ತಿಯ ಬೆಂಕಿಯನ್ನು ಹೊತ್ತಿಸಿ ಅವರು ಕಾರ್ಯಾಸಕ್ತರಾಗುವಂತೆ ಮಾಡಬಲ್ಲರು.

ಮಾನವಸಮಾಜವು ಬಹು ಘನತೆಗೇರಿ ಈಗ ತುಸು ಹಿಮ್ಮೆಟ್ಟುವಂ ತಿದೆ. ಇಂತಹ ಸಮಯದಲ್ಲಿ ಇಂಥ ಪುಣ್ಯಜೀವಿಗಳು, ಧಾರ್ಮಿಕರು, ಅದನ್ನು ಎತ್ತಿಹಿಡಿದು ದಾರಿಗೆ ಹಚ್ಚಿದರೆ ಮಾನವಸಮಾಜ, ಮಾನವ

ಸಂಸ್ಕೃತಿ ಅಚ್ಚಳಿಯದೆ ಬದುಕಿ ಬಾಳುವವಲ್ಲದೆ, ಈಗ ಬಂದಿರುವ ಕಂಟಕವನ್ನು ಕಿತ್ತೊಗೆದು ಭರದಿಂದ ಮುಂದೆ ಸಾಗಿ ಪರಿಪೂರ್ಣತೆಯ ಉನ್ನತ ಶಿಖರವನ್ನು ಮುಟ್ಟುವವು. ಇದುವೆ ಧರ್ಮದ ಸಹಾಯದಿಂದ ಮಾನವ ಸಂಸ್ಕೃತಿ–ಮಾನವ ಸಮಾಜ ಬೆಳೆಯುವ, ಬೆಳೆದು ಬಾಳುವ ರೀತಿ.

ಸಮಾಜ–ಸಂಸ್ಕೃತಿಗಳ ಬೆಳೆವಣಿಗೆಯ ಇತಿಹಾಸವನ್ನು ನಾವು ಪರಿಶೀಲಿಸಿದರೆ ಅದರಲ್ಲಿಯ ಅನೇಕ ಏರಿಳಿತಗಳನ್ನು ಕಾಣದಿರಲಾರೆವು. ಸಮಾಜ-ಸಂಸ್ಕೃತಿಗಳ ಉನ್ನತಿಯಾಗಬೇಕಾದರೆ ಶ್ರೇಷ್ಠ ಜೀವಿಗಳು ಶ್ರೇಷ್ಠ ತತ್ತ್ವಗಳನ್ನು ಸಮಾಜದ ಮುಂದಿರಿಸಬೇಕೆಂಬುದನ್ನೂ ನಾವು ಮರೆಯಲಾರೆವು. ಈಗ ಆದಿಭೌತಿಕ ಕ್ಷೇತ್ರದಲ್ಲಿ ಸಮಾಜದ ಬೆಳೆವಣಿಗೆ ಸಾಕಷ್ಟಾಗಿದೆ ಎಂದು ಹೇಳಬಹುದು. ಅಷ್ಟೇ ಅಲ್ಲ—ಆ ಕ್ಷೇತ್ರದಲ್ಲಿ ಸಮಾಜದ ಬೆಳೆವಣಿಗೆಯ ಅತಿರೇಕವಾಗಿದೆ ಎಂದೂ ಹೇಳಬಹುದಾಗಿದೆ. ಆದಿಭೌತಿಕ ಸುಖವನ್ನೇ ಧ್ಯೇಯವನ್ನಾಗಿಟ್ಟುಕೊಂಡು ಸಮಾಜವು ಇನ್ನೂ ಬೆಳೆಯುತ್ತಿದ್ದರೆ ಕಗ್ಗತ್ತಲೆಯ ಯುಗವು ಮತ್ತೆ ಪ್ರಾರಂಭವಾಗುವುದೆಂಬುದರಲ್ಲಿ ಸಂದೇಹವಿಲ್ಲ. ಆದಿಭೌತಿಕ ಸುಖವೇ ಮಾನವ ಜೀವನದ ಸರ್ವಸ್ವವೆಂದು ಆಧುನಿಕರು ತಮ್ಮ ಪಾಶವೀ ಶಕ್ತಿಯ ಉನ್ಮತ್ತತೆಯಿಂದ ದೃಢವಾಗಿ ನಂಬಿರುವುದರಿಂದಲೇ ಜಗತ್ತಿನಲ್ಲಿ ಈ ಹೊತ್ತು ಕೊಲೆ, ಸುಲಿಗೆ, ಭಯಾನಕ ಯುದ್ಧ ಮುಂತಾದ ಅನಿಷ್ಟವು ಪ್ರಾಪ್ತವಾಗಿದೆ. ಇಂತಹ ಅನಿಷ್ಟ ಪರಿಸ್ಥಿತಿಯನ್ನು ಹೋಗಲಾಡಿಸಲು ಆದಿಭೌತಿಕ ಸುಖಕ್ಕಿಂತಲೂ ಆಧ್ಯಾತ್ಮಿಕ ಸುಖವೇ ಶ್ರೇಷ್ಠವಾದದ್ದೆಂಬ ಬೀಜಮಂತ್ರವನ್ನು ಜಪಿಸುವ ಮಹರ್ಷಿಯರು ಮುಂದೆ ಬರಬೇಕು. ಆದಿಭೌತಿಕ ಸುಖವು ಆಧ್ಯಾತ್ಮಿಕ ಸುಖಕ್ಕೆ ಸೋಪಾನ ಮಾರ್ಗವಾಗಿರಬೇಕೆಂಬ ಮಂತ್ರೋಪದೇಶಕರ ಬೋಧನೆ ಈಗ ಅತ್ಯಾವಶ್ಯಕ. ಪುಣ್ಯಭೂಮಿಯಾದ ಭಾರತವರ್ಷದಲ್ಲಿ ಮಹಾತ್ಮಾ ಗಾಂಧೀಜಿಯವರಂತಹ ಮಹಾಪುರುಷರು ಇಂತಹ ಕೆಲಸವನ್ನು ಕೈಕೊಂಡುದನ್ನು ನೋಡಿದರೆ, ಮಾನವಸಮಾಜವು ಪತಿತವಾಗಲಾರದು; ಇಂದಿನ ಅನಿಷ್ಟ ಪರಿಸ್ಥಿತಿಯನ್ನು ದೂರೀಕರಿಸಿ, ಮಾನವಸಂಸ್ಕೃತಿ ಉನ್ನತಿಯ ಮೆಟ್ಟಲುಗಳನ್ನೇರಿ, ಸಮಾಜದ—ಅದರೊಳಗಿನ ವ್ಯಕ್ತಿಗಳ-ಹಿತವನ್ನು ಸಾಧಿಸುತ್ತ ಒಳ್ಳೇ ವೈಭವದಿಂದ ವಿರಾಜಿಸುವುದೆಂಬ ಒಲವಾದ ಆಸೆ ಅಂಕುರಿಸು

ತ್ತದೆ. ಇಂತು ಸಮಾಜ-ವಿಕಾಸಕ್ರಮವು ಮಾನವ ವಂಶವು ಇನ್ನೂ ಬೆಳೆದು ಘನತೆಯನ್ನು ಪಡೆಯಬಹುದಾಗಿದೆ ಎಂಬ ಮಾತನ್ನು ಸ್ಪಷ್ಟಗೊಳಿಸುತ್ತದೆ. ಅದು ಇಂತಹ ಘನತೆಯನ್ನು ಪಡೆಯಲು ಪ್ರತಿಯೊಬ್ಬ ಮಾನವನೂ ಧೈರ್ಯ ಸಾಹಸಗಳಿಂದ ಕಾರ್ಯತತ್ಪರನಾಗಿ ಸಹಾಯವನ್ನೀಯಬೇಕೆಂದೂ ಸೂಚಿಸುತ್ತದೆ. ಪ್ರಗತಿಗಾಗಿ ಇಂತಹ ಕಾರ್ಯವನ್ನು ಕೈಕೊಳ್ಳುವ ಮಾನವನೂ—ಮಾನವಸಮಾಜವೂ-ಧನ್ಯವಾದುದು.

—

# ಸಾಂಪತ್ತಿಕ ಅಭಿವೃದ್ಧಿಯ ಅನುಕ್ರಮಣಿಕೆ



| ಸಂಸ್ಕೃತಿಯ ಅವಸ್ಥೆಗಳು | ಉಪ ಅವಸ್ಥೆಗಳು | ಬೇರೆ ಬೇರೆ ಅವಸ್ಥೆಗಳಿಗೆ ಸಂಬಂಧಿಸಿದವರು | ಆಹಾರೋತ್ಪಾದನ | ಮುಖ್ಯ ಉಪಕರಣಗಳು | ಪರಿಶ್ರಮದ ಸಂಘಟನೆ | |
|---|---|---|---|---|---|---|
| | | | | | ಸಂಘಟನೆಯ ವಿಧ | ಪೃಥಕ್ಕರಣ |
| ೧. ಕ್ರೂರಸ್ಥಿತಿ (Savagery) | (ಅ) ಕೀಳು ತರಗತಿ | ಉಪಲಬ್ಧವಾಗಿಲ್ಲ | ಸ್ವಾಭಾವಿಕ ಆಹಾರ. ಕಾಡು ಪಸ್ಯಗಳ ಸಂಚಯ. ಬೇಟೆಯಾಡುವುದು. ಮೀನ ಹಿಡಿಯುವುದು. | ಬೆಂಕಿಯನ್ನು ಕಂಡುಹಿಡಿಯುವವರೆಗೆ ಒರಟುಕಟ್ಟಿಗೆ ಕಲ್ಲಿನ ಉಪಕರಣಗಳು. | ೧ ಸ್ವಯಂಸಿದ್ಧ ಪ್ರಾಚೀನ ಬಣಗಳು | ಇಲ್ಲ |
| | (ಆ) ನಡುವಿನ ತರಗತಿ; ಕೀಳು ಬೇಟೆಗಾರರು | ಆಸ್ಟ್ರೇಲಿಯನ್ನರು ಕಂಟಿಯೊಳಗಿರುವವರು. ಎಸ್ಕಿಮೊ ಮುಂ. | ,, | ಹಳೆಯ ಕಲ್ಲಿನ ಯುಗ | ೨ ಮಿತವ್ಯಯವನ್ನರಿತ, ಸಂತರದ ಬಣಗಳು. | ಲಿಂಗಗಳ ಪೃಥಕ್ಕರಣ |
| | (ಇ) ಮೇಲ್ತರಗತಿ; ಮೇಲ್ತರಗತಿಯ ಬೇಟೆಗಾರರು | ಉತ್ತರ ಅಮೇರಿಕೆಯ ಬೇಟೆಗಾರರು | ,, | ,, | ೨ ,, | ,, |
| ೨ ಕಾಡು ಸ್ಥಿತಿ | (ಅ) ಕೀಳು ತರಗತಿ; ಕುರುಬರು ಮತ್ತು ಕೀಳು ತರಗತಿಯ ಒಕ್ಕಲುತನ ಮಾಡುವವರು | ಏಶಿಯದ ಮತ್ತು ಆಫ್ರಿಕೆಯ ದನಗಾರರು; ರೆಡ್ ಇಂಡಿಯನ್‌ರು; ಮಲಯಾದಲ್ಲಿ ಇರುವವರು | ಒಕ್ಕಲುತನ, ಹೈನದಿಂದ ಕೃತ್ರಿಮ ಆಹಾರದ ಪೂರೈಕೆ. | ಹೆಚ್ಚು ಸುಧಾರಿಸಿದ ಕಲ್ಲಿನ ಯುಗ. (ಪಾತ್ರೆಗಳ ನಿರ್ಮಾಣ; ನೇಯುವುದು.) | ೨ ,, | ,, |
| | (ಆ) ಮೇಲ್ತರಗತಿ- ಮೇಲ್ತರಗತಿಯ ಒಕ್ಕಲುತನ ಮಾಡುವವರು. (ನಾಗರಿಕತೆಗೆ ಸ್ಥಿತ್ಯಂತರ-ಅರ್ಧ ಸುಧಾರಿಸಿದ ರಾಷ್ಟ್ರಗಳು.) | ಓಸಿಯಾನಿಯದ ಮತ್ತು ಆಫ್ರಿಕೆಯ ಒಕ್ಕಲುತನ ಮಾಡುವವರು. ಗ್ರೀಕರು. ಅರಸರನ್ನು ಮಾಡಿಕೊಂಡಿದ್ದ ರೋಮನ್‌ರು. ಜರ್ಮನ್‌ರು. | ,, | — ಮಧ್ಯಯುಗಕ್ಕೆ ಸ್ಥಿತ್ಯಂತರ | ೩ ಮೊದಲಿನ ಔದ್ಯೋಗಿಕ ಅವಸ್ಥೆ. ಹಳ್ಳಿಗಳ ಮತ್ತು ಪ್ರಭುವಿನ ಸಂಪತ್ತಿನ ವಿಷಯ. | ಪುರುಷರ ಕೆಲಸದಲ್ಲಿಯೇ ವೈವಿಧ್ಯ. |
| ೩ ನಾಗರಿಕತೆ | (ಅ) ಕೆಳಗಿನ ತರಗತಿ; ಕೆಳತರಗತಿಯ ನಾಗರಿಕತೆ | ಅಮೇರಿಕೆಯ ಪ್ರಾಚೀನ ಸಂಸ್ಕೃತಿ, ಬೆಬಿಲೋನಿಯನ್. ಇಜಿಪ್ತ, ಜರ್ಮನ್, ಚೀನ ಹಿಂದುಸ್ಥಾನದಸಂಸ್ಕೃತಿಗಳು. | ಉದ್ಯಾನ ಕೃಷಿ. ರಂಟೆಯ ಕೃಷಿ. | ಮಧ್ಯಯುಗಕ್ಕೆ ಸ್ಥಿತ್ಯಂತರ. (ತಾಮ್ರ, ಕಂಚು, ಕಬ್ಬಿಣ) ಲೋಹ ಯುಗ | ೪ ಹೆಚ್ಚಿನ ತರಗತಿಯ ಔದ್ಯೋಗಿಕ ಅವಸ್ಥೆ. ಪಟ್ಟಣಗಳ ಸಂಪತ್ತು. | ,, |
| | (ಆ) ನಡುವಿನ ತರಗತಿ- ನಡುನಾಗರಿಕತೆ | ೧೮ನೇ ಶತಮಾನದ ವರೆಗಿನ ಗ್ರೀಕ, ರೋಮನ್. ಜರ್ಮನ್ ಹಿಂದೀ, ಸಂಸ್ಕೃತಿಗಳು | ,, | ಲೋಹ ಯುಗ. (ತಾಮ್ರ, ಕಂಚು, ಕಬ್ಬಿಣ) | ೫ ಮೊಟ್ಟಮೊದಲಿನ ಬಂಡವಲುಗಾರಿಕೆ. ರಾಷ್ಟ್ರೀಯ ಸಂಪತ್ತಿನ ಪ್ರಾರಂಭ. | ,, |
| | (ಇ) ಮೇಲ್ತರಗತಿ- ಹೆಚ್ಚಿನ ನಾಗರಿಕತೆ | ೧೮ನೇಶತಮಾನದ ವರೆಗೆ | ವ್ಯಾಪಾರದ ಬೆಳೆವಣಿಗೆ | ಯಾಂತ್ರಿಕ ಯುಗದ ಆರಂಭ | ೬ ಬಂಡುವಲುಗಾರಿಕೆಯ ನಡುವಿನ ಅವಸ್ಥೆ. ರಾಷ್ಟ್ರೀಯ ಸಂಪತ್ತು. | ಸ್ತ್ರೀಯರ ಕೆಲಸದಲ್ಲಿಯೂ ವೈವಿಧ್ಯ. |
| ೪ ಸಾಮಾಜಿಕ ಬೆಳೆವಣಿಗೆ | (ಅ) ಸಮಾಜದ ಬೆಳೆವಣಿಗೆಯ ಕೆಳತರಗತಿ | ಈ ಶತಮಾನದ ಜನರು | — | — | ೭ ಬಂಡುವಲಗಾರಿಕೆಯ ಅತ್ಯುಚ್ಚ ಸ್ಥಿತಿ. ಅಂತರ ರಾಷ್ಟ್ರೀಯ ಮಿತವ್ಯಯ. | — |
| | (ಆ) ನಡುವಿನ ತರಗತಿ | — | — | — | — | — |
| | (ಇ) ಮೇಲ್ತರಗತಿ | — | — | — | — | — |